# ಸಾಹಿತ್ಯ ಮತ್ತು ಸಮಾಜವಾದ

(ಕನ್ನಡ ಎಂ.ಫಿಲ್. ಪದವಿಗಾಗಿ
ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸುತ್ತಿರುವ ನಿಬಂಧ)

ಸಂಶೋಧಕರು :

ನಾಗಮಣಿ.ಕೆ.

ಮಾರ್ಗದರ್ಶಕರು :

ಪ್ರೊ. ಶಿವರಾಮ್ ಕಾಡನಕುಪ್ಪೆ
ಕನ್ನಡ ಪ್ರಾಧ್ಯಾಪಕರು
ವಿದ್ಯಾವರ್ಧಕ ಪ್ರಥಮ ದರ್ಜೆ ಕಾಲೇಜು, ಮೈಸೂರು.



ಕರ್ನಾಟಕ ಸಂಘ (ರಿ.) ಮಂಡ್ಯ.
ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ
(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದುದು)
೨೦೦೭-೨೦೦೮



542

# ಮಹಿಳೆ ಮತ್ತು ಸಮಾನತೆ

(ಕನ್ನಡ ಎಂ.ಫಿಲ್. ಪದವಿಗಾಗಿ

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸುತ್ತಿರುವ ನಿಬಂಧ)


ಸಂಶೋಧಕರು

ನಾಗಮಣಿ .ಕೆ





ಮಾರ್ಗದರ್ಶಕರು

ಪ್ರೊ॥ ಶಿವರಾಮ್‌ಕಾಡನಕುಪ್ಪೆ

ಕನ್ನಡ ಪ್ರಾಧ್ಯಾಪಕರು

ವಿದ್ಯಾವರ್ಧಕ ಪ್ರಥಮ ದರ್ಜೆ ಕಾಲೇಜು

ಮೈಸೂರು







ಕರ್ನಾಟಕ ಸಂಘ (ರಿ), ಮಂಡ್ಯ.

ಎಂ.ಎಲ್.ಶ್ರೀಕಂಠೇಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)

೨೦೦೭-೨೦೦೮

# ಮಾರ್ಗದರ್ಶಕರ ಪ್ರಮಾಣ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ **೨೦೦೭-೦೮**ನೇ ಸಾಲಿಗೆ **ಕನ್ನಡ ಎಂ.ಫಿಲ್**. ಪದವಿಗಾಗಿ **"ಮಹಿಳೆ ಮತ್ತು ಸಮಾನತೆ"** ಎಂಬ ಶೀರ್ಷಿಕೆಯ ನಿಬಂಧವನ್ನು ಸಿದ್ಧಪಡಿಸಿರುತ್ತಾರೆ. ಈ ನಿಬಂಧವಾಗಲಿ, ಅಧ್ಯಾಯವಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತಕಾಲಿಕೆಗಳಲ್ಲಿ ಪ್ರಕಟಿಸಲ್ಪಟ್ಟಿಲ್ಲ. ಈ ಸಂಶೋಧನಾ ನಿಬಂಧವನ್ನು ಕನ್ನಡ ಎಂ.ಫಿಲ್. ಪದವಿಗೆ ಸಂಬಂಧಿಸಿದಂತೆ ಮೌಲ್ಯ ಸ್ವೀಕಾರಕ್ಕಾಗಿ ಒಪ್ಪಿಸುತ್ತಿರುವುದಕ್ಕೆ ನನ್ನ ಒಪ್ಪಿಗೆ ಇದೆ.

**ಮಾರ್ಗದರ್ಶಕರ ಸಹಿ**

(ಪ್ರೊ. ಹೆಚ್.ಶಿವರಾಮಕಾಡನಕುಪ್ಪೆ)

ಸ್ಥಳ : ಮೈಸೂರು

ದಿನಾಂಕ : ೨೨/೧/೨೦೦೮

# ಅಭ್ಯರ್ಥಿಯ ಘೋಷಣಾ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್.ಶ್ರೀಕಂಠೇಗೌಡ ಸಂಶೋಧನಾ ಕೇಂದ್ರದಲ್ಲಿ **೨೦೦೭-೦೮**ನೇ ಸಾಲಿಗೆ ಕನ್ನಡ ಎಂಪಿಲ್.ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ.ಫಿಲ್. ಅಧ್ಯಯನದ ಅಂಗವಾಗಿ ಸಂಶೋಧನಾನಿಬಂಧ ರಚಿಸಲು **"ಮಹಿಳೆ ಮತ್ತು ಸಮಾನತೆ"** ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ***ಪ್ರೊ.ಶಿವರಾಮ್ ಕಾಡನಕುಪ್ಪೆ*** ಕನ್ನಡ ಪ್ರಾಧ್ಯಾಪಕರು, **ವಿದ್ಯಾವರ್ಧಕ ಪ್ರಥಮ ದರ್ಜೆ ಕಾಲೇಜು**, ಮೈಸೂರು. ಇವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲಿ, ನಿಬಂಧದ ಅಧ್ಯಾಯವನ್ನಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತಕಾಲಿಕೆಘಳಲ್ಲಿ ಪ್ರಕಟಿಸಿಲ್ಲವೆಂದು ಈ ಮೂಲಕ ದೃಡೀಕರಿಸುತ್ತೇನೆ.

ಕನ್ನಡ ವಿಶ್ವವಿದ್ಯಾಲಯವು ನೀಡುವ **ಎಂ.ಫಿಲ್**. ಪದವಿಗಾಗಿ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

ನಾಗಲಕ್ಷ್ಮಿ ಕೆ.
**ಸಂಶೋಧನಾ ವಿದ್ಯಾರ್ಥಿ**

**ಸ್ಥಳ :** ಮಂಡ್ಯ

**ದಿನಾಂಕ :** ೨೨|೧|೨೦೦೮

## ಪರಿವಿಡಿ

# ಪರಿವಿಡಿ

# ಮಹಿಳೆ ಮತ್ತು ಸಮಾನತೆ

## ಅಧ್ಯಾಯ - ೧

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

೨೦ನೇ ಶತಮಾನದ ಜನಪರ ಚಿಂತನೆಗಳಲ್ಲಿ ಬಹಳ ಮುಖ್ಯವಾದುದು ಮಹಿಳಾ ಪರ ಚಿಂತನೆ. ೧೯ನೇ ಶತಮಾನದ ಆದಿಭಾಗದಲ್ಲಿ ಮಾನವತೇಯ ವಿರುದ್ದ ನಡೆಯಲಾಗುತ್ತಿದ್ದ ಶೋಷಣೆಗಳನ್ನು ವಿರೋಧಿಸುವ ಧ್ವನಿಗಳು ಮೂಡಲಾರಂಭಿಸಿದವು. ಮನುಷ್ಯ – ಮನುಷ್ಯನ ಮೇಲೆ ಮಾಡುವ ಕ್ರೌರ್ಯ ಅಮಾನವೀಯ ಕೃತ್ಯವೆಂದು, ಮಾನವನ ಮೂಲಭೂತ ಹಕ್ಕುಗಳ ದಮನವೆಂದು ಕರೆದು, ಮಾನವ ಹಕ್ಕುಗಳನ್ನು ಎತ್ತಿಹಿಡಿಯುವ ಹೋರಾಟಗಳು ಸಿದ್ದಾಂಗಳು ಸೃಷ್ಠಿಗೊಂಡವು ಇದಕ್ಕೆ ಪೂರಕವಾಗಿ ಜಗತ್ತಿನಾದ್ಯಂತ ಶಿಕ್ಷಣವನ್ನು ವ್ಯವಸ್ಥಿತವಾಗಿ ನೀಡುದುದರ ಪರಿಣಾಮವಾಗಿ ಮೂಡಿಬಂದ ಹೊಸ ಆಲೋಚನೆಗಳು ಕಾರಣವಾದವು. ಈ ಜನಪರ ಹೋರಾಟಗಳಲ್ಲಿ ಅತ್ಯಂತ ಮುಖ್ಯವಾದುದ್ದು. ಲಿಂಗಸಮಾತೆಯ ಬಗ್ಗೆ ನಡೆದ ಆಂದೋಲನವು ಒಂದು, ಯೂರೋಪಿನಲ್ಲಿ ಮಹಿಳಾ ಶಿಕ್ಷಣದ ಕಾರಣದಿಂದಾಗಿ ಪ್ರಾರಂಭಗೊಂಡ ಸ್ತ್ರೀವಾದಿ ಚಿಂತನೆ ಇಂದು ಜಗತ್ತಿನಾದ್ಯಂತ ತನ್ನ ಅರಿವಿನ ಮೂಲಕ ಜಾಗ್ರತಿಯನ್ನು ಮೂಡಿಸಿದೆ. ವ್ಯವಸ್ಥೆಯ ವಿರುದ್ದದ ಎಲ್ಲಾ ಹೋರಾಟಗಳನ್ನು ಮತ್ತು ಸಿದ್ದಾಂತಗಳನ್ನು ಎಡಪಂಥಿಯವೆಂದು ಕರೆಯಲಾಗುತ್ತಿದೆ. ಮೂಲತಃ **'ಎಡಪಂಥಿಯ'** ವೆಂದರೆ 'ಸ್ತ್ರೀ'ಪರ ಎಂದೇ ಅರ್ಥ ಪ್ರಾಚೀನ ಯೂರೋಪಿನಲ್ಲಿ ಮೊಟ್ಟಮೊದಲ ಬಾರಿಗೆ ಪುರುಷರ ದಬ್ಬಾಳಿಕೆಯನ್ನೂ ಧರ್ಮ ಮತ್ತು ಸಂಪ್ರದಾಯಗಳ ಕಾರಣದಿಂದಾಗಿ ಮಹಿಳೆಯರು ಬದುಕುತ್ತಿದ್ದ ಸ್ವಾತಂತ್ರ್ಯ ರಹಿತ ಜೀವನದಿಂದ ಮುಕ್ತಗೊಳ್ಳಲು ಪ್ರಪ್ರಥಮ ಬಾರಿಗೆ ಮಹಿಳೆಯರು ಪ್ರತಿಭಟಿಸಿದರು ಈ ಪ್ರತಿಭಟನೆಯನ್ನು ಚರ್ಚುಗಳು ಎಡಪಂಥಿಯ ಪ್ರತಿಭಟನೆ ಎಂದು ಕರೆದವು. ಕಾರಣ ಹೆಣ್ಣು ದೈವಸೃಷ್ಟಿಯ ಎಡಭಾಗವೆಂದೂ ಗಂಡು ಬಲಭಾಗವೆಂದು ನಂಬಿದುದೇ ಆಗಿತ್ತು.

ಆದರೆ ಪ್ರಾಚೀನ ಕಾಲದಿಂದಲೂ ಇಂದಿನವರೆಗೆ ಹೆಣ್ಣಿಗೆ ಯಾವುದೇ ಸ್ವಾತಂತ್ರ್ಯವನ್ನು ನೀಡದೇ ಅವಳನ್ನು ಗೃಹಕೃತ್ಯ ಮಾಡುವ ಸೇವಕಳೆಂದು, ಸಂತಾನೋತ್ಪತ್ತಿಯ ಸಾಧನವೆಂದು ಆನಂದ ಮೂಲ ಭೋಗವಸ್ತುವೆಂದು ಭಾವಿಸಿ ನಿರಂತರವಾಗಿ ಶೋಷಣೆ ಮಾಡಿಕೊಂಡು ಬರಲಾಯಿತು. ಪುರುಷಜಗತ್ತು ಅವಳನ್ನು **'ಎರಡನೇಯ ಲಿಂಗವೆಂದು'** ಕರೆದು ಪುರುಷನ ಸಮಾನವಾಗಿ ಕಾಣಲು ನಿರಾಕರಿಸಿತು.ಈ ಎಲ್ಲಾ ಕಾರಣಗಳಿಂದ ಮಹಿಳೆಯ ಬೌದ್ಧಿಕ ವಿಕಾಸವಾಗಲು ಸಾಧ್ಯವಾಗಿದೇ ಅವಳು ಆರ್ಥಿಕ ಸಾಮಾಜಿಕ, ಧಾರ್ಮಿಕ, ರಾಜಕೀಯ ಮತ್ತು ಕೌಟುಂಬಿಕ ವಿಷಯಗಳಲ್ಲಿ ಅಭಿಪ್ರಾಯ ನೀಡುವ ತೀರ್ಮಾನ ಕೈಗೊಳ್ಳುವ ಎಲ್ಲಾ ಹಕ್ಕುಗಳನ್ನು ಕಳೆದುಕೊಂಡು ಕೇವಲ ದುಡಿಯುವ ಸ್ವತ್ತಾಗಿ ಪರಿಗಣಿತಳಾದಳು.

ಆದರೆ ೨೦ನೇ ಶತಮಾನ ದೀನದಲಿತರ, ಕೂಲಿಕಾರ್ಮಿಕರ ಪಾಲಿಗೆ ನವಜೀವನದ ಸಾಧ್ಯತೆಗಳನ್ನು ನೀಡಿದಂತೆಯೇ ಮಹಿಳೆಯರ ಪಾಲಿಗು ಅರಿವನ್ನು ಸ್ಫೋಟಿಸಿದ ಯುಗವಾಯಿತು. ಮಹಿಳೆ ಲಿಂಗ ಸಮಾನತೆಯ ಬಗ್ಗೆ ಮಾತನಾಡಿ ಬೌದ್ಧಿಕವಾಗಿ ಮತ್ತು ಶಾರೀರಿಕವಾಗಿ ಪುರುಷನಿಗೆ ಯಾವುದೇ ವಿಷಯದಲ್ಲು ಎರಡನೇಯವಳಲ್ಲ, ಅವಳು ಅವನಿಗೆ ಸರಿಸಮಾನಳು ಎಂದು ತನ್ನ ಬೌದ್ಧಿಕ ಎಚ್ಚರದಿಂದ ನಿರೂಪಿಸ್ಸ ತೊಡಗಿದಳು. ಅರ್ಥಪೂರ್ಣ ಶಿಕ್ಷಣದಿಂದ ಮಹಿಳೆ ಸಂಘಟಿತಳಾಗಿ ಲಿಂಗಸಮಾನತೆಯ ತಳಹದಿಯ ಮೇಲೆ ಮಾನವ ಸಮಾಜದ ಒಳಿತು ಅಡಗಿದೆ ಎಂಬುದನ್ನು ಪ್ರತಿಪಾದಿಸ ತೊಡಗಿದಳು. ಸೃಷ್ಟಿಯ ಅರ್ಧಭಾಗದಷ್ಟಿರುವ ಮಹಿಳೆಯರನ್ನು ಚರಿತ್ರೆಯ ಉದ್ದಕ್ಕೂ ಪುರುಷ ಜಗತ್ತು ಶೋಷಣೆ ಮಾಡಿರುವುದನ್ನು ಪ್ರಶ್ನಿಸಿದ ಮೇಲೆ ತನ್ನ ಹಕ್ಕುಗಳ ಪ್ರತಿಪಾದನೆಗಾಗಿ ನಡೆಸಿದ ಸಂಘಟಿತ ಬೌದ್ಧಿಕ ಚಳುವಳಿಯನ್ನು ಇಂದು ನಾವು ಲಿಂಗಸಮಾನತಾ ಹೋರಾಟವೆಂದು ಸ್ತ್ರೀಪರ ಚಳುವಳಿಯೆಂದು ಕರೆಯುತ್ತೇವೆ. ಈ ಹೋರಾಟಕ್ಕೆ ತಳಹದಿಯಾಗಿ ಕೆಲಸ ಮಾಡಿದ ಸಿದ್ಧಾಂತವನ್ನು ಸ್ತ್ರೀವಾದಿ ಚಿಂತನೆಯೆಂದು ಗುರುತಿಸುತ್ತೇವೆ.

ಪ್ರಸ್ತುತ ನಿಬಂಧದಲ್ಲಿ ಪ್ರಾಚೀನ ಕಾಲದಿಂದ ಇದುವರೆಗೆ ಚರಿತ್ರೆಯಲ್ಲಿ ಮಹಿಳೆ ಹಾದುಬಂದ ಸ್ಥೂಲ ಪರಿಚಯವನ್ನು ಮಾಡಿಕೊಡಲಾಗಿದೆ. ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಮಹಿಳೆಗಿದ್ದ ಸ್ಥಾನಮಾನಗಳು ಕ್ರಮೇಣವಾಗಿ ಪುರುಷ ಪ್ರಾಬಲ್ಯಕ್ಕೆ ಸಿಕ್ಕಿ, ಹೇಗೆ ದಮನಕ್ಕೆ ಒಳಗಾದವು ಎಂಬುದನ್ನು ಗುರಿತಿಸಲಾಗಿದೆ ಅದರಲ್ಲೂ ಮಧ್ಯಯುಗದಲ್ಲಿ ಯೂರೋಪ್ ಮತ್ತು ಭಾರತಗಳಲ್ಲಿ ಮಹಿಳೆಯನ್ನು ಭೋಗವಸ್ತುವನ್ನಾಗಿ ಕಂಡ ಬಗ್ಗೆ, ಗುಲಾಮರಿಗಿಂತ ಕಡೆಯಾಗಿ ಕಂಡು ಅವಳನ್ನು ಶೋಷಣೆ ಮಾಡಿದ ರೀತಿ, ಮತ ಧರ್ಮ ಮತ್ತು ಸಂಪ್ರದಾಯ ಮುಂತಾದ ಅಮೂರ್ತ ಕಟ್ಟುಪಾಡುಗಳಿಂದ ಅವಳನ್ನು ಹಿಂಸಿಸಿದ ಕ್ರೂರತೆಯನ್ನು ಈ ನಿಬಂಧದಲ್ಲಿ ವಿಶ್ಲೇಷಣೆ ಮಾಡಲಾಗಿದೆ.

೨೦ನೇ ಶತಮಾನದ ಆದಿಭಾಗದಿಂದ ಪಾಶ್ಚಾತ್ಯ ಜಗತ್ತಿನಲ್ಲಿ ಅರಿವು ಮೂಡಿಸಿಕೊಂಡ ಹೆಣ್ಣು ತನ್ನ ಹಕ್ಕುಗಳಿಗಾಗಿ ನಡೆಸಿದ ಹೋರಾಟದ ಚಿತ್ರಣವನ್ನು ಈ ನಿಬಂಧದಲ್ಲಿ ನೀಡಲಾಗಿದೆ. ಅದೇ ರೀತಿ ಆಧುನಿಕ ಭಾರತದಲ್ಲಿ ನಡೆದ ಮಹಿಳಾಪರ ಹೋರಾಟಗಳನ್ನು ಗುರ್ತಿಸಲಾಗಿದೆ.

ಪ್ರಾರಂಭದಿಂದಲೂ ಮಹಿಳೆಯ ದುಡಿಮೆಯನ್ನು ಶ್ರಮದ ಎರಡನೆಯ ಸ್ಥಾನದಲ್ಲಿಟ್ಟು ಮೌಲ್ಯಮಾಪನ ಮಾಡಲಾಗಿದೆ. ದುಡಿಮೆಗೆ ನೀಡುವ ಕೂಲಿಯಲ್ಲಿ ಈ ಅಂಶವನ್ನು ಸ್ಪಷ್ಟವಾಗಿ ಗುರುತಿಸಬಹುದು. ಸಾಮಾನ್ಯವಾಗಿ ಈ ಆರ್ಥಿಕ ಅಸಮಾನತೆಯು ಪುರುಷ ಪಾರಮ್ಯವನ್ನು, ಪುರುಷಶಕ್ತಿಯನ್ನು ವೈಭವೀಕರಿಸುವ ಮನೋಧರ್ಮದಿಂದ ಮೂಡಿದುದಾಗಿದೆ. ಇದು ಪ್ರಧಾನವಾಗಿ ಇಂದಿಗೂ ಅಸಂಘಟಿತ ವಲಯಗಳಲ್ಲಿ ದುಡಿಯುವ ಮಹಿಳೆಯರಲ್ಲಿ ಕಾಣಬಹುದು. ಈ ದೃಷ್ಟಿಯಿಂದ ಅಸಂಘಟಿತ ವಲಯಗಳಲ್ಲಿ ದುಡಿಯುತ್ತಿರುವ ಮಹಿಳೆಯ ಸ್ಥಾನಮಾನಗಳನ್ನು ವಿವೇಚಿಸಲಾಗಿದೆ.

ಹಾಗೆಯೇ ಒಟ್ಟಾರೆಯಾಗಿ ಸಂಘಟಿತ ಮತ್ತು ಅಸಂಘಟಿತ ದುಡಿಯುವ ಮಹಿಳೆಯ ಸ್ಥಾನಮಾನಗಳನ್ನು ಮತ್ತು ಸಂವಿಧಾನಬದ್ಧವಾಗಿ ಅವಳಿಗಿರುವ ಹಕ್ಕುಗಳನ್ನು ಈ ನಿಬಂಧದಲ್ಲಿ ವ್ಯಾಪ್ತಿಯಲ್ಲಿ ವಿವೇಚಿಸಲಾಗಿದೆ.

ಮಾನವ ಕುಟುಂಬ ವ್ಯವಸ್ಥೆ ಪ್ರಾರಂಭವಾದಾಗಿನಿಂದ ಇದುವರೆಗೆ ಚರಿತ್ರೆಯ ಉದ್ದಕ್ಕೂ ಮಹಿಳೆ ಹಾದುಬಂದ ಬಗೆಯ ಅಧ್ಯಯನ ಮಾಡುವುದರ ಮೂಲಕ ಮಹಿಳೆಯ ಸ್ಥೂಲ ಚಿತ್ರವೊಂದನ್ನು ಕಟ್ಟಿಕೊಡುವ ಪ್ರಯತ್ನವನ್ನು ಈ ನಿಬಂಧ ಮಾಡಿದೆ. ಈ ಪ್ರಯತ್ನದಲ್ಲಿ ಪುರುಷ ಶೋಷಣೆಯಿಂದ ಜರ್ಜರಿತಳಾದ ಮಹಿಳೆ ಕಾಣಿಸುತ್ತಾಳೆ. ಆದರೆ ಮುಂದೆ ಅದೇ ಮಹಿಳೆ ತನ್ನ ಅರಿವಿನ ಮೂಲಕ ತನ್ನ ಹಕ್ಕುಗಳಿಗಾಗಿ ನಡೆಸಿದ ಧೀರ ಹೋರಾಟದ ಚಿತ್ರಣವನ್ನು ನಿರೂಪಿಸಲಾಗಿದೆ.

ಅಧ್ಯಾಯ - ೨

# ಲಿಂಗ ಸಮಾನತೆ - ಅರ್ಥ ಮತ್ತು ಸ್ವರೂಪ

ಲಿಂಗಸಮಾನತೆ ಎಂದರೆ ಪುರುಷರಿಗೆ ಮತ್ತು ಮಹಿಳೆಯರಿಗೆ ಸಮಾನ ಆಯ್ಕೆ, ಸಮಾನ ಹಕ್ಕು, ಸಮಾನ ಅವಕಾಶ, ಸಮಾನ ಸ್ವಾತಂತ್ರ್ಯ, ಸಮಾನ ಜವಾಬ್ದಾರಿ ಮುಂತಾದ ಎಲ್ಲಾ ವಿಷಯಗಳಲ್ಲಿ ಸಮಾನತೆ ಇರುವ ಪರಿಸ್ಥಿತಿಯನ್ನು ಲಿಂಗಸಮಾನತೆ ಎಂದು ಕರೆಯುತ್ತೇವೆ.

ನನ್ನ ಅಭಿಪ್ರಾಯದಲ್ಲಿ ಲಿಂಗಸಮಾನತೆ ಎಂದರೆ ಸಮಾಜದಲ್ಲಿ ಸ್ತ್ರೀಪುರುಷರ ನಡುವೆ ಯಾವುದೇ ತಾರತಮ್ಯವಿಲ್ಲದೆ ಶೈಕ್ಷಣಿಕವಾಗಿ, ರಾಜಕೀಯವಾಗಿ, ಧಾರ್ಮಿಕವಾಗಿ ಸಾಂಸ್ಕೃತಿಕವಾಗಿ ಸಮಾನಹಕ್ಕು ಸಮಾನ ಅವಕಾಶ ನೀಡುವುದನ್ನ ಲಿಂಗಸಮಾನತೆ ಎಂದು ಕರೆಯಬಹುದು.

ಪುರುಷರೊಂದಿಗೆ ಮಹಿಳೆಯರು ಸಮಾನತೆಯನ್ನು ಹೊಂದಿದ್ದರೆ ಎಂಬ ಬಗ್ಗೆ ಪ್ರಾಚೀನ ಕಾಲದಿಂದಲೂ ಗುರುತಿಸುವ ಪ್ರಯತ್ನ ನಡೆದಿರುವುದನ್ನ ಕಾಣಬಹುದು ಮಹಿಳೆಯು ಕೌಂಟುಂಬಿಕ ನೆಲೆಯಲ್ಲಿ ಪುರುಷ ಅಥವಾ ಪತಿಯೊಂದಿಗೆ ಸಮಾನವಾದ ಹಕ್ಕು, ಕರ್ತವ್ಯ ಹಾಗೂ ಆಚರಣೆಗಳನ್ನು ಹೊಂದಿದ್ದರ ಬಗ್ಗೆ ಸಾಕ್ಷಿಗಳಿವೆ. ಋಗ್ವೇದ ಕಾಲದಲ್ಲಿ ಹೆಚ್ಚು ಕಡಿಮೆ ಸಮಾನತೆ ಇದ್ದ ಬಗ್ಗೆ ಮಾಹಿತಿಗಳು ದೊರಕಿವೆ. ಅಥರ್ವಣ ವೇದದಲ್ಲಿಯೂ ಸ್ತ್ರೀ ಮತ್ತು ಪುರುಷರ ನಡುವೆ ಸಮಾನತೆ ಇದ್ದುದ್ದನ್ನು ಕಾಣಬಹುದು.

ಸ್ವಾತಂತ್ರ್ಯ ಬಂದು ೫೦ ವರ್ಷಗಳಾದರೂ ಕೂಡ ನಮ್ಮ ದೇಶದ ಸಂವಿಧಾನದಲ್ಲಿ ಮಹಿಳೆಯರಿಗೆ ಸಮಾನ ಹಕ್ಕು, ಅವಕಾಶಗಳಿದ್ದರೂ ಕೂಡ, ಇಂದಿಗೂ ಭಾರತೀಯ ಮಹಿಳೆಯ ಸ್ಥಾನಮಾನದಲ್ಲಿ ಹೆಚ್ಚಿನ ಬದಲಾವಣೆಗಳು ಕಾಣುವುದಿಲ್ಲ, ಯಾವುದೇ ಮಾನದಂಡವನ್ನು ತೆಗೆದುಕೊಂಡರು ಅಂದರೆ ಆರ್ಥಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ಎಲ್ಲಾ ವಿಷಯಗಳಲ್ಲೂ ಆಕೆ ಇನ್ನು ಹಿಂದೆ ಉಳಿದಿದ್ದಾಳೆ. ಸ್ವಲ್ಪ ಮಟ್ಟಿಗೆ ಆರ್ಥಿಕ ಹಾಗೂ ಶೈಕ್ಷಣಿಕ ಸಾಧನೆಯನ್ನು ಮಾಡಲಾಗಿದೆ. ಹೆಚ್ಚಿನ ಪ್ರಗತಿ ನಗರ ಪ್ರದೇಶಗಳಿವೇ ಸೀಮಿತವಾಗಿದೆ. ಶೇ.೮೦ ರಷ್ಟು ಹಳ್ಳಿಗಳಿರುವ ಈ ದೇಶದಲ್ಲಿ ಆಗಿರುವ ಬದಲಾವಣೆ ಕಡಿಮೆ ಅನಿಸುತ್ತದೆ. ನಮ್ಮ ದೇಶದ ಮಹಿಳೆಯರಲ್ಲಿ ಶೇ. ೬೦ರಷ್ಟು ಮಹಿಳೆಯರು ಅನಕ್ಷರಸ್ಥರಾಗಿದ್ದಾರೆ. ಶೈಕ್ಷಣಿಕವಾಗಿ ಮಹಿಳೆ ಹಿಂದೆ ಬಿದ್ದಿದ್ದಾಳೆ. ಶಾಲೆಗೆ ಸೇರುವ ಹೆಣ್ಣು ಮಕ್ಕಳ ಸಂಖ್ಯೆ ನಗರಗಳಿಗಿಂತ ಹಳ್ಳಿಗಳಲ್ಲಿ ಕಡಿಮೆ. ಅರ್ಧದಲ್ಲಿಯೇ ಶಾಲೆಗೆ ಶರಣು ಹೊಡೆಯುವ ಹೆಣ್ಣು ಮಕ್ಕಳ ಸಂಖ್ಯೆ ಹಳ್ಳಿಗಳಲ್ಲಿ ಶೇ. ೫೦ಕ್ಕಿಂತ ಹೆಚ್ಚಿದೆ. ಆರ್ಥಿಕವಾಗಿಯೂ ಕೂಡ ನಮ್ಮ ದೇಶದಲ್ಲಿ ಸಂಘಟಿತ ಕ್ಷೇತ್ರದಲ್ಲಿ ಕೇವಲ ಶೇ.೬.೮ ರಷ್ಟು ಮಹಿಳೆಯರು ಕೆಲಸದಲ್ಲಿದ್ದಾರೆ. ಉಳಿದ ಶೇ. ೯೨-೯೪ರಷ್ಟು ದುಡಿಯುತ್ತಿರುವ ಮಹಿಳೆಯರು ಅಸಂಘಟಿತ ಕ್ಷೇತ್ರದಲ್ಲಿದ್ದಾರೆ.

ಈ ಅಸಂಘಟಿತ ಕ್ಷೇತ್ರದಲ್ಲಿ ಶೋಷಣೆ ಅನ್ಯಾಯಗಳು ವಿಪರೀತ ಇನ್ನು ರಾಜಕೀಯವಾಗಿ ನಮ್ಮ ದೇಶದಲ್ಲಿ ಲೋಕಸಭೆ ಶಾಸನ ಸಭೆಗಳಲ್ಲಿ ಶೇ.೧೦ರಷ್ಟು ಕೂಡ ಮಹಿಳೆಯರಿಲ್ಲ. ಹೀಗೆ ಯಾವ ಕ್ಷೇತ್ರದಲ್ಲಿ ನೋಡಿದರು ಮಹಿಳೆಯರ ಸ್ಥಾನಮಾನ ಬಹಳ ಮಟ್ಟಿಗೆ ಕಡಿಮೆ ಆಗಿಯೇ ಉಳಿದಿದೆ.

ಈ ಪರಿಸ್ಥಿತಿಯನ್ನು ನಿವಾರಿಸಲು ಮಹಿಳೆಯರಿಗೆ ಸಮಾನ ಸ್ಥಾನಮಾನವನ್ನು ಕಲ್ಪಿಸಿಕೊಡಬೇಕಾದಲ್ಲಿ ಸರ್ಕಾರ ಹಾಗೂ ಸ್ವಯಂಸೇವಾ ಸಂಸ್ಥೆಗಳು, ಜನಸಾಮಾನ್ಯರು ಕೂಡ ಮಹಿಳೆಯರ ಸ್ಥಾನಮಾನವನ್ನು ಹೆಚ್ಚಿಸಲು ಶ್ರಮವಹಿಸಬೇಕಾಗುತ್ತದೆ. ಮತ್ತು ಸಮಾನತೆಯ ಧೋರಣೆಗೆ ಬದ್ಧರಾಗಬೇಕಾಗುತ್ತದೆ. ಲಿಂಗ ಸಮಾನತೆಯ ಬಗ್ಗೆ ಸಮಾಜದಲ್ಲಿ ಲಿಂಗಸಂವೇದನೆಯನ್ನು ಹೆಚ್ಚಿಸಬೇಕಾಗುತ್ತದೆ.

## ಲಿಂಗ ಸಮಾನತೆಯ ಅರ್ಥ

ಹೆಣ್ಣು ಮತ್ತು ಗಂಡು ಎಂಬ ವಿಶಿಷ್ಠ ಜೈವಿಕ ಲಕ್ಷಣಗಳು ಲಿಂಗ ಎಂಬುದಾಗಿ ವ್ಯಕ್ತಿಯ ಹುಟ್ಟಿನಿಂದಲೇ ನಿರ್ಧಾರವಾಗುತ್ತದೆ. ಲಿಂಗವು ಸೃಷ್ಟಿಯ ಸಹಜ ಸ್ಥಿತಿ ದೈಹಿಕ ರಚನೆ ಮತ್ತು ಸಂತಾನೋತ್ಪತ್ತಿಯ ಕ್ರಿಯೆಯಲ್ಲಿ ಹೆಣ್ಣು ಮತ್ತು ಗಂಡು ವಿಶೀಷ್ಠ ಲಕ್ಷಣಗಳನ್ನು ಹೊಂದಿದ್ದಾರೆ. ಈ ರೀತಿಯಾಗಿ ಜೈವಿಕವಾಗಿ ಬಂದಿರುವ ಲಿಂಗವು ಪ್ರಕೃತಿದತ್ತವಾದ ಅವಶ್ಯಕ ಗುಣವಾಗಿದ್ದು ಜನಾಂಗದ ಬೆಳವಣಿಗೆಗೆ ಹಾಗೂ ಉತ್ತಮ ಸಮಾಜ ಜೀವನಕ್ಕೆ ಅತ್ಯಂತ ಅವಶ್ಯಕ. ಜೈವಿಕವಾಗಿ ಗಂಡು ಹೆಣ್ಣಿನ ನಡುವೆ ವ್ಯತ್ಯಾಸವಿದ್ದರೂ ಸಹ ಸ್ತ್ರೀ ಮತ್ತು ಪುರುಷರ ನಡುವೆ ಯಾವುದೇ ತಾರತಮ್ಯವಿಲ್ಲದೆ ಅಥವಾ ಭೇದ ಭಾವವಿಲ್ಲದೆ ಸಮಾನ ಹಕ್ಕು ಸಮಾನ ಅವಕಾಶ ಸಮಾನ ಜವಾಬ್ದಾರಿ ಮುಂತಾದ ಎಲ್ಲಾ ವಿಷಯಗಳಲ್ಲಿ ಸಮಾನತೆ ಇರುವಂತಹ ಪರಿಸ್ಥಿತಿಯೇ ಲಿಂಗಸಮಾನತೆಯ ಅರ್ಥ.

## ಲಿಂಗ ಸಮಾನತೆಯ ಸ್ವರೂಪ

೧) ಮನುಷ್ಯ ಜೀವಿಗಳ ನಡುವೆ ಅಸಮಾನತೆ, ಅಗೌರವಗಳನ್ನು ತಪ್ಪಿಸಿ ಸಹಬಾಳ್ವೆ ನಡೆಸಲು ಅಂತರ್ ಸಂಬಂಧ ವಿಚಾರ ವಿನಿಮಯ ಮತ್ತು ಘನತೆಯನ್ನು ಎತ್ತಿ ಹಿಡಿಯುವುದು.

೨) ಮಹಿಳೆಯರು ಪುರುಷರಿಗಿಂತ ಎಲ್ಲಾ ಕ್ಷೇತ್ರಗಳಲ್ಲಿಯೂ ಕೀಳು ಅಶಕ್ತರಿಲ್ಲ ಎಂಬ ರೂಢಿಗತ ತಪ್ಪು ಕಲ್ಪನೆಗಳನ್ನು ಪೂರ್ಣ ಅಳಿಸಿ ಹಾಕಿ ಲಿಂಗಸಮಾನತೆಯ ಮನೋಭಾವವನ್ನು ಬೆಳೆಸುವುದು.

೩.) ಹೆಣ್ಣು ಮಕ್ಕಳ ಬಗ್ಗೆ ಆಚರಣೆಯಲ್ಲಿರುವ ಕೀಳರಿಮೆ, ನಿರ್ಲಕ್ಷಗಳನ್ನು ಅಳಿಸಿ ಹಾಕಿ. ಹೆಣ್ಣು ಮಕ್ಕಳು ಹುಟ್ಟಿ ಬೆಳೆಯುವ ವಿವಿಧ ಹಂತಗಳಲ್ಲಿ ಮಾನವೀಯ ವಾತಾವರಣ ಸೃಷ್ಟಿಸುವುದು.

೪) ಮಹಿಳೆಯು ಸಾಮಾಜಿಕ, ಆರ್ಥಿಕ ವೈಜ್ಞಾನಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಪಾಲ್ಗೊಳ್ಳುವಂತೆ ಉತ್ತೇಜಿಸಬೇಕು.

೫) ಸ್ತ್ರೀ–ಪುರುಷರನ್ನು ಜವಬ್ದಾರಿಯುತ ಪಾಲಕತ್ವಕ್ಕೆ ತರಬೇತಿಗೊಳಿಸಲು.

೬) ಮಹಿಳೆಯರ ಕಾರ್ಯಕ್ಷೇತ್ರ ಮತ್ತು ಒಟ್ಟು ಜೀವನ ಕ್ರಮದಲ್ಲಿ ಪುರುಷರ ಸಹಭಾಗಿತ್ವವನ್ನು ಬೆಳೆಸಲು.

೭) ಮಹಿಳೆಯಲ್ಲಿ ಅಭಿವೃದ್ಧಿಯ ಕೌಶಲಗಳು ಮತ್ತು ಸಾಮರ್ಥ್ಯವನ್ನು ಬೆಳಸಿ ಅವರು ಸಶಕ್ತರಾಗಲು ನೆರವಾಗುವುದು.

೮) ಮಹಿಳೆಯರ ಸಾಮಾಜಿಕ ಚಾಲನೆ, ಬೌದ್ಧಿಕ ಮತ್ತು ವೈಚಾರಿಕ ಉನ್ನತಿ ಸಬಲತೆಯನ್ನು ಬೆಳೆಸಲು.

೯) ಹದಿಹರೆಯದ ಬಾಲಕ ಬಾಲಕಿಯರಲ್ಲಿ ಸ್ಪಷ್ಟವಾದ ಲಿಂಗತ್ವ ಪಾತ್ರವನ್ನು ಬೆಳೆಸುವುದು.

೧೦) ಸ್ತ್ರೀಯು ವಯಸ್ಸಿಗೆ ಬರುವ ಮುಂಚೆ ಲಿಂಗ ಸ್ನೇಹದ ಪರಿಸರವನ್ನುಂಟು ಮಾಡಬೇಕು.

೧೧) ಯಾವುದೇ ನಿರ್ಧಾರ ತೆಗೆದುಕೊಳ್ಳುವಲ್ಲಿ ಇಬ್ಬರ ಅಭಿಪ್ರಾಯವನ್ನು ಪಡೆಯಬೇಕು.

೧೨) ಮಹಿಳೆ ಮತ್ತು ಪುರುಷರಿಗೆ ಸಮಾನ ಉದ್ಯೋಗ ಮತ್ತು ವಿದ್ಯಾಭ್ಯಾಸ ಸಾಮಾಜಿಕ ಅವಕಾಶಗಳು ಸಮಾನ ಅವಕಾಶ ಒದಗಿಸುವುದು.

೧೩) ಕುಟುಂಬ ಸಂತಾನೋತ್ಪತ್ತಿ, ಆರೋಗ್ಯ, ಕರ್ತವ್ಯ, ಮತ್ತು ಹಕ್ಕುಗಳ ಬಗ್ಗೆ ನಿರ್ಧಾರ ತೆಗೆದುಕೊಳ್ಳಲು ಅವಕಾಶ ನೀಡುವುದು.

೧೪) ಶೈಕ್ಷಣಿಕ ಕ್ಷೇತ್ರದಲ್ಲಿ ಸ್ತ್ರೀ ಮತ್ತು ಸಮಾನ ಅವಕಾಶ ದೊರೆಯುವಂತೆ ಮಾಡಬೇಕು.

೧೫) ಲಿಂಗ ಸಂವೇದನೆಯನ್ನು ಬೆಳೆಸಿಕೊಂಡು ಮಹಿಳೆಯರು ಎದುರಿಸುತ್ತಿರುವ ಅನಾನುಕೂಲ ಮತ್ತು ಶೋಷಣೆಯನ್ನು ಹೋಗಲಾಡಿಸಲು ಯುವಕ ಯುವತಿಯರು ಪ್ರಯತ್ನಿಸಬೇಕು.

೧೬) ಲಿಂಗ ಸಮಾನತೆಯ ಪರಿಸ್ಥಿತಿಯನ್ನುಂಟು ಮಾಡಲು ಲಿಂಗ ರಾಜಕೀಯದಲ್ಲಿ ಮತ್ತು ಆರ್ಥಿಕ ಕ್ಷೇತ್ರದಲ್ಲಿ ಮೀಸಲಾತಿ ಒಂದು ಪ್ರಮುಖ ಸಾಧನ.

ಅಧ್ಯಾಯ – ೨

# ಮಾತೃಪ್ರಧಾನ ಕುಟುಂಬ ವ್ಯವಸ್ಥೆ – ಮಹಿಳೆಯ ಸ್ಥಾನ

ಮಾತೃಪ್ರಧಾನ ಪರಿಕಲ್ಪನೆಯನ್ನು ಮೊಟ್ಟಮೊದಲು **'ಮಾತೃ ಅಧಿಕಾರ'** ಎಂದು ಗುರುತಿಸಿ ಸಿದ್ಧಾಂತ ರೂಪಿಸಿದವರೆಂದರೆ ಬಾಹೊಫೆನ್‌ರು. ಬಾಹೊಫೆನ್‌ರು **'ಮಾತೃ ಅಧಿಕಾರ'**ದ ಕುರಿತು ಮಾಡಿದ ಪ್ರತಿಪಾದನೆಗಳನ್ನು **ಏಂಗೆಲ್ಸರು** ಹೀಗೆ ಕಟ್ಟಿಕೊಡುತ್ತಾರೆ.

೧) ಪ್ರಾರಂಭದಲ್ಲಿ ಮನುಕುಲವು ಲೈಂಗಿಕ ಸ್ವಚ್ಛಂದತೆಯ ಸ್ಥಿತಿಯಲ್ಲಿ ಬಾಳುತ್ತಿತ್ತು. ಇದನ್ನು ಗ್ರಂಥಕರ್ತೃ ***'ವೇಶ್ಯೆಗಾರಿಕೆ'*** ಎಂಬ ಅತೃಪ್ತಿಕರವಾದ ಮಾತುಗಳಲ್ಲಿ ನಿರೂಪಿಸುತ್ತಾರೆ.

೨) ಇಂತಹ ಲೈಂಗಿಕ ಸ್ವಚ್ಛಂದತೆ ಇದ್ದುದರಿಂದ ಯಾವುದೇ ಮಗುವಿನ ತಂದೆ ಯಾರೆಂದು ನಿಶ್ಚಿತವಾಗಿ ಹೇಳುವುದು ಸಾಧ್ಯವೇ ಇರಲಿಲ್ಲ. ಆದಿಯಲ್ಲಿ ಎಲ್ಲ ಪ್ರಾಚೀನ ಜನತೆಗಳ ಮಧ್ಯೆಯೂ ಇದೇ ಪರಿಸ್ಥಿತಿ ಇದ್ದಿತು.

ತತ್ಫಲವಾಗಿ, ತಾಯಂದಿರಾಗಿ ಸ್ತ್ರೀಯರೇ ಯುವ ಪೀಳಿಗೆಯ ಖಂಡಿತವಾಗಿ ಹೇಳಬಹುದಾದಂಥ, ಜನ್ಮದಾತೃಗಳಾಗಿದ್ದರು. ಅವರನ್ನು ತುಂಬ ಗೌರವ ವಿಶ್ವಾಸ ಆದರಗಳಿಂದ ನೋಡಲಾಗುತ್ತಿತ್ತು. ಇದನ್ನೇ **ಬಾಹೊಫೆನ್‌ರ** ಕಲ್ಪನೆಯ ಪ್ರಕಾರ ಮಹಿಳೆಯರ ಸಂಪೂರ್ಣ ಪ್ರಭುತ್ವದ ಮಟ್ಟಕ್ಕೆ (ಸ್ತ್ರೀಪ್ರಭುತ್ವ) ಏರಿಸಲಾಯಿತು. (ಬಾಹೊಫೆನ್, ಉದ್ಧೃತ; ಏಂಗೆಲ್ಸ್ ೧೯೮೦ ಪು ೧೭-೧೮)

ತಾಯಿಯರಿಗೆ ಉತ್ತರಾಧಿಕಾರ ಎಂಬ ಹೆಸರು ಹೇಗೆ ಬಂದಿತ್ತೆಂದರೆ ವಿವಾಹಕ್ಕೆ ಮುನ್ನ ತಾಯಿಯ ಮೂಲಕ ಮಕ್ಕಳನ್ನು ಗುರುತಿಸಲು ಸಾಧ್ಯವಾಗಿದ್ದುದರಿಂದ. ಸಹಜವಾಗಿ ಆಕೆಗೆ ಅಂದರೆ ತಾಯಂದಿರೆಗೆ ಉತ್ತರಾಧಿಕಾರ ಬಂದಿತು. ಹೀಗಾಗಿ ಅದು ಮಾತೃವಂಶಿಯವೇ ಹೊರತು ಅದು ಮಾತೃ ಅಧಿಕಾರವಲ್ಲ. **ಬಾಹೋಫೆನ್‌ರ** ವ್ಯಾಖ್ಯಾನದಿಂದ ತಿಳಿದು ಬರುವ ಸಂಗತಿಯೆಂದರೆ ತಾಯಿಯಾದವಳು ಮಾತ್ರ ಯಾವಾಗಲು ಪ್ರಧಾನಳಾಗಿರುತ್ತಾಳೆ. ಎನ್ನುವುದನ್ನು ಸ್ಪಷ್ಟವಾಗಿ ಅವರ ವ್ಯಾಖ್ಯಾನದಿಂದ ತಿಳಿಯಬಹುದು.

ಬೇಸಾಯಕ್ಕಿಂತ ಹಿಂದೆ ಸಮುದಾಯಗಳಲ್ಲಿ ಗಂಡಸು ಹೆಂಗಸರಲ್ಲಿ ಮೂಲಭೂತವಾದ ಸಮಾನತೆ ಇತ್ತೆಂಬುದು ಏಂಗಲ್ಸ್‌ರವರ ವಾದ. ಗಂಡಸರು **'ಉತ್ಪಾದಕರಾಗಿ'** ಅಂದರೆ ಬೇಟೆಗಾರರಾಗಿ, ಬೇಸಾಯಗಾರರಾಗಿ, ಜಾನುವಾರುಗಳನ್ನು ಸಾಕುವವರಾಗಿದ್ದಂತಹ ಸಂದರ್ಭದಲ್ಲಿ ಹೆಣ್ಣು ಮನೆಯಲ್ಲಿ **'ಮರುಉತ್ಪಾದಕಿ'** ಯಾಗಿ ಅತ್ಯಂತ ಮಹತ್ವಪೂರ್ಣವಾದ ಕಾರ್ಯವನ್ನು ನಿರ್ವಹಿಸುತ್ತಿದ್ದಳು. ಉತ್ಪಾದನಾ ಸಾಮರ್ಥ್ಯಕ್ಕಿಂತ ಮರುಉತ್ಪಾದನಾ ಸಾಮರ್ಥ್ಯವೇ ಮುಖ್ಯವಾದ್ದರಿಂದ ಅವಳ ಸಾಮಾಜಿಕ ಸ್ಥಾನಮಾನವೂ ಉನ್ನತವಾಗಿತ್ತು. ಮಗುವಿನ ತಂದೆಯಾರೆಂದು ತಿಳಿಯದಿದ್ದರಿಂದ **'ತಾಯಿ ಪಕ್ಷ'** ಚಲಾವಣೆಯಲ್ಲಿದ್ದರಿಂದ ಕುಟುಂಬದಲ್ಲಿ ಹೆಣ್ಣಿಗೆ ಅಧಿಕಾರಯುತ ಸ್ಥಾನ ಇತ್ತು (ಏಂಗಲ್ಸ್ ಉದ್ಧೃತ: ಮನು ಚಕ್ರವರ್ತಿ, ೧೯೯೨, ಪು.೪೦) ಎಂಬುದು ಏಂಗಲ್ಸ್‌ರ ಅಭಿಮತ.

ಕೃಷಿಗಿಂತ ಮುಂಚಿತವಾಗಿ ಸ್ತ್ರೀ ಮತ್ತು ಪುರುಷರಲ್ಲಿ ಸಮಾನತೆ ಇತ್ತೆಂದು ಏಂಗೆಲ್ಸ್‌ರು ಹೇಳಿದರೂ ಕೂಡ ಮಾತೃತ್ವ ಕಾರಣದಿಂದಾಗಿಯೇ ಮಹಿಳೆಗೆ ಕುಟುಂಬದಲ್ಲಿ ಅಧಿಕಾರ ಸ್ಥಾನವಿತ್ತೆಂದೂ ಹೇಳುತ್ತಾರೆ. ಹೆಣ್ಣು **'ಮರು ಉತ್ಪಾದಕಿಯಾಗಿ'** ಸಮಾಜದಲ್ಲಿ ಮಾನ್ಯತೆಯನ್ನು ಗಳಿಸಿದ್ದರು. ಆಕೆಯು ಅಧಿಕಾರ ಸ್ಥಾನದಲ್ಲಿದ್ದುದು ಕುಟುಂಬದಲ್ಲಿ ಮಾತ್ರ. ಕುಟುಂಬದಲ್ಲಿ ಹೆಣ್ಣಿಗೆ ಅಧಿಕಾರ ಸ್ಥಾನ ಕಲ್ಪಿಸಿದ್ದು ಆಕೆಯ ತಾಯ್ತನ. ಮಹಿಳೆಯರು ನಿಭಾಯಿಸುವ ಮರು ಉತ್ಪಾದನಾ ಚಟುವಟಿಕೆಗಳಿಗಿಂತಲು ಆಕೆಯ ಮಾತೃತ್ವಕ್ಕೆ ಹೆಚ್ಚು ಮಹತ್ವವನ್ನು ಕಲ್ಪಿಸಿದ್ದಾರೆ.

ಮಾತೃ ಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ **'ತಾಯಿಗೆ'** ಪ್ರಥಮ ಸ್ಥಾನ ಕುಟುಂಬದ ಹಿರಿಯಾಕೆ (ಅಜ್ಜಿ ಅಥವಾ ತಾಯಿ) ಮನೆಯ ಯಜಮಾನಿ ಆಗಿರುತ್ತಾಳೆ. ಕುಟುಂಬದಲ್ಲಿ ಯಜಮಾನಿಕೆಯು ಅಂದರೆ ಅಧಿಕಾರವು ಅಜ್ಜಿಯಿಂದ ಮಗಳಿಗೆ ಮಗಳಿಂದ ಆಕೆಯ ಮಗಳಿಗೆ ಅನಂತರ (ಮೊಮ್ಮಗಳಿಗೆ) ಹೀಗೆ ವರ್ಗಾವಣೆಯಾಗುತ್ತಿರುತ್ತದೆ. ಕುಟುಂಬದ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಹೀಗೆ ಎಲ್ಲಾ ರೀತಿಯ ಆಗು-ಹೋಗುಗಳನ್ನು ಮನೆಯ ಹಿರಿಯಾಕೆಯೆ ತೀರ್ಮಾನಿಸುವಳು. ಹೀಗಾಗಿ ಮಹಿಳಾ ಯಜಮಾನಿಕೆ ಸೂತ್ರದ ನೆಲೆಯಲ್ಲಿ ರೂಪುಗೊಂಡ ಕುಟುಂಬ ವ್ಯವಸ್ಥೆಯನ್ನು ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಎಂದು ಸಮಾಜಶಾಸ್ತ್ರಜ್ಞರು ಕರೆದಿದ್ದಾರೆ.

ಮಾನವನ ನಾಗರಿಕತೆಯ ಹುಟ್ಟು ಮತ್ತು ವಿಕಾಸದೊಂದಿಗೆ ಮಾತೃಪ್ರಧಾನ ಕುಟುಂಬ ವ್ಯವಸ್ಥೆಯ ಹುಟ್ಟು ಮತ್ತು ಬೆಳವಣಿಗೆ ಏರ್ಪಟ್ಟಿದೆ. ಆಗಾಗಿ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ಜಗತ್ತಿನ ಮೊಟ್ಟಮೊದಲ ಕುಟುಂಬ ವ್ಯವಸ್ಥೆ ಆಗಿದೆ ಎಂದು ಕೆಲವು ವೇಳೆ ವಾದಿಸಲಾಗುತ್ತದೆ. ಮಹಿಳೆಯರು ಗರ್ಭಧರಿಸಿ ಮಕ್ಕಳನ್ನು ಹೆತ್ತು ಹೊತ್ತು ಅವುಗಳನ್ನು ಲಾಲನೆ ಪಾಲನೆಯನ್ನು ಮಾಡಿ ಸಂರಕ್ಷಿಸುವುದರ ಜೊತೆಗೆ ಬೆಳಸುವುದರಲ್ಲಿ ನಿರ್ಣಾಯಕ ಪಾತ್ರ ವಹಿಸುವುದರಿಂದ ಕುಟುಂಬದೊಳಗಿನ ಆಗುಹೋಗುಗಳಲ್ಲಿ ಮಹಿಳೆಯರದ್ದೆ ಮೇಲುಗೈಯಾಯಿತು. ಇದು ಮಾತೃಪ್ರಧಾನ ಕುಟುಂಬ ವ್ಯವಸ್ಥೆಯ ಹುಟ್ಟಿನ ಮೂಲವಾಗಿದೆ. ಹೀಗೆ ಮಹಿಳೆಯು ಪ್ರಜನನ ಸಾಮರ್ಥ್ಯ ಮತ್ತು ಕಾರ್ಯದ ಮೂಲಕ ಮಕ್ಕಳಿಗೆ ಉತ್ತರದಾಯಿಯಾದಳು. ಈ ಜವಾಬ್ದಾರಿಯನ್ನು ತಾಯಿಯಾಗಿ ಮಹಿಳೆ ಯಶಸ್ವಿಯಾಗಿ ನಿರ್ವಹಿಸತೊಡಗಿದ್ದರಿಂದ ಸಹಜವಾಗಿ ಆಕೆಗೆ ಮಕ್ಕಳ ಮೇಲೆ, ತನ್ನ ಸುತ್ತಲಿನ ನೈಸರ್ಗಿಕ ಸಂಪನ್ಮೂಲಗಳ ಮೇಲೆ ನಿಯಂತ್ರಣ ಪ್ರಾಪ್ತವಾಯಿತು. ಹೀಗಾಗಿ ಮಹಿಳೆಯರೆ ಜಗತ್ತಿನ ಮೊಟ್ಟಮೊದಲ ಪೀಳಿಗೆ ರೈತರಾದರು; ಕೃಷಿಕರಾದರು, ತನ್ಮೂಲಕ ಭೂಮಿ ಮೇಲೆ ಪ್ರಭುತ್ವ ಸಾಧಿಸಿದರು. ಸಾಕು ಪ್ರಾಣಿಗಳಾದ ಎಮ್ಮೆ, ಕೋಣ, ಕುರಿ, ಕೋಳಿ ನಾಯಿ ಕತ್ತೆಗಳನ್ನು ಮತ್ತು ದನಕರುಗಳನ್ನು ಕುಟುಂಬೀಕರಣಗೊಳಿಸಿ ಅವುಗಳನ್ನು ಆಹಾರಕ್ಕಾಗಿ, ಕೃಷಿಕಾರ್ಯಗಳಿಗಾಗಿ ಉಪಯೋಗಿಸುವುದನ್ನು ಕಲಿತರು. ಇದರಿಂದ ಮಾಂಸ ಪೂರೈಕೆ, ಹಾಲು ಉತ್ಪಾದನೆ, ಸಾಕು ಪ್ರಾಣಿಗಳನ್ನು ಉಳುಮೆಗೆ,

ಸಾಗಣೆಗೆ ಬಳಸುವುದನ್ನು ಮಹಿಳೆಯರು ಕಲಿತರು. ಕಾಡಿನಿಂದ ನಾಡಿಗೆ ಮಹಿಳೆಯರು ಕೃಷಿಯನ್ನು ಮೊಟ್ಟಮೊದಲಿಗೆ ತಂದರು.

ಮಾನವ ನಾಗರೀಕತೆಯ ಪರಿವರ್ತನೆಯ ಹಂತದಲ್ಲಿ ಮಹಿಳೆಯರು ಬೇಟೆಗಾರಿಕೆಯಿಂದ ಪಶುಸಂಗೋಪನೆಗೆ, ಪಶುಸಂಗೋಪನೆಯಿಂದ ಕೃಷಿಗಾಗಿ ಆಹಾರ ಸಂಗ್ರಹಕ್ಕಾಗಿ ಮಹಿಳೆಯರು ಮನೆಯಿಂದ ಹೊರಗೆ ಹೋಗುತ್ತಿದ್ದರು. ಮಹಿಳೆಯರು ಕೃಷಿ ಮಾಡುವುದನ್ನು ಕಲಿತರು ಅಲ್ಲದೆ ಕೃಷಿ ವಿಧಾನಗಳನ್ನು ಬೆಳೆಗಳನ್ನು ಬೆಳೆಯುವುದನ್ನು ಕಲಿತರು. ಪಶು ಸಂಪತ್ತಿನ ಮೇಲೆ ಮತ್ತು ಭೂಮಿಯ ಮೆಲೆ ಮಹಿಳೆಯರು ತಮ್ಮ ಹಿಡಿತವನ್ನು ಸಾಧಿಸಿದರು. ಈ ಎಲ್ಲಾ ಅಂಶಗಳಿಂದ ಮಾತೃಪ್ರಧಾನ ಕುಟುಂಬದಲ್ಲಿ ತಾಯಿಗೆ ಉನ್ನತವಾದಂತಹ ಸ್ಥಾನಮಾನ ದೊರಕಿತ್ತು.

## ಭಾರತೀಯ ಚಿಂತಕರ ದೃಷ್ಟಿಯಲ್ಲಿ ಮಾತೃಪ್ರಧಾನ ಪರಿಕಲ್ಪನೆ :-

ಭಾರತೀಯ ಪುರುಷ ಚಿಂತಕರು ಮಾತೃಪ್ರಧಾನತೆಯನ್ನು ಪಾಶ್ಚಿಮಾತ್ಯ ಚಿಂತಕರ ದಾಟಿಯಲ್ಲಿಯೇ ಸ್ಥಳೀಯ ಉದಾಹರಣೆಗಳೊಂದಿಗೆ ಸಮರ್ಥನೆ ನೀಡುತ್ತಾರೆ. ಬಾಹೊಫೆನ್‌ರು ಹೇಳಿದ ಮಾತೃ ಅಧಿಕಾರವನ್ನು ದೇವಿಪ್ರಸಾದ ಚಟ್ಟೋಪಾಧ್ಯಾಯರು **ಮಾತೃಪ್ರಧಾನ ಸಮಾಜ, ನಾರಿಪ್ರಧಾನ ಸಮಾಜ** ಎಂದು ಎರಡು ಪದಗಳನ್ನು ಒಂದೇ ಅರ್ಥದಲ್ಲಿ ಬಳಸಿರುವರು. ದೇವಿಪ್ರಸಾದರು **ನಾರಿಪ್ರಧಾನತೆಯನ್ನು ಅಥವಾ ಮಾತೃಪ್ರಧಾನತೆಯನ್ನು** ಈ ಕೆಳಗಿನ ಅಂಶಗಳಿಂದ ಗುರುತಿಸಿರುವರು.

* ತಾಯಿಯ ವಂಶದಿಂದ ಮಕ್ಕಳನ್ನು ಗುರುತಿಸುವುದು.
* ಸಂಪತ್ತಿನ ಉತ್ತರಾಧಿಕಾರತ್ವ ಸ್ತ್ರೀಯರದ್ದಾಗಿರುತ್ತದೆ.
* ಮದುವೆಯಾದ ನಂತರವು ಹೆಣ್ಣಿನ ವಾಸಸ್ಥಾನ ತವರು ಮನೆಯೇ ಆಗಿರುವುದು.
* ಸಂಖ್ಯೆಯ ದೃಷ್ಟಿಯಿಂದ ಸ್ತ್ರೀದೇವತೆಗಳು ಪ್ರಧಾನರಾಗಿರುವುದು.
* ಮಹಿಳೆಯರು ಶಾಸನಾಧಿಕಾರಿಗಳಾಗಿರುವುದು.
* ಧಾರ್ಮಿಕ ಕ್ಷೇತ್ರದಲ್ಲಿ ಸ್ತ್ರೀ ಪುರೋಹಿತರಿಗೆ ಮನ್ನಣೆ.

## ಮಹಿಳಾ ಅಧ್ಯಯನ ಹಾಗೂ ಸ್ತ್ರೀವಾದದಲ್ಲಿ ಮಾತೃಪ್ರಧಾನ ಪರಿಕಲ್ಪನೆ :-

ಮಾತೃಪ್ರಧಾನತೆಯನ್ನು ಕುರಿತು ಇದುವರೆಗೆ ನಡೆದ ನಿರ್ವಚವನ್ನೇ ಮಹಿಳಾ ಅಧ್ಯಯನವು ಸ್ತ್ರೀವಾದವು ಮಾದರಿಯಾಗಿಸಿಕೊಂಡಿದೆ. ಇತ್ತೀಚಿನ ದಿನಗಳಲ್ಲಿ **'ಮಾತೃಪ್ರಧಾನ'** ಎನ್ನುವ ಪಾರಿಭಾಷಿಕ ಪದ.

ಮಹಿಳೆಯರು ಗರ್ಭಧರಿಸಿ ಮಕ್ಕಳನ್ನು ಹೆತ್ತು ಲಾಲನೆ ಪಾಲನೆ ಮಾಡಿ ಸಂರಕ್ಷಿಸುವುದರಿಂದ, ಬೆಳೆಸುವುದರಲ್ಲಿ ನಿರ್ಣಾಯಕ ಪಾತ್ರವಹಿಸುವುದರಿಂದ ಕುಟುಂಬದೊಳಗಿನ ಆಗು ಹೋಗುಗಳಲ್ಲಿ

ಮಹಿಳೆಯರದ್ದೇ ಮೇಲುಗೈಯಾಯಿತು. ಹೀಗೆ ಮಹಿಳೆಯು ತನ್ನ ಪ್ರಜನನ ಸಾಮರ್ಥ್ಯ ಮತ್ತು ಕಾರ್ಯದ ಮೂಲಕ ಮಕ್ಕಳಿಗೆ ಉತ್ತರದಾಯಿಯಾದವಳು. ಈ ಜವಾಬ್ದಾರಿಯನ್ನು ತಾಯಿಯಾಗಿ ಯಶಸ್ವಿಯಾಗಿ ನಿರ್ವಹಿಸತೊಡಗಿದ್ದರಿಂದ ಸಹಜವಾಗಿ ಆಕೆಗೆ ಮಕ್ಕಳ ಮೇಲೆ, ತನ್ನ ಸುತ್ತಲಿನ ನೈಸರ್ಗಿಕ ಸಂಪನ್ಮೂಲಗಳ ಮೇಲೆ ನಿಯಂತ್ರಣ ಪ್ರಾಪ್ತವಾಯಿತು. ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಯಜಮಾನಿಕೆಯು ಹಿಂದೆ ಮಹಿಳೆಯರಲ್ಲಿಯೇ ಕೇಂದ್ರಿಕೃತವಾಗಿರುತ್ತದೆ. ಅದು ಅನೇಕ ತಲೆಮಾರುಗಳಲ್ಲೂ ಮಹಿಳೆಯರ ನಡುವೆ ವರ್ಗಾವಣೆಯಾಗುತ್ತಿರುತ್ತದೆ. ಆದಾಯ ಸೃಜಿಸಬಲ್ಲ ಆರ್ಥಿಕ ಸಂಪನ್ಮೂಲಗಳು ಮಾತೃಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಮಹಿಳೆಯರ ಮಾಲಿಕತ್ವಕ್ಕೊಳಪಟ್ಟಿರುತ್ತದೆ. ಕುಟುಂಬದ ಎಲ್ಲಾ ಆಗುಹೋಗುಗಳನ್ನು ಮನೆಯ ಹಿರಿಯಾಕೆ ಯಜಮಾನತಿಯೇ ನಿರ್ಧರಿಸುವಳು. ಆಕೆಯ ನಿರ್ಣಯ ಅಥವಾ ತೀರ್ಮಾನಗಳನ್ನು ಯಾರು ಉಲ್ಲಂಘಿಸುವಂತಿಲ್ಲ. ಎಲ್ಲ ಮಾತೃಪ್ರಧಾನ ಕುಟುಂಬ ವ್ಯವಸ್ಥೆಗಳಲ್ಲೂ **'ಅಳಿಯಕಟ್ಟು'** ಪರಂಪರೆ ಊರ್ಜಿತದಲ್ಲಿರುತ್ತದೆ. **'ಅಳಿಯಕಟ್ಟು'** ಎಂದರೆ ಮಾತೃ ಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಅಳಿಯನು ಹೆಣ್ಣು ಕೊಟ್ಟ ಅತ್ತೆಯ ಮನೆಯ ವಾರಸುದಾರನಾಗಿರುತ್ತಾನೆ. ಆತನು ವಿವಾಹದ ನಂತರ ತನ್ನ ಹೆಂಡತಿಯ ಮನೆಯಲ್ಲಿಯೇ ವಾಸಿಸುತ್ತಾನೆ. ಆತನಿಗೆ ತನ್ನ ತಂದೆ ಮನೆಯ ಆಸ್ತಿಯಲ್ಲಿ ಪಾಲು ದೊರಕುವುದಿಲ್ಲ. ಒಡೆಯರ್ ಡಿ ಹೆಗ್ಗಡೆ, ಅನ್ನಪೂರ್ಣೇಶ್ವರಿ. ಎನ್, ೨೦೦೩ ಪುಟ ೨೬--೨೭)

ಈ ಬಗೆಯ ನಿರ್ವಚನವು ಈ ಹಿಂದಿನ ವ್ಯಾಖ್ಯಾನಗಳಿಗಿಂತ ಭಿನ್ನವಾಗಿಯೇನೂ ಇಲ್ಲ. ಪ್ರಜನನ ಕ್ರಿಯೆ ಮತ್ತು ಮಾತೃತ್ವ ಇವೆರಡೂ ಭಿನ್ನ ಭಿನ್ನವಾಗಿವೆ. ಮೊದಲನೆಯದು ಹೆಣ್ಣಿನ ಜೈವಿಕ ಸಹಜ ಕ್ರಿಯೆಯನ್ನು ಹೇಳಿದರೆ, ಎರಡನೆಯದು ಆಕೆಯ ಪ್ರಜನನ ಸಾಮರ್ಥ್ಯವನ್ನು ಒಂದು ಸಾಮಾಜಿಕ ಮೌಲ್ಯವಾಗಿಸಿದ ಪಿತೃಪ್ರಧಾನ ಪರಂಪರೆಯ ಕಥನವನ್ನು ಬಿತ್ತರಿಸುತ್ತದೆ. **'ಮಾತೃಪ್ರಧಾನ'** ಎನ್ನುವುದು ಪಿತೃಪ್ರಧಾನ ವ್ಯವಸ್ಥೆಯ ಧೋರಣೆಯು ಹೌದು. ರಾಜಕೀಯ ದೃಷ್ಟಿಕೋನವೂ ಹೌದು. ಅಂತಿಮವಾಗಿ ಅಲ್ಲಿಂದಲೇ ರೂಪುಗೊಂಡ ಪರಿಕಲ್ಪನೆಯೂ ಹೌದು. ಹೀಗಾಗಿ ಮಾತೃಪ್ರಧಾನತೆಯನ್ನು ಸ್ತ್ರೀ ನಿಷ್ಠ ನೆಲೆಯಲ್ಲಿ ನಿರ್ವಚಿಸಲಾಗುವುದಿಲ್ಲ. ಒಡೆಯರ್ ಮತ್ತು ಅನ್ನಪೂರ್ಣೇಶ್ವರಿ ಅವರು ಮಹಿಳೆಯ ಯಜಮಾನಿಕೆ ಮತ್ತು ಆರ್ಥಿಕ ಸಂಪನ್ಮೂಲಗಳ ಮೇಲೆ ಹೊಂದಿದ ಮಾಲಿಕತ್ವದ ಸ್ವರೂಪವನ್ನು ವಿಶ್ಲೇಷಿಸಿಲ್ಲ. ಅವುಗಳನ್ನು ಹೇಳಿಕೆಗೆ ಮಹತ್ವವಿದೆ ಎಂದೆನ್ನುವ ಒಡೆಯರ್ ಮತ್ತು ಅನ್ನಪೂರ್ಣೇಶ್ವರಿ ಅವರು ಸಮಾಜದಲ್ಲಿ ಅವಳ ಧ್ವನಿಗೆ ಯಾವ ಸ್ಥಾನವಿತ್ತು ಎಂಬುದನ್ನು ಕುರಿತು ಪ್ರಸ್ತಾಪಿಸುವುದಿಲ್ಲ. **'ಅಳಿಯಕಟ್ಟು'** ಕುರಿತು ಮುಂದೆ ವಿಶ್ಲೇಷಿಸಲಾಗಿದೆ. ಮಾತೃಪ್ರಧಾನ ಪರಿಕಲ್ಪನೆಯು ಹೆಣ್ಣಿನ ಮಾತೃತ್ವವನ್ನೇ ವೈಭವೀಕರಿಸುತ್ತದೆ.

ಛಾಯಾ ದಾತಾರ ಅವರು ಮಾತೃಪ್ರಧಾನತೆಯನ್ನು 'ಸ್ತ್ರೀಶಕ್ತಿ' ನೆಲೆಯಲ್ಲಿ ಅರ್ಥೈಸುವರು. ಹಸಿವು ಮತ್ತು ಲೈಂಗಿಕ ಭಾವನೆ ಇವು ಮೂಲ ಪ್ರೇರಣೆಗಳಾಗಿದ್ದರೂ ಪ್ರಜೋತ್ಪಾದನೆಯಲ್ಲಿ ಪುರುಷನ ಪಾತ್ರವು

ಗೊತ್ತಿರದಿದ್ದರಿಂದ ಸ್ತ್ರೀ ಗರ್ಭಧಾರಣೆಯ ಶಕ್ತಿಯು ನಿಗೂಢವೆನಿಸುತ್ತಿತ್ತು. ಭೂಮಿಯಲ್ಲಿ ಹೇಗೆ ಬೆಳೆ ಬರುತ್ತದೆಯೊ ಅದೇ ಪ್ರಕಾರ ಸ್ತ್ರೀಯೂ ಫಲಿಸುತ್ತಾಳೆ ಎಂದೂ ಅವಳಲ್ಲಿ ದೈವಿಶಕ್ತಿ ಇದೆ ಎಂದು ತಿಳಿಯುತ್ತಿದ್ದುದು ಸಹಜ. ಈ ನಂಬುಗೆಯ ಆಧಾರವೆಂದರೆ ಇಂದೂ ಅವಶೇಷ ರೂಪವಾಗಿ ಕಂಡು ಬರುವ **'ಮಾತೃದೇವತೆಗಳು'**................ ಮಾನವನ ಕುಲದ ಸಂಖ್ಯಾಬಲವನ್ನು ಹೆಚ್ಚಿಸುವ ಅವಶ್ಯಕತೆ ಆಗಿನ ಕಾಲಕ್ಕೆ ಇತ್ತು. ಅಂಥ ಕಾಲದಲ್ಲಿ ಬಾಲಕರಿಗೆ ಜನ್ಮಕೊಡುವ ಸ್ತ್ರೀಯ ಯೋನಿಯನ್ನು ಬಹಳ ಪವಿತ್ರ ಭಾವನೆಯಿಂದ ನೋಡುತ್ತಿದ್ದರು. ವಿಶ್ವದ ಜನನಿದಾತೆ 'ಸ್ತ್ರೀ' ಎಂಬ ಆತು ನೆಲೆಗೊಂಡಿತು............. ಈ ಎಲ್ಲ ವಿವರಗಳ ಹಿನ್ನೆಲೆಯಲ್ಲಿ ಪರಿಶೀಲಿಸಿದಾಗ 'ಸ್ತ್ರೀ'ಯು ಯಾವುದೇ ಒಬ್ಬ ಪುರುಷನ ಸೊತ್ತಾಗಿರಲಿಲ್ಲ ಎಂಬುದು ಸ್ಪಷ್ಟವಾಗಿ ತಿಳಿದುಬರುತ್ತದೆ. (ಛಾಯಾ ದಾತಾರ. ೧೯೯೨, ಪು. ೪೭೪೯)

ಬಾಲಕರಿಗೆ ಜನ್ಮಕೊಡುವ ಸ್ತ್ರೀಯ ಯೋನಿಗೆ ಮಹತ್ವ ಬಂದಿತು ಎಂದು ಆಲೋಚಿಸುವ ಪ್ರಕ್ರಿಯಯೇ ಪುರುಷನಿಷ್ಟವಾದದ್ದು. ಬಹುತೇಕ ಅಧ್ಯಯನಗಳಲ್ಲಿ **'ಮಾನವ'** ಎನ್ನುವ ಪದ ಪುರುಷಸೂಚಕವಾಗಿಯೇ ಬಳಸಿಕೊಂಡಿದೆ. ಛಾಯಾದಾತಾರ ಅವರ ಈ ಹೇಳಿಕೆಯಲ್ಲಿ ಮಾನವ-ಪುರುಷ ಎನ್ನುವ ಅಭಿಪ್ರಾಯವು ಸ್ಪಷ್ಟವಾಗಿ ಮೂಡಿದೆ. ಮಾನವ ಕುಲದ ಸಂಖ್ಯಾಬಲವನ್ನು ಹೆಚ್ಚಿಸುವ ಅವಶ್ಯಕತೆ ಆಗಿನ ಕಾಲಕ್ಕೆ ಇತ್ತು ಎಂದು ಹೇಳುತ್ತಾ ಛಾಯಾ ಅವರು ಬಾಲಕರಿಗೆ ಜನ್ಮ ಕೊಡುವ ಸ್ತ್ರೀ ಯೋನಿಯನ್ನು ಬಹಳ ಪವಿತ್ರ ಭಾವನೆಯಿಂದ ನೋಡುತ್ತಿದ್ದರು ಎನ್ನುವರು. ಈ ಹೇಳಿಕೆಯಲ್ಲಿ ಬಾಲಕಿಯ ಜನನದ ಅಪೇಕ್ಷೆಯ ಪ್ರಸ್ತಾಪವು ಗೈರು ಹಾಜರಿಯಾಗಿದೆ. ಸ್ತ್ರೀಯನ್ನು ಗೌರವದಿಂದ ಕಾಣುತ್ತಿದುದು ಆಕೆಯ ಗರ್ಭಧಾರಣೆ ಶಕ್ತಿಯು ಅರ್ಥವಾಗದೇ ಇದ್ದ ಹಂತದಲ್ಲಿ ಪುರುಷನು ಹೆಣ್ಣಿನ ಬಗ್ಗೆ ಕುತೂಹಲ ಉಂಟಾಗದೇ ಆಕೆಯಲ್ಲಿರುವ ಪ್ರಜನನ ಶಕ್ತಿ ಕಾರಣಕ್ಕಾಗಿ, ಪುರುಷನ ಕುರಿತು ಸ್ತ್ರೀ ಯಾವುದೇ ಕುತೂಹಲವನ್ನು ಹೊಂದಿರಲಿಲ್ಲವೆ ಎನ್ನುವ ಪ್ರಶ್ನೆಗೆ ಉತ್ತರ ಇದುವರೆಗಿನ ಅಧ್ಯಯನಗಳಲ್ಲಿ ದೊರೆಯುವುದಿಲ್ಲ. ಮಾತೃಪ್ರಧಾನತೆಯ ಕುರಿತಿರುವ ವ್ಯಾಖ್ಯಾನಗಳು ಕೇವಲ, ಪುರುಷನ ಕುತೂಹಲ ಮತ್ತು ಪ್ರಯೋಗಶೀಲತೆಯನ್ನು ಪ್ರತಿಬಿಂಬಿಸುವಂತೆ ತೋರುತ್ತವೆ. ಫಲಕೊಡುವ ಭೂಮಿಯನ್ನು ಸಂತಾನ ಕೊಡುವ ಹೆಣ್ಣನ್ನು ಉಪಭೋಗದ ತಕ್ಕಡಿಯಲ್ಲಿಯೇ ಇಟ್ಟು ಆಲೋಚಿಸುವ ಪ್ರಕ್ರಿಯೆಯು ಪುರುಷ ಪ್ರಧಾನ ನಿಲುವೇ ಆಗಿದೆ. ಹೀಗೆ ಹೆಣ್ಣನ್ನು ಉಪಭೋಗದ ನೆಲೆಯಲ್ಲಿ ನಿರ್ವಚಿಸಿದ್ದನ್ನು ಸ್ತ್ರೀ ನಿಷ್ಟ ಮೌಲ್ಯಗಳ ನೆಲೆಯಲ್ಲಿ ಸ್ವೀಕರಿಸಲಾಗದು. ಮಹಿಳೆಯನ್ನು ಪ್ರಕೃತಿಯೊಂದಿಗೆ ಆಲೋಚಿಸುವ ಪುರುಷಕಾರದ ವೈಚಾರಿಕ ಆಕೃತಿಗಳು ಆಕೃತಿಗಳು ಹೆಣ್ಣನ್ನು ಮಾನವಳನ್ನಾಗಿ ಪರಿಭಾವಿಸುವದನ್ನು ಬಿಟ್ಟ ಚಾರಿತ್ರಿಕ ಹಂತವನ್ನು ಹೇಳುತ್ತದೆ. ಪುರುಷನಲ್ಲಿಯ ಸಂತಾನಾಭಿವೃದ್ಧಿಯ ಕಾಳಜಿಗೆ ಮಹಿಳೆ ಬಳಕೆಯ ಮಾಧ್ಯಮವಾಗಿರುವುದನ್ನು ಕಾಣಬಹುದು.

...... ಸಾಮಾನ್ಯವಾಗಿ ಹಿರಿಯ ಸಹೋದರಿ ಅಥವಾ ಸಹೋದರನು ಮನೆತನದ ಉಸ್ತುವಾರಿಕೆ ನೋಡಿಕೊಳ್ಳುತ್ತಾರೆ. ಆದರೆ ಸಹೋದರನು ಆಸ್ತಿಯ ಕುಟುಂಬದ ಮೇಲ್ವಿಚಾರಕನಾಗಿ ಇರುತ್ತಾನೆಯೇ ಹೊರತು ಹಕ್ಕುದಾರನಾಗಿ ಅಲ್ಲ. ಅಂದರೆ ಗಂಡಿಗೆ ಕುಟುಂಬದ ಆಸ್ತಿಯ ಅನುಭೋಗದ ಅಧಿಕಾರವಿದೆಯಾದರು ಅದು ಇಚ್ಛಾನುಸಾರ ಅಧಿಕಾರವಲ್ಲ. ಪುರುಷನೊಬ್ಬ (ಸಹೋದರ ಮಗ) ತಾಯಿ ಅಥವಾ ಸೋದರಿಯ ಹೆಸರಿನಲ್ಲಿ ಮನೆತನದ ಅಚರಣೆ ಮತ್ತು ಆಡಳಿತ ನಡೆಸುತ್ತಾನೆ. ಮಹಿಳೆಗಿರುವ ಜೈವಿಕ ಪಲ್ಲಟ ಹಾಗೂ ಕೌಟುಂಬಿಕ ಜವಬ್ದಾರಿಗಳಿಂದಾಗಿ ಕುಟುಂಬದ ಹಿರಿಯ ಸಹೋದರ ಆಸ್ತಿ ಮತ್ತು ಕುಟುಂಬದ ಆಗುಹೋಗುಗಳ ಉಸ್ತುವಾರಿ ಯಜಮಾನಿಕೆಯನ್ನು ವಹಿಸಿಕೊಂಡಿರುತ್ತಾನೆ. ಮುಂದೆ ಸೋದರಿಯ ಮಗ ಪ್ರಾಯಪ್ರಬುದ್ದನಾದಾಗ ಈ ಜವಬ್ದಾರಿ ಮಾವನಿಂದ ಅಳಿಯನಿಗೆ ವರ್ಗಾಯಿಸಲ್ಪಡುತ್ತದೆ. (ರಾಜೀವ ಶೆಟ್ಟಿ, ಉದ್ಧೃತ: ಗಾಯತ್ರಿ ನಾವಡ, **೧೯೯೯, ಪುಟ ೫೨-೫೩**)

ತಾಯಾಳಿಕೆಯ ಕುರಿತು ಹೇಳಿದ ರಾಜೀವ ಶೆಟ್ಟಿ ಅವರ ಹೇಳಿಕೆಯಲ್ಲಿ ಬಳಕೆಗೊಂಡ ಪದಗಳನ್ನು ಗಮನಿಸಬೇಕು. ಉಸ್ತುವಾರಿಕೆ, ಮೇಲ್ವಿಚಾರಕ, ಆಡಳಿತ ಯಜಮಾನಿಕೆ ಈ ಎಲ್ಲ ಶಬ್ಧಗಳು ಗಂಡಿನ ಅಧಿಕಾರವನ್ನು ಅಧಿಕೃತಗೊಳಿಸುತ್ತಿದ್ದ ಹಂತವನ್ನು ಧ್ವನಿಸುತ್ತವೆ. ಹೆಣ್ಣಿನ ಜೈವಿಕ ಪ್ರಕ್ರಿಯೆಯೇ ಮತ್ತು ಆಕೆಗಿರುವ ಕುಟುಂಬದ ಉಸ್ತುವಾರಿ ಯಜಮಾನಿಕೆಯಿಂದಾಗಿ ಆಸ್ತಿಯ ಆಗುಹೋಗುಗಳನ್ನು ನೋಡಿಕೊಳ್ಳಲಾಗುವುದಿಲ್ಲ ಎಂದು ರಾಜೀವ ಶೆಟ್ಟಿ ಅವರ ಹೇಳಿಕೆಯನ್ನು ಸಮರ್ಥಿಸುವ ಗಾಯತ್ರಿ ಅವರ ನಿಲುವು ಪುರುಷಶಾಹಿ ಧೋರಣೆಯನ್ನು ಸಮರ್ಥಿಸುತ್ತದೆಯೆ ಹೊರತು ಸ್ತ್ರೀವಾದಿ ಕಾಳಜಿಯನ್ನು ವ್ಯಕ್ತಪಡಿಸುವುದಿಲ್ಲ. ಮಾತೃಪ್ರಧಾನತೆಯ ಕುರಿತಿರುವ ಇದುವರೆಗಿನ ಅಧ್ಯಯನಗಳು ಹೇಳುವುದು ಇದನ್ನೇ ಹೆಣ್ಣಿನ ಜೈವಿಕ ಪ್ರಕ್ರಿಯೆಯೇ ಅವಳ ಒಟ್ಟು ಬದುಕಿನ ಕಾರ್ಯ ಚಟುವಟಿಕೆಗಳನ್ನು ನಿಯಂತ್ರಿಸಿದೆ. ಈ ಕಾರಣಕ್ಕಾಗಿಯೇ ಅವಳ ಬದುಕು ಕೌಟುಂಬಿಕ ಚಟುವಟಿಕೆಗೆ ಮಾತ್ರ ಸೀಮಿತಗೊಂಡಿತು ಎಂದು ಹೇಳುತ್ತಾರೆ.

ಗಾಯತ್ರಿನಾವಡ ಅವರು ಹೇಳಿದ **'ತಾಯಾಳಿಕೆ ಪದ್ದತಿ'** ಕುರಿತ ವಿವರಗಳು ತಾಯಿಯ ಹಕ್ಕಗಳು, ಆಕೆಯ ಸೋದರನಿಗೆ ವರ್ಗಾಯಿಸಲ್ಪಟ್ಟ ಸಂಗತಿಯನ್ನು ಬಿಚ್ಚಿ ಹೇಳುತ್ತವೆ. ಇದು ದೇವಿಪ್ರಸಾದರ ಕೆಳಗಿನ ವಿಶ್ಲೇಷಣೆಯನ್ನು ಗಮನಿಸಿದರೆ ಸ್ಪಷ್ಟವಾಗುತ್ತದೆ.

ಮಾವನಿಂದ ಸೋದರಳಿಯ ಸಂಪತ್ತು ಪಡೆಯುವ ಈ ಪದ್ದತಿ ಒಂದು ರೀತಿಯಲ್ಲಿ ಮಾತೃಪ್ರಧಾನ ಸಮಾಜ ಶಿಥಿಲಗೊಳ್ಳುವುದರ ಲಕ್ಷಣ. ಅವಿಚ್ಛಿನ್ನ ಮಾತೃಪ್ರಧಾನ ಸಮಾಜದಲ್ಲಿ ತಾಯಿಯ ಆಸ್ತಿ ಹೆಣ್ಣುಮಕ್ಕಳಿಗೆ ಸೇರುತ್ತಿದ್ದಿತು. ಪುರುಷರಿಗೆ ಅಂದರೆ ಗಂಡುಮಕ್ಕಳಿಗೆ ಯಾವ ಅಧಿಕಾರವೂ ಈ ಆಸ್ತಿಯ ಮೇಲೆ ಇರುತ್ತಿರಲಿಲ್ಲ. ಆದರೆ ಮೇಲಿನ ಪದ್ದತಿಯಲ್ಲಿ ಮಾತೃಪ್ರಧಾನ

ಸಮಾಜದ ಒಂದಿಷ್ಟು ಅಂಶ ಇನ್ನು ಉಳಿದಿರುವುದನ್ನು ಹೇಗೆಂದರೆ ಸಂಪತ್ತು ಪುರುಷನ ಕೈಗೆ ಬಂದರು ಸಹ ಅದು ತಾಯಿಯ ವಂಶದಿಂದ ವಂಶಧಾರೆಯನ್ನೇ ಅವಲಂಬಿಸಿದೆ. ಹೀಗೆ ಸೋದರ ಮಾವನ ಆಸ್ತಿಯನ್ನು ಸೋದರಳಿಯ ಪಡೆಯುವುದು ಸ್ತ್ರೀಪ್ರಧಾನ ಸಮಾಜ ಶಿಥಿಲಗೊಂಡು ಪುರುಷಪ್ರಧಾನ ಸಮಾಜ ವಿಕಾಸಗೊಳ್ಳುತ್ತಿರುವ ಯಾವುದೇ ಒಂದು ಹಂತ.

(ದೇವಿಪ್ರಸಾದ್ ಚಟ್ಟೋಪಾಧ್ಯಾಯ, ೧೯೯೨, ಪುಟ ೪೭)

ಛಾಯಾದಾತರ ಅವರು ಸ್ತ್ರಿ ಮುಕ್ತಿವಾದಿಗಳು ಕಟ್ಟಿಕೊಡುವ ಮಾತೃಪ್ರಧಾನ ಪರಿಕಲ್ಪನೆಯ ವಿವರಗಳನ್ನು ಈ ಕೆಳಗಿನಂತೆ ಸಂಗ್ರಹಿಸಿ ಕೊಡುವರು. ಈ ಬಗೆಯ ಮಾತೃಪ್ರಧಾನ ವ್ಯವಸ್ಥೆಯನ್ನು ಸ್ತ್ರೀ ಮುಕ್ತಿವಾದಿಗಳು ನಿಜವಾದ **'ಮಾತೃಪ್ರಧಾನ ಸಮಾಜ ವ್ಯವಸ್ಥೆ ಅಲ್ಲ'** ಎನ್ನುತ್ತಾರೆ. ಅವರ ಮಾತಾನುಸಾರ ಅತ್ಯಂತ ಪ್ರಾಚೀನ ಕಾಲದಲ್ಲಿ ಈ ವ್ಯವಸ್ಥೆಯು ಬಹಳಷ್ಟು ಸಮಾನತೆಯ ಧೋರಣೆಯಾಗಿತ್ತು. ಸ್ತ್ರಿಯರ ಅಧಿಕಾರವೂ ಪುರುಷರ ಮೇಲೆ ಇರಲಿಲ್ಲ. ವಂಶಾವಳಿಯು ಮಾತ್ರ ತಾಯಿಯಿಂದ ಆರಂಭವಾಗುತ್ತಿತ್ತು. ಇನ್ನೊಂದು ಸಂಗತಿ ಎಂದರೆ ಸ್ತ್ರೀಯರು ಸ್ಥಿರವಾಗಿ ತಮ್ಮ ಮನೆಯಲ್ಲಿಯೇ ಒಂದೆಡೆ ಇದ್ದರು. ಪುರುಷರು ಬೇಟೆಯ ನೆವದಲ್ಲಿ ಹೊರಗೆ ಹೆಚ್ಚು ಸಮಯ ಇರುತ್ತಿದ್ದರಾದ್ದರಿಂದ ಪಂಗಡದ ವ್ಯಾಪಕತೆಯಲ್ಲಿ ಸ್ತ್ರೀಯರ ಪಾಲು ಹೆಚ್ಚಾಗಿತ್ತು. ಹೀಗಿದ್ದರಿಂದಲೇ ಸ್ತ್ರಿಯರಿಗೆ ಮಾನ್ಯತೆ ಇತ್ತು.

(ಛಾಯಾದಾತರ, ೧೯೯೭ ಪುಟ **೫೩**)

ದಾತಾರ ಅವರು ಉಲ್ಲೇಖಿಸುವ ಸ್ತ್ರಿ ಮುಕ್ತಿವಾದಿಗಳು ಪುರುಷನಿಷ್ಠ ಧೋರಣೆಯಲ್ಲಿ ಆಲೋಚಿಸುತ್ತಾರೆ. ಸ್ತ್ರೀಮುಕ್ತಿವಾದಿಗಳು ಹೆಣ್ಣಿನ ಬದುಕನ್ನು **'ಕುಟುಂಬ'** (ಗ್ರಹ) ಕೇಂದ್ರಿತವಾಗಿ ಗಂಡಿನ ಜೀವನವನ್ನು ಸಾಮಾಜಿಕ ನೆಲೆಗಟ್ಟಿನಲ್ಲಿ ವಿಶ್ಲೇಷಿಸುತ್ತಾರೆ. ಸ್ತ್ರೀ ಮುಕ್ತಿವಾದಿಗಳ ಈ ನಿಲುಮೆಯಲ್ಲಿ ರೂಪ ಪಡೆಯುವ ನಿರ್ವಚನಗಳೆಲ್ಲಾ ಪರೋಕ್ಷವಾಗಿ ಪುರುಷ ಪ್ರಧಾನ ಆಲೋಚನಾಕ್ರಮವನ್ನು ಸಮರ್ಥಿಸುತ್ತವೆ. ಸಿಂಹ, ಹುಲಿಗಳ ಮೇಲೆ ಕುಳಿತು, ಕೈಯಲ್ಲಿ ತ್ರಿಶೂಲ, ಬಾಣ, ಕತ್ತಿಗಳನ್ನು ಹಿಡಿದುಕೊಂಡು ಸವಾರಿ ನಡೆಸುವ ಚಾಮುಂಡಿ ದುರ್ಗೆಯರ ಪ್ರತಿಮೆಗಳು, ಹೆಣ್ಣು ಬೇಟೆ ಸಂಸ್ಕೃತಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದ ಕಥನವನ್ನು ಹೇಳುತ್ತವೆ ಈ ಬಗೆಯ ಚಾಮುಂಡಿ ದುರ್ಗೆಯರ ಪ್ರತಿಮೆಗಳ ಹೊರ ಆಕೃತಿಗಳು ಚರಿತ್ರೆಯ ಆರಂಭದಿಂದಲು ಸ್ತ್ರೀಸುತ್ತ ಹೆಣೆಯಲ್ಪಟ್ಟ ಗೃಹ ಕೇಂದ್ರಿತ ಸಾಂಸ್ಕೃತಿಕ ಕಥನಗಳನ್ನು ನಿರಾಕರಿಸುತ್ತವೆ.

## ಹೆಣ್ಣು : ಮಾತೃ

ಆದಿಮಾನವನಲ್ಲಿ 'ಸ್ತ್ರೀ' ಎಂಬ ಲಿಂಗವಾಚಕ ಶಬ್ದವು ಇರಲಿಲ್ಲವೆಂದು ಕಾಣುತ್ತದೆ. ಪ್ರತಿ ಸ್ತ್ರೀಯೂ 'ಮಾತಾ' ಎಂದೇ ಸಂಬೋಧಿಸಲ್ಪಡುತ್ತಿದ್ದಳು. ಅದು ಅವಳ ಸಾಮಾಜಿಕ ಭೂಮಿಕೆಯ ಸ್ಥಾನದ ನಿದರ್ಶನದಂತಿತ್ತು (ಛಾಯಾದಾತಾರ ೧೯೯೭, ಪುಟ 20) ಎನ್ನುವ ಮಾತು ಪಿತೃಪ್ರಧಾನ

ಮೌಲ್ಯಗಳ ತೀವ್ರತೆಯನ್ನು ಧ್ವನಿಸುತ್ತದೆ. ಹೆಣ್ಣನ್ನು ಮನುಷ್ಯಳನ್ನಾಗಿ ಗ್ರಹಿಸದೆ ಮಾತೆಯನ್ನಾಗಿ ಅಂದರೆ ಪ್ರಜೋತ್ಪಾದಕ ಸರಕನ್ನಾಗಿ ಮಾತೃತ್ವವು ಗುರುತಿಸುತ್ತದೆ.

ಮಾತೆಯಾಗಿ ಸಾಮಾಜಿಕ ಸ್ಥಾನಮಾನ ಪಡೆಯುವ ಪ್ರಕ್ರಿಯೆಯೇ ಪಿತೃಪ್ರಧಾನತೆಯ ಪ್ರಾಬಲ್ಯವನ್ನು ಧ್ವನಿಸುತ್ತದೆ. **'ಮಾತೃ'** ಎನ್ನುವುದು ಹೆಣ್ಣಿನ ಮಾತೃತ್ವವನ್ನು ಮಾತ್ರ ಪ್ರತಿನಿಧಿಸುತ್ತದೆ. **'ಮಾತೃ'** ತಾಯಿ, ಹೆತ್ತವ್ವ, ಭೂಮಿ ಮಾತೆ ಎನ್ನುವ ಅರ್ಥದಲ್ಲಿ ಮಾತ್ರ ಬಳಕೆಗೊಂಡಿದೆ. ಹೆಣ್ಣಿಗೆ **'ತಾಯಿ'**ಯ ಜೊತೆಗೆ ಅನೇಕ ಮುಖಗಳಿವೆ. ಹೆಂಡತಿ ***ಸೂಳೆ-ವ್ಯಭಿಚಾರಿಣಿ, ಮಗಳು- ಅಕ್ಕ-ತಂಗಿ, ಅತ್ತಿಗೆ-ನಾದಿನಿ ಅತ್ತೆ-ಸೊಸೆ, ರಾಕ್ಷಸಿ-ಸಂರಕ್ಷಸಿ*** ಈ ಮೊದಲಾದ ರೂಪಗಳಿವೆ. ಈ ಎಲ್ಲ ಪಾತ್ರಗಳು ಪಿತೃಪ್ರಧಾನ ಸಮಾಜನೊಳಗಿನಿಂದಲೇ ಮೈದಾಳಿದವುಗಳು. ತಾಯಿ, ಹೆಂಡತಿ, ಸೊಸೆ ಈ ಮೊದಲಾದ ರೂಪಗಳು ಹೆಣ್ಣಿನ ಸಮಗ್ರ ವ್ಯಕ್ತಿತ್ವವನ್ನು ಪ್ರತಿನಿಧಿಸುತ್ತವೆ ಎಂದು ಹೇಳಲಾಗುವುದಿಲ್ಲ. ಈ ಎಲ್ಲ ಪಾತ್ರಗಳನ್ನು ಒಟ್ಟುಗೂಡಿಸಿದರೂ ಅವುಗಳು ಸ್ತ್ರೀಯ ಪರಿಪೂರ್ಣ ವ್ಯಕ್ತಿತ್ವವನ್ನು ಕಟ್ಟಿಕೊಡುವುದಿಲ್ಲ. ಸ್ತ್ರೀ ಹೆಣ್ಣು, ಮಹಿಳೆ ಈ ಪದಗಳಿಗಿರುವ ಸಮಗ್ರತೆ ತಾಯಿ, ಅತ್ತೆ-ಸೊಸೆ ಮೊದಲಾದ ಸಂಬಂಧಸೂಚಕ ಪದಗಳಿಗಿಲ್ಲ. ಮಾತೃಪ್ರಧಾನ ಎನ್ನುವುದನ್ನು ಸ್ತ್ರೀಪ್ರಧಾನ ನೆಲೆಯಲ್ಲಿ ನಿರ್ವಚಿಸುವುದು ವೈಜ್ಞಾನಿಕವೆನಿಸುವುದಿಲ್ಲ.

**'ತಾಯಿ'** ಎನ್ನುವದು ಹೆಣ್ಣಿನ ಸೌಮ್ಯ ಮುಖವನ್ನು ಆಕೆಯ ಕೋಮಲತೆಯನ್ನು ಮಾತ್ರ ಎತ್ತಿ ಹೇಳುತ್ತದೆ. ತಾಯಿಯಾದವಳಿಗೆ ಪ್ರೀತಿ, ಕ್ಷಮೆ, ಸಹನೆ, ಸೇವೆ, ವಿಶ್ವಾಸ ಮೃದು ಹೃದಯ, ಕಷ್ಟಸಹಿಷ್ಣುತೆ ಮೊದಲಾದ ಗುಣಗಳಿರುತ್ತವೆ. ಎಂದು ನಂಬಲಾಗಿದೆ ಹಾಗೂ ಇಂತಹ ಗುಣಗಳನ್ನು ಹೊಂದಿದವಳನ್ನು ಮಾತ್ರ ತಾಯಿ ಎಂದು ನಂಬಲಾಗಿದೆ ಹಾಗೂ ಇಂತಹ ಗುಣಗಳನ್ನು ಹೊಂದಿದವಳನ್ನು ಮಾತ್ರ ತಾಯಿ ಎಂದು ಕರೆಯುವಂತಹ ವಾಡಿಕೆ ನಮ್ಮ ಸಮಾಜದಲ್ಲಿ ರೂಢಿಯಲ್ಲಿದೆ. ಇಂತಹ ಗುಣಗಳನ್ನು ಹೆಣ್ಣಾದವಳು ಹೊಂದಿರಬೇಕು. ಈ ಎಲ್ಲಾ ಗುಣಗಳನ್ನು ಆಕೆ ಮೈಗೂಡಿಸಿಕೊಂಡಾಗ ಮಾತ್ರ ಆಕೆಗೆ ಬೆಲೆ ಇರುತ್ತದೆ.

ಪಿತೃಪ್ರಧಾನ ವ್ಯವಸ್ಥೆ ನಮ್ಮಲ್ಲಿ ಜಾರಿಗೆ ಬಂದಾಗಿನಿಂದಲೂ ಮಾತೃತ್ವದ ವೈಭವೀಕರಣಕ್ಕೆ ಮತ್ತು ಬಂಜೆತನ ಕುರಿತು ತೀವ್ರವಾದ ತಿರಸ್ಕಾರ ಬೆಳೆದುಕೊಂಡು ಬಂದಿದೆ. ಭಾರತೀಯ ಸಂಸ್ಕೃತಿಯಲ್ಲಿ ಮಾತೃತ್ವವನ್ನು ಆರಾಧಿಸುವ ಪ್ರಕ್ರಿಯೆಯು ಪ್ರಧಾನವಾಗಿ ಕಂಡುಬರುತ್ತದೆ. ಭಾರತದ ತತ್ವಶಾಸ್ತ್ರಜ್ಞರು ಹೆಣ್ಣಿನ ಮಾತೃತ್ವವನ್ನು ದೈವಿಕ ನೆಲೆಯಲ್ಲಿಯೇ ಇಟ್ಟು ಅತಿಯಾದ ವೈಭವೀಕರಣ ಮಾಡಿರುವರು. **'ಪಿತೃ'** ಎನ್ನುವುದು ಬರೀ ತಂದೆತನವನ್ನು ಮಾತ್ರ ಪ್ರತಿನಿಧಿಸುವುದಿಲ್ಲ. ಪಾಲಕ, ರಕ್ಷಕ, ಮಾರ್ಗದರ್ಶಕ ಪೂರ್ವಜ ಮೊದಲಾದ ಅರ್ಥಗಳನ್ನು ಕೊಡುತ್ತದೆ. **'ಪಿತೃ'** ಪದಕ್ಕಿರುವ ಅರ್ಥಗಳೇ **'ಪಿತೃಪ್ರಧಾನ'**ಪ

'ಮಾತೃಪ್ರಧಾನ' ಪರಿಕಲ್ಪನೆಗಿಂತ ಹಿರಿದಾದ ಅರ್ಥ ವ್ಯಾಪ್ತಿಯನ್ನು ಹೊಂದಿದೆ ಎನ್ನುವುದನ್ನು ಸಾಬೀತುಗೊಳಿಸುತ್ತವೆ.

## ಪತ್ನಿ : ಮಾತೃ

ಇದುವರೆಗಿನ ಚರಿತ್ರೆಯ ಅಧ್ಯಯನಗಳು ಪತ್ನಿತ್ವವನ್ನು ಅಧೀನ ನೆಲೆಯಲ್ಲಿ, ಮಾತೃತ್ವವನ್ನು ಸ್ವಾತಂತ್ರ್ಯದ ನೆಲೆಯಲ್ಲಿಯೇ ನಿರ್ವಚಿಸಿವೆ. ಕೊಸಾಂಬಿ ಅವರು............ ದೇವತೆಗಳೆಲ್ಲರೂ ಹಿಂದೊಮ್ಮೆ ಅರಣ್ಯವಾಸಿಗಳ ಮಾತೃದೇವತೆಗಳಂತೆಯೇ ಸ್ವತಂತ್ರ ಅಸ್ತಿತ್ವವನ್ನು ಪಡೆದಿದ್ದರೆಂದೂ, ನಂತರದ ಕಾಲದಲ್ಲಿ ಅರಣ್ಯವಾಸಿಗಳು ನಾಗರಿಕರ ಅಧೀನಕ್ಕೆ ಒಳಪಟ್ಟಾಗ ಅಂದರೆ ಆಹಾರ ಸಂಗ್ರಹಣೆಯನ್ನು ಬಿಟ್ಟು ಆಹಾರ ಉತ್ಪಾದನಾ ಸಮಾಜದ ಕೆಳಸ್ತರಕ್ಕೆ ಬಂದು ಸೇರಿಕೊಂಡಾಗ ಆ ಅಧೀನತೆಯ ಕುರುಹಾಗಿ ಅರಣ್ಯವಾಸಿಗಳ ಮಾತೃದೇವತೆಗಳನ್ನು ನಾಗರೀಕರ ಪಿತೃದೇವತೆಗಳ ಹೆಂಡಂದಿರಾಗಿ ಸ್ವೀಕಾರ ಮಾಡಲಾಯಿತು ಎಂಬುದು ಅರ್ಥವಾಗುತ್ತದೆ. (ಕೊಸಾಂಬಿ ಡಿ.ಡಿ. ಉದ್ಧೃತ; ಬಾಲಗೋಪಾಲ್, ೧೯೯೮, ಪು ೩೪) ಎಂದಿರುವರು ಶಾಲಿನಿ ಅವರು ಮಾತೃದೇವತೆಗಳ ವಿಶ್ಲೇಷಣೆಯ ಸಂದರ್ಭದಲ್ಲಿ ಹೇಳಿದ ಮಾತುಗಳನ್ನು ಗಮನಿಸಬೇಕು.

ಕುಟುಂಬದಲ್ಲಿ, ಸಮಾಜದಲ್ಲಿ ಸ್ತ್ರಿ ಪ್ರಾಮುಖ್ಯತೆ ಪಡೆದಿದ್ದ ಸಂದರ್ಭದಲ್ಲಿ ಮಾತೃದೇವತಾರಾಧನೆ ಆಚರಣೆಯಲ್ಲಿದ್ದು ಸ್ತ್ರೀ ಗ್ರಾಮ ದೇವತೆಗಳು ವಿಶೇಷವಾಗಿ ಬಳಕೆಯಲ್ಲಿದ್ದವು, ಯಾವಾಗ ಸ್ತ್ರೀ ಪ್ರಾಮುಖ್ಯತೆ ಕಡಿಮೆಯಾಗಿ, ಪುರುಷಪ್ರಧಾನ ವ್ಯವಸ್ಥೆ ಜಾರಿಗೆ ಬರಲಾರಂಬಿಸಿತೋ ಆಗ ಸ್ತ್ರೀ ಗ್ರಾಮದೇವತೆಗಳ ಸ್ಥಾನದಲ್ಲಿಯೂ ವ್ಯತ್ಯಯಗಳು ಗೋಚರವಾಗಿ, ಸ್ವತಂತ್ರವಾಗಿರುವ ಮಾತೃಸ್ವರೂಪದ ಸ್ತ್ರೀ ಗ್ರಾಮದೇವತೆಗಳಲ್ಲಿ ಕೆಲವು ಶಿಷ್ಟಗೊಂಡು ಪುರುಷ ದೇವತೆಗಳ ಹೆಂಡಿರಾಗಿಯೂ ಮಾರ್ಪಟ್ಟರು. (ಶಾಲಿನಿ ರಘುನಾಥ ೨೦೦೨ ಪುಟ ೭)

ಹೀಗೆ ಲಿಂಗತಾರತಮ್ಯದ ನೆಲೆಯಲ್ಲಿ ರೂಪಗೊಂಡ ಶ್ರೇಷ್ಠ ಕನಿಷ್ಠತೆಯ ಶ್ರೇಣೀಕರಣವನ್ನು ನಮಗೆ ಗೊತ್ತಿಲ್ಲದಂತೆಯೇ ಒಪ್ಪಿಕೊಂಡು ಬಿಡುತ್ತಿದ್ದೇವೆ ಎನಿಸುತ್ತದೆ. ಪತ್ನಿತ್ವವನ್ನು ದಾಸ್ಯದ ನೆಲೆಯಲ್ಲಿ, ಮಾತೃತ್ವವನ್ನು ಶಕ್ತಿಯ ನೆಲೆಯಲ್ಲಿ ವ್ಯಾಖ್ಯಾನಿಸಿದ್ದನ್ನು ನಾವು ಕಿಂಚಿತ್ತು ಸಂಶಯಪಲಿಲ್ಲ. ಆಡುನುಡಿಯ ಅನೇಕ ಹೇಳಿಕೆಗಳು ಪತ್ನಿತ್ವಕ್ಕಿಂತ ಮಾತೃತ್ವವು ಹೆಚ್ಚು ಪುರುಷ ನಿಷ್ಠವಾಗಿರುತ್ತದೆ ಎನ್ನುವುದನ್ನೇ ಹೇಳುತ್ತವೆ. ಇದನು ಸ್ಪಷ್ಟಪಡಿಸಲು ಲೋಕದಲ್ಲಿ ಕೆಟ್ಟ ಹೆಂಡತಿ ಸಿಗಬಹುದು, ಕೆಟ್ಟ ತಾಯಿಯಲ್ಲ ಎನ್ನುವ ಗಾದೆ ಮಾತನ್ನು ವಿಶ್ಲೇಷಿಸಲಾಗಿದೆ. ನಮ್ಮ ಸಂಸ್ಕೃತಿಗಳಲ್ಲಿ ಒಳ್ಳೆಯದು ಕೆಟ್ಟದ್ದು ಎನ್ನುವ ಪರಿಕಲ್ಪನೆಗಳು ಪುರುಷಶಾಹಿ ಧೋರಣೆಯಲ್ಲಿಯೇ ನಿರ್ವಚಿಸಲ್ಪಟ್ಟಿವೆ. ಪುರುಷನಿಷ್ಠ ಸಮಾಜ ಯಾವುದನ್ನು ಮಾಡಕೂಡದು ಎಂದು ನಿಷೇಧಿಸಿರುತ್ತದೆಯೋ ಅಂತಹ ಚಟುವಟಿಕೆಗಳನ್ನು ಹೆಂಗಸರು ಪಾಲ್ಗೊಳ್ಳುತ್ತಿರುತ್ತಾರೆ. ಅಂದರೆ ಸಮಾಜದಿಂದ ನೀತಿಬಾಹಿರ ಎಂದು ಗುರುತಿಸಲ್ಪಟ್ಟ ಮಹಿಳೆಯರು ವ್ಯಕ್ತಿ

ಸ್ವಾತಂತ್ರ್ಯವನು ಪ್ರತಿನಿಧಿಸುತ್ತಾರೆ. ಮಹಿಳೆಯ ಯಾವ ಪಾತ್ರಗಳು ಒಳ್ಳೆಯವು ಎಂಥು ಅರ್ಥೈಸಲ್ಪಟ್ಟಿವೆಯೋ ಅವುಗಳು ಪುರುಷ ನಿಷ್ಠವಾಗಿರುತ್ತವೆ. **"ತಾಯಿ ಕೆಟ್ಟವಳಾಗಿರಲು ಸಾಧ್ಯವೇ ಇಲ್ಲ"** ಎನ್ನುವ ತೀರ್ಪು ಮಾತೃತ್ವವು ಪುರುಷನಿಷ್ಠತೆ ಉಳ್ಳದ್ದು ಎನ್ನುವುದನ್ನೇ ಧ್ವನಿಸುತ್ತದೆ. ಅನೇಕ ಜನಪದ ಕಥೆಗಳಲ್ಲಿ ಚಿತ್ರಿತವಾದ ಬಹು ಪಾಲು ಹೆಂಡತಿಯರು, ಗಂಡನನ್ನು ಪ್ರಶ್ನಿಸುತ್ತಾರೆ, ಷರತ್ತಿನಲ್ಲಿ ಸೋಲಿಸುತ್ತಾರೆ. ಗೆಳೆಯನನ್ನು ಕೂಡಿಕೊಳ್ಳುತ್ತಾರೆ. ಆದರೆ ತಾಯಿ ಪಾತ್ರ ಹಾಗಲ್ಲ. ಆದ್ದರಿಂದ **'ಮಾತೃಪ್ರಧಾನ'** ಸಿದ್ಧಾಂತವು ತಾಯಂದಿರ ಪರಾದೀನತೆಯನ್ನು ಸಮರ್ಥಿಸುತ್ತದೆ.

## ಮಾತೃತ್ವ : ಸಾಮಾಜಿಕ ಜವಬ್ದಾರಿ

ಭಾರತೀಯ ಸಾಮಾಜಿಕ ವ್ಯವಸ್ಥೆಗಳು ಹೆಣ್ಣಿನ ಮಾತೃತ್ವದ ಜವಬ್ದಾರಿಯನ್ನು ಎರಡು ನೆಲೆಗಳಲ್ಲಿ ಅಪೇಕ್ಷಿಸುತ್ತದೆ. ೧. ತಾಯಿ–ಶಿಶುವಿನ ಸಂಬಂಧ. ೨. ತಾಯಿ–ಮಕ್ಕಳ ಸಂಬಂಧ ಮಾತೃತ್ವದ ಮೂಲದಿಂದ ಹುಟ್ಟಿಕೊಂಡ ಈ ಎರಡೂ ಸಂಬಂಧಗಳು ಬೇರೆ ಬೇರೆಯಾಗಿದ್ದು, ಮಾತೃತ್ವವಿನಿಂದ ಭಿನ್ನ–ಭಿನ್ನ ಜವಬ್ದಾರಿಗಳನ್ನು ಅಪೇಕ್ಷಿಸುತ್ತದೆ.

**ತಾಯಿ – ಶಿಶುವಿನ ಸಂಬಂಧಗಳಲ್ಲಿ ಮತ್ತೆ ಎರಡು ಒಳವಿಂಗಡನೆಗಳು ಕಾಣಿಸಿಕೊಳ್ಳುತ್ತವೆ.**

1. ಶಿಶು ಗರ್ಭದಲ್ಲಿದ್ದಾಗತಾಯಿ ತೆಗೆದುಕೊಳ್ಳಬೇಕಾದ ಎಚ್ಚರಿಕೆಗಳು, ಕಾಳಜಿಗಳು.
2. ಹೊಸ ಜಗತ್ತಿಗೆ ಕಾಲಿಸಿರಿದ ಶಿಶುವಿಗೆ ಎದೆ ಹಾಲು ಕೊಡುವುದು. ಶಿಶುವಿಗೆ ಎದೆಹಾಲು ಕೊಡುವುದನ್ನು ಹೊರತು ಪಡಿಸಿದಂತೆ, ಮಗುವಿನ ಲಾಲನೆ–ಪಾಲನೆಗಳನ್ನು ಯಾರಾದರೂ ಮಾಡಬಹುದು. ಆದರೆ ಪುರುಷಪ್ರಧಾನ ವ್ಯವಸ್ಥೆಯು ಹೆಣ್ಣಿನ ಪ್ರಜನನ ಕ್ರಿಯೆಯನ್ನೇ ನೆನಪಾಗಿಟ್ಟುಕೊಂಡು ಶಿಶುವಿನ ಪೋಷಣೆ ಪಾಲನೆಗೂ ಆಕೆಯನ್ನೇ ಹೊಣೆಗಾರಳನ್ನಾಗಿಸಿದೆ.

ತಾಯಿ ಮಕ್ಕಳ ಸಂಬಂಧವು ತಾಯಿ–ಶಿಶುವಿನ ಸಂಬಂಧಕ್ಕಿಂತಲೂ ಭಿನ್ನವಾಗಿರುತ್ತದೆ. **'ಜನನಿ'** ತಾನೇ ಮೊದಲ ಗುರುವು ಎಂಬ ಗಾದೆ ಮಾತು ಪ್ರಚಲಿತದಲ್ಲಿರುವ ಪಿತೃಪ್ರಧಾನ ಸಮಾಜದಲ್ಲಿ ಮಕ್ಕಳ ಒಳ್ಳೆಯ ಹಾಗೂ ಕೆಟ್ಟ ವ್ಯಕ್ತಿತ್ವಗಳ ವಿಕಸನಕ್ಕೆ ತಾಯಿಯನ್ನೇ ಹೊಣೆಯಾಗಿಸಿದೆ. ಇದಕ್ಕೆ ಉದಾಹರಣೆಯಾಗಿ ಕಳ್ಳನ ಕುರಿತಿರುವ ಜನಪದ ಕಥೆಯನ್ನು ವಿಮರ್ಶೆಗೆ ಒಳಪಡಿಸಲಾಗಿದೆ.

ಒಬ್ಬಳು, ತಾಯಿ ತನ್ನ ಮಗನಿಗೆ ಚಿಕ್ಕಂದಿನಿಂದಲೂ ಕಳ್ಳತನಕ್ಕೆ ಪ್ರೋತ್ಸಾಹಿಸುತ್ತಿರುತ್ತಾಳೆ. ಅಕ್ಕ–ಪಕ್ಕದ ಮನೆಯಿಂದ ಏನೇ ಕದ್ದುಕೊಂಡು ಬಂದರೂ, ಮುತ್ತು ಕೊಟ್ಟು ಸಿಹಿ ತಿಂಡಿ ನೀಡಿ ಮಗನಿಗೆ ಕಳ್ಳತನ ಮಾಡಲು ಹುರಿದುಂಬಿಸುತ್ತಾಳೆ. ಈ ಹುಡುಗನೇ ಮುಂದೆ ದೊಡ್ಡ ದರೋಡೆಕಾರನಾಗಿ, ಸಮಾಜಘಾತುಕ ವ್ಯಕ್ತಿಯಾಗಿ ಬೆಳೆದು ನಿಲ್ಲುತ್ತಾನೆ. ಅರಮನೆಯಲ್ಲಿ ಕಳ್ಳತನ ನಡೆಸಿದ್ದಾಗ ಸಿಕ್ಕಿಬಿದ್ದ ಈ ದರೋಡೆಕಾರನಿಗೆ ಗಲ್ಲು ಶಿಕ್ಷೆಯಾಗುತ್ತದೆ. ನೇಣುಗಂಬಕ್ಕೆ ಏರಿಸುವ

ಸಂದರ್ಭದಲ್ಲಿ ಕೊನೆಯಾಸೆ ಏನು ಎಂದು ರಾಜನು ಕೇಳಿದಾಗ ದರೋಡೆಕಾರ ***'ನನ್ನ ತಾಯಿಯೊಂದಿಗೆ ಮಾತನಾಡುವುದು'*** ಎಂದು ಹೇಳುತ್ತಾನೆ. ತಾಯಿಯನ್ನು ಅತ್ಯಂತ ಹತ್ತಿರಕ್ಕೆ ಕರೆದು, 'ನಾನು ಚಿಕ್ಕವನಿದ್ದಾಗ ಕದ್ದು ತಂದಾಗ, ಇದು ನ್ಯಾಯವಲ್ಲ ಮಗನೆ ಎಂದು ಕೆನ್ನೆಗೆ ಹೊಡೆದಿದ್ದರೆ ನಾನು ಈ ರೀತಿ ದೊಡ್ಡ ಕಳ್ಳನಾಗಿ ಬೆಳೆಯುತ್ತಿರಲಿಲ್ಲ. ಗಲ್ಲು ಶಿಕ್ಷೆಗ ಗುರಿಯಾಗುತ್ತಿರಲಿಲ್ಲ, ಎಂದು ಮೆಲ್ಲನೆ ಆಕೆಯ ಕಿವಿಯಲ್ಲಿ ಉಸುರಿದನು. ತಕ್ಷಣವೇ ಆಕೆಯ ಕಿವಿಯನ್ನು ಕಚ್ಚಿ ಹಾಕಿದನು. ಈ ಕಥೆಯಲ್ಲಿ ಮಗನು ಮಾಡುವ ಸಮಾಜಕಂಟಕ ಕೆಲಸಕ್ಕೆ ತಾಯಿಯನ್ನೇ ಸಂಪೂರ್ಣ ಹೊಣೆಗಾರಳನ್ನಾಗಿಸಿದೆ. ಇಂಥ ಘಟನೆಗಳ ನಿರ್ವಚನದ ಸಂದರ್ಭದಲ್ಲಿ ತಂದೆಯ ಉಪಸ್ಥಿತಿಯ ಬಗ್ಗೆ ಪ್ರಸ್ತಾಪವೇ ಬರುವುದಿಲ್ಲ. ತಾಯಿಯಾದವಳನ್ನೇ ಪಾಪಿಷ್ಟಳನ್ನಾಗಿ, ದುಷ್ಟ ಚಟುವಟಿಕೆಗಳ ತರಬೇತುದಾರಳನ್ನಾಗಿ ಚಿತ್ರಿಸಲಾಗಿದೆ. ಅಂತಹ ತಾಯಂದಿರಿಗೆ ಮಕ್ಕಳು ಶಿಕ್ಷಿಸುವುದನ್ನು ಪುರುಷಪ್ರಧಾನ ಸಮಾಜವು ಸಮರ್ಥಿಸುತ್ತಿರುತ್ತದೆ. ಕಳ್ಳನ ತಾಯಿಯಂತಹ ಕಥೆಗಳು, ತಾಯಿಯಂತೆ ಮಕ್ಕಳು ನೂಲಿನಂತೆ ಸೀರೆ' ಎನ್ನುವಂತಹ ಗಾದೆ ಮಾತುಗಳು ಮಕ್ಕಳ ವ್ಯಕ್ತಿತ್ವದ ಸಂಪೂರ್ಣ ಬೆಳವಣಿಗೆಗೆ ಜನನಿಯನ್ನೇ ಜವಾಬ್ದಾರಳನ್ನಾಗಿಸಿವೆ. ಹೆಣ್ಣಿನ ಪ್ರಜನನ ಕ್ರಿಯೆಯನ್ನು ಅನುಸರಿಸಿ ಹುಟ್ಟುವ ಪರಿಕಲ್ಪನೆಗಳು ತಾಯಿ-ಶಿಶುವಿನಿಂದ ಪ್ರಾರಂಭವಾಗಿ ತಾಯಿ ಮಕ್ಕಳವರೆಗೆ ವಿಸ್ತರಿಸುತ್ತದೆ.

ತಾಯ್ತನದ ಜೈವಿಕ ಕ್ರಿಯೆಯನ್ನು ಅನುಸರಿಸಿ ಹೆಣ್ಣನ್ನು ತ್ಯಾಗಿ, ರಕ್ಷಕಿ, ಜೀವಪ್ರೇಮಿ, ದಾದಿ ಎನ್ನುವ ಅರ್ಥದಲ್ಲಿ ವ್ಯಾಖ್ಯಾನಿಸಲಾಗುತ್ತದೆ. ತಾಯಿಯಾದ ಸ್ತ್ರೀಯಲ್ಲಿ ಪುರುಷರೋಪಿತ ಗುಣಗಳಿರಬಹುದು, ಇಲ್ಲದೆ ಹೋಗಬಹುದು. ತಾವು ಹೊಂದಿದ ಅನೈತಿಕ ಸಂಬಂಧವನ್ನು ನೋಡಿದ ಮಕ್ಕಳನ್ನು ಕೊಲ್ಲುವ ತಾಯಂದಿರ ಕಥೆಗಳಿರಬಹುದು ಚಿಕ್ಕಮಗಳೂರಿನಲ್ಲಿ ತಾಯಿಯೊಬ್ಬಳು ಮಗುವನ್ನು ಸಂತೈಸಲಾಗದೆ ಕೊಂದಂತಹ ಸತ್ಯ ಘಟನೆಯಾಗಿರಬಹುದು. (ಪ್ರಜಾವಣಿ, ೫ ನವೆಂಬರ್ ೨೦೦೩) ಈ ಬಗೆಯ ಕಥೆಗಳು. ನೈಜ ಘಟನೆಗಳು ಮಾತೃತ್ವದ ಕುರಿತಿರುವ ಪಾರಂಪರಿಕ ನಂಬಿಕೆಗಳನ್ನು ಒಡೆದು ಹಾಕುತ್ತವೆ. ಸಾಂಪ್ರದಾಯಿಕ ಪುರುಷ ಗ್ರಹಿಕೆಗಳನ್ನು ಮುರಿದು ಹಾಕುವ ತಾಯಂದಿರ ಕುರಿತು ಮಾತೃಪ್ರಧಾನ ಸಿದ್ಧಾಂತವು ಚಕಾರವೆತ್ತುವುದಿಲ್ಲ.

ಮಾತೃಪ್ರಧಾನ ಎನ್ನುವುದು ಹೆಣ್ಣು ತಾಯಿಯಾದಾಗ ಮಾತ್ರ ಪ್ರಾಮುಖ್ಯತೆ ದೊರೆಯುವುದನ್ನು ಧ್ವನಿಸುತ್ತದೆ. ಒಂದು ವೇಳೆ ಅವಳು ತಾಯಿಯಾಗದೆ ಹೋದರೆ ಅವಳಗೊಂದು ಚಹರೆ ಸಿಕ್ಕುವುದಿಲ್ಲವೆಂದಾಯ್ತು **'ಮಾತೃಪ್ರಧಾನ'** ಎನ್ನುವ ಪರಿಕಲ್ಪನೆಯು ಹೆಣ್ಣು ತಾಯಿಯಾಗಲೇಬೇಕೆಂದು ಒತ್ತಾಯಿಸುತ್ತದೆ. ಮಾತೃತ್ವವನ್ನು ಮುಂದು ಮಾಡುವ ಮಾತೃಪ್ರಧಾನ ಪರಿಕಲ್ಪನೆಯು ಪಿತೃಪ್ರಧಾನ ವ್ಯವಸ್ಥೆಯ ಒಂದು ಭಾಗವಾಗಿ ನಿಂತು ಕೊಳ್ಳುತ್ತದೆ. ಮಾತೃತ್ವವನ್ನೇ

ಹೆಣ್ಣಿನ ಘನತೆಯನ್ನಾಗಿ ಎತ್ತಿ ಹಿಡಿಯುವ ಮಾತೃಪ್ರಧಾನ ಪರಿಕಲ್ಪನೆಯು, ಹೆಣ್ಣು ಮಾತೃತ್ವದ ಮೂಲಕವೇ ಚಹರೆ ಪಡೆದುಕೊಳ್ಳುವ ಸತ್ಯವನ್ನೇ ಪ್ರತಿಪಾದಿಸುತ್ತದೆ. ವಿವಾಹಿತ ಮಹಿಳೆಗೆ ಕುಟುಂಬದಲ್ಲಿ ಹೆಂಡತಿಯ ಪಾತ್ರಕ್ಕಿಂತಲೂ ತಾಯಿ ಪಾತ್ರ ಹೆಚ್ಚು ಸುರಕ್ಷತೆಯ, ಅಧಿಕೃತತೆಯನ್ನು ಜೊತೆಗೆ ಚಹರೆಯನ್ನು ಕಲ್ಪಿಸಿಕೊಡುತ್ತದೆ. **'ಮಾತೃಪ್ರಧಾನ'** ಎನ್ನುವ ಈ ಪಾರಿಭಾಷಿಕ ಪದ ಇದನ್ನೇ ಧ್ವನಿಸುತ್ತದೆ.

## ಮಾತೃದೇವತೆಗಳು : ಪ್ರಕೃತಿ

ಮಾತೃಪ್ರಧಾನ ಸಿದ್ಧಾಂತವನ್ನು ರೂಪಿಸುವಾಗ ಮಾತೃದೇವತೆಗಳನ್ನು ಶ್ರೇಷ್ಠತೆಯ ನೆಲೆಯಲ್ಲಿಯೇ ವ್ಯಾಖ್ಯಾನಿಸಲಾಗಿದೆ. ಎಲ್ಲಮ್ಮ, ಹುಲಿಗೆಮ್ಮ, ಗಾಳೆಮ್ಮ, ಮೊದಲಾದವರನ್ನು ಮಾತೃದೇವತೆಗಳು ಎಂದು ಗುರುತಿಸಲಾಗುತ್ತಿದ್ದು, ಅವರನ್ನು ಮಾತೃಪ್ರಧಾನ ಸಮಾಜದವರು ಎಂದೇ ಪರಿಗಣಿಸಲಾಗುತ್ತಿದೆ. ಸಾಮಾನ್ಯವಾಗಿ ಎಲ್ಲ ಗ್ರಾಮದೇವತೆಗಳ ಹೆಸರುಗಳ ಮುಂದೆ ಅವ್ವ ಇಲ್ಲವೇ ಅಮ್ಮ ಎಂದು ಇರುತ್ತದೆ. ಉದಾಹರಣೆಗೆ ಎಲ್ಲಮ್ಮ, ಹುಲಿಗೆವ್ವ, ದುರುಗವ್ವ ದ್ಯಾಯವ್ವ, ಕಾಳಮ್ಮ ಈ ಮೊದಲಾದ ಹೆಣ್ಣು ದೈವಗಳನ್ನು ಕರೆಯುವ ಆದಿ ಮಾನವನಲ್ಲಿ ಕುತೂಹಲ ಬೆಳೆದಿರಬೇಕು, ಮೊದಲು ಮಾನವರು ಆಹಾರ ಸಂಗ್ರಹಣೆಯಲ್ಲಿ, ಬೇಟೆಯಲ್ಲಿ ತೊಡಗಿದರು. ಆದ್ದರಿಂದ ಅವರ ಕಲೆಯಲ್ಲಿ ಹೆಣ್ಣು ಮತ್ತು ಪ್ರಾಣಿಗಳು ಸ್ಥಾನವನ್ನು ಪಡೆದಿದ್ದವು........ ಹೆಣ್ಣನ್ನು ಚಿತ್ರಿಸುವಾಗ ಆಕೆಯ ಸ್ತನಗಳನ್ನು, ಜಘನಗಳನ್ನು ಪ್ರಧಾನವಾಗಿ ಚಿತ್ರಿಸಲಾಗಿದೆ. ಆದ್ದರಿಂದ ಹಂತದಲ್ಲಿ ಧಾರ್ಮಿಕವಾದ ಭಾವನೆಗಳು ಸ್ತ್ರೀಯ ಸುತ್ತಾ ಎಣೆದುಕೊಂಡಿರುವುದನ್ನು ಕಾಣುತ್ತೇವೆ. (ಸಿದ್ದಲಿಂಗಯ್ಯ, ೧೯೯೭, ಪುಟ ೧೭-೨೧೮).

ಸೃಷ್ಟಿಯ ವ್ಯಾಪಾರವನ್ನು ಅರ್ಥೈಸಿಕೊಳ್ಳಲು ಉದ್ಯುಕ್ತನಾದ ಪುರುಷನಿಗೆ ಮಹಿಳೆ ಪ್ರಯೋಗ ಪಶುವಾದಳು ಎಂಬುವುದು ಈ ಮೇಲಿನ ವಿದ್ವಾಂಸರ ಹೇಳಿಕೆಗಳನ್ನು ಅನುಲಕ್ಷಿಸಿದಾಗ ತಿಳಿದು ಬರುವ ಸಂಗತಿ.

ಜಾಗತಿಕ ಮಟ್ಟದಲ್ಲಿ ಗುರುತಿಸಲ್ಪಟ್ಟ ಮೇರಿವುಲ್‌ಸ್ಟನ್‌ಕ್ರಾಫ್ಟ್, ಸಿಮೋನದ ಬೋವಾನಿಂದ ಹಿಡಿದುಕೊಂಡು ಇವತ್ತಿನವರೆಗಿನ ಎಲ್ಲಾ ಸ್ತ್ರೀವಾದಿಗಳು ಹೆಣ್ಣನ್ನು ಜೈವಿಕ ನೆಲೆಯಲ್ಲಿ ಗಂಡನ್ನು ಸಂಸ್ಕೃತಿ (ಬೌದ್ಧಿಕ) ನಿಲುಮೆಯಲ್ಲಿ ಗುರ್ತಿಸುವುದನ್ನು ವಿರೋಧಿಸುತ್ತಾರೆ. ಭಾರತೀಯ ಹಾಗೂ ಕರ್ನಾಟಕದ ಸ್ತ್ರೀವಾದಿ ಚಿಂತನಕಾರರು ಇದಕ್ಕೆ ಹೊರತಾಗಿಲ್ಲ. ಸ್ತ್ರೀವಾದಿ ಚಿಂತಕರು ಕುಟುಂಬದಲ್ಲಿ, ಸಮಾಜದಲ್ಲಿ ಹೆಣ್ಣು ಜೈವಿಕ ಕಾರಣದಿಂದಾಗಿಯೇ ಹೇಗೆ ಎರಡನೆಯ ದರ್ಜೆಯ ಪ್ರಜೆಯಾಗಿರುವಳು ಎನ್ನುವುದನ್ನು ವಿಶ್ಲೇಷಿಸುತ್ತಾರೆ. ಜೈವಿಕ ಸಹಜವಾದ ಲೈಂಗಿಕ ಭಿನ್ನತೆಯನ್ನೇ ಆಧಾರವಾಗಿಟ್ಟುಕೊಂಡು ಶ್ರೇಷ್ಠ-ಕನಿಷ್ಠ, ಸಂಸ್ಕೃತಿ-ಪ್ರಕೃತಿ ಎಂದು ತಾರತಮ್ಯವನ್ನು ಸೃಷ್ಟಿಸಿ ಪುರುಷ

ಪ್ರಧಾನ ವಾಡಿಕೆಯನ್ನು ಗಮನಿಸಬೇಕು. ಅವ್ವ ಅಮ್ಮ ಈ ಪದಗಳೂ ಕೂಡ ಮಾತೃತ್ವವನ್ನೇ ಪ್ರಧಾನವಾಗಿ ಧ್ವನಿಸುತ್ತದೆ. ಅಲ್ಲದೆ ಹೆಣ್ಣು ದೇವತೆಗಳೆಲ್ಲ ಫಲವಂತಿಕೆಯಿಂದಲೇ ಗುರುತಿಸಿಕೊಂಡಿರುವವರು. ಫಲವಂತಿಕೆಯಿಂದಲೇ ಅಧಿಕೃತತೆಯನ್ನು ಚಹರೆಯನ್ನು ಪಡೆದುಕೊಂಡ ಹೆಣ್ಣು ದೈವಗಳನ್ನು ಸ್ತ್ರೀಶಕ್ತಿಯ ನೆಲೆಯಲ್ಲಿ ನಿರ್ವಚಿಸಲಾಗದು.

ಕೊಸಾಂಬಿ ಮತ್ತು ಸಿದ್ದಲಿಂಗಯ್ಯನವರು ದೇವತೆಗಳ ಕುರಿತು ಮಾಡಿರುವ ನಿರ್ವಚನಗಳನ್ನು ಗಮನಿಸಬಹುದು.

ಮಕ್ಕಳನ್ನು ಹೆರುವ ತಾಯಿಯಂತೆಯೇ ಪ್ರಕೃತಿಯೂ ಫಲವಂತಳಾಗಿದ್ದಾಳೆಂದೇ ಪ್ರಕೃತಿಯನ್ನು ದೇವತೆ ಎಂದು ಗುರುತಿಸಲಾಗುತ್ತದೆ. ಶಿಲಾಯುಗದ ಎಲ್ಲ ದೇವತೆಗಳು ಸ್ತ್ರೀಯರೆ. ಪಶುಪಾಲನೆ ಆರಂಭಗೊಂಡು ಪುರುಷರ ಕೈಗೆ ಪಶುಸಂಪತ್ತು, ಸೇರಿಹೋಗಿ ಪಿತೃಸ್ವಾಮ್ಯ ಸಮಾಜ ಹುಟ್ಟಿಕೊಂಡ ನಂತರದಲ್ಲಿಷ್ಟೇ ಪುರುಷ ದೇವತೆಗಳು ಬಂದದ್ದು (ಕೊಸಾಂಬಿ ಡಿ.ಡಿ. ಉದ್ಧೃತ; ಬಾಲಗೋಪಾಲ್ ೧೯೯೮, ಪುಟ ೩೨-೩೩)

ಹೆಣ್ಣಿನ ಗರ್ಭಧಾರಣೆ ಮತ್ತು ಭೂಮಿಯ ಸಸ್ಯಧಾರಣೆ ಇವೆರಡಕ್ಕೂ ಸಾಮ್ಯತೆಯನ್ನು ಕಂಡುಕೊಂಡ ಆದಿಮಾನವ ಹೆಣ್ಣು ಮತ್ತು ಭೂಮಿ ಇವೆರಡೂ ಪ್ರಾಚ್ಯ ವಸ್ತುಗಳೆಂದು ಭಾವಿಸಿದ ............ ಆದಿಮಾನವನ ಮನಸ್ಸಿನಲ್ಲಿ ಹೆಣ್ಣು ಮತ್ತು ಪ್ರಾಣಿ ಈ ಎರಡು ಸಂಗತಿಗಳು ವಿಶೇಷವಾದ ಆಸಕ್ತಿಯನ್ನು ಕೆರಳಿಸಿದವು. ಲೈಂಗಿಕ ಸಂತೋಷದ ಮೂಲಾದಾರವಾದ್ದರಿಂದ ಹೆಣ್ಣಿನ ಬಗ್ಗೆಯೂ, ಆಹಾರ ಮೂಲವಾದ್ದರಿಂದ ಪ್ರಾಣಿಗಳ ಬಗ್ಗೆಯೂ ನೆಲೆಯಲ್ಲಿಯೇ ವ್ಯಾಖ್ಯಾನಿಸುವರು.

ಮಾತೃದೈವ ಪರಿಕಲ್ಪನೆ ಮನುಷ್ಯನಲ್ಲಿ ಆದಿಯಿಂದಲೇ ಬೆಳೆದು ಬಂದಿದೆ. ಮನುಷ್ಯನ ಬದುಕಿನ ಆಗು-ಹೋಗುಗಳಿಗೆ ಸ್ತ್ರಿ ಪ್ರೇರಕ ಶಕ್ತಿಯೆಂದು ನಂಬಿದ್ದರಿಂದ ಹೆಣ್ಣನ್ನು ಶಕ್ತಿಯ ಮೂಲ ಆದಿಶಕ್ತಿ-ಜಗನ್ಮಾತೆ ಎಂದು ಭಾವಿಸಿದರು. ಭಯ-ಭಕ್ತಿಯಿಂದ ಮಾತೃದೇವತಾರಾಧನೆ ನಡೆಸಿದರು. (ಶಾಲಿನಿ ರಘುನಾಥ ೨೦೦೨, ಪುಟ ೩).

ಸಂತತಿ ಬರಲು, ಅದು ಆಹಾರಾದಿಗಳನ್ನು ಪಡೆದು ಬೆಳೆಯಲು ಕಾರಣಳಾದ ಜನನಿಯನ್ನೇ ಬೃಹತ್ ರೂಪದಲ್ಲಿ ಕಂಡ, ಪೂಜಿಸಿದ, ಸಫಲತೆಗೆ ಅವಳನ್ನು ಪ್ರಾರ್ಥಿಸಿದ, ಸೃಷ್ಟಿ-ಪುಷ್ಟಿ (ಜನನ ಹಾಗೂ ಪೋಷಣೆ)ಗೆ ಹೆಣ್ಣೇ ಕಾರಣ! ಅದರಂತೆ ಕಾಳು, ಹೆಣ್ಣು ಬೆಳೆಗೆ ಕಾರಣವಾದ ಭೂಮಿಯೂ ಹೆಣ್ಣು ದೇವತೆಯೇ! (ಜ್ಯೋತ್ಸ್ನಾ ಕಾಮತ್, ೧೯೯೯ ಪುಟ ೧೧).

ಎಂದೇ ಹೆಣ್ಣು ದೇವತೆಗಳನ್ನು ಮಹಿಳಾ ಚಿಂತಕರು ನಿರ್ವಚಿಸುತ್ತಾರೆ. ಲೌಕಿಕ ನೆಲೆಯಲ್ಲಿ ಪ್ರಕೃತಿಯನ್ನು ಹೆಣ್ಣಿನೊಂದಿಗೆ ಸಮೀಕರಿಸುವುದನು ವಿರೋಧಿಸುವ ಸ್ತ್ರೀ ಚಿಂತಕರು, ಅಲೌಕಿಕ ನೆಲೆಯಲ್ಲಿ

ಈ ಬಗೆಯ ನಿರ್ವಚನಗಳನ್ನು ಒಪ್ಪಿಕೊಂಡು ಬಿಡುತ್ತಾರೆ. ಪ್ರಕೃತಿ ಮತ್ತು ದೈವಗಳು ಭೋಗ ಮತ್ತು ಉಪಭೋಗದಲ್ಲಿಯೇ ವ್ಯಾಖ್ಯಾನಿಸಲ್ಪಟ್ಟಿವೆ. ರಾಷ್ಟ್ರೀಯತೆಯ ಪರಿಕಲ್ಪನೆಯಲ್ಲಿ ಹುಟ್ಟಿಕೊಂಡ ಭಾರತಮಾತೆ, ಕರ್ನಾಟಕ ಮಾತೆ ಎನ್ನುವ ಪರಿಕಲ್ಪನೆಗಳು ಕೂಡ, ಮಹಿಳೆಯ ಸಮಗ್ರ ವ್ಯಕ್ತಿತ್ವವನ್ನು ನಿರಾಕರಿಸುತ್ತ ಮಾತೃತ್ವವನ್ನೇ ವೈಭವಿಕರಿಸುತ್ತವೆ.

"ಪ್ರಕೃತಿ ಸಂಸ್ಕೃತಿಯೆನ್ನುವ ದ್ವಂದ್ವ ವರ್ಗಿಕರಣ ಪಾಶ್ಚಿಮಾತ್ಯ ಸಂಸ್ಕೃತಿಯ ಸಂದರ್ಭದಲ್ಲಿ ಹೆಚ್ಚು ಪ್ರಸ್ತುತವೆನ್ನುವುದಾದರೂ ಒಂದಲ್ಲ ಒಂದು ರೀತಿಯ ಇದೆ ಬಗೆಯ ಕಲ್ಪನೆ ಹಾಗೂ ಆಲೋಚನೆಗಳನ್ನು ಇತರ ಸಂಸ್ಕೃತಿಗಳಲ್ಲೂ ಕಾಣಬಹುದು. ಮಕ್ಕಳನ್ನು ಹೊತ್ತು, ಹೆತ್ತು, ಸಾಕುವ ಸಂತಾನೋತ್ಪತ್ತಿಯ ಕಾರ್ಯವನ್ನು ಮಹಿಳೆಯ ಪ್ರಾಥಮಿಕ ಕೆಲಸವೆಂಬಂತೆ ಬಿಂಬಿಸುವ ಪುರುಷ ಸಮಾಜ ಆಕೆಯನ್ನು ಪ್ರಕೃತಿಯೊಂದಿಗೆ ಸಮೀಕರಿಸಿದೆ. ಸ್ತ್ರೀ ಪ್ರಕೃತಿಯ ನಿಕಟವರ್ತಿ ಅಥವಾ ಆಕೆಯೇ ಪ್ರಕೃತಿ. ಸ್ತ್ರೀಯನ್ನು ಪ್ರಕೃತಿಯೊಂದಿಗೆ ಮತ್ತು ಪುರುಷನನ್ನು ಸಂಸ್ಕೃತಿಯೊಂದಿಗೆ ಸಮೀಕರಿಸುವ ಕಾಯಕದಲ್ಲಿ ೧೯ನೆಯ ಶತಮಾನದ ಆತ್ಮವಿಶ್ವಾಸಿ ವೈಜ್ಞಾನಿಕ ಪ್ರಜ್ಞೆಯೂ ಹಿಂದೆ ಬೀಳಲಿಲ್ಲ. ಈ ಹಿನ್ನೆಲೆಯಿಂದ ವೈಜ್ಞಾನಿಕ ಸಂಸ್ಕೃತಿಯನು ಗಂಡು ತರ್ಕ ಮತ್ತು ಹೆಣ್ಣು ವಿಚಾರ ಹೀನತೆಗಳ ನಡುವಿನ ಆಧುನಿಕತೆ ಮತ್ತು ಪರಂಪರೆಗಳ ಹೋರಾಟವೆಂಬಂತೆಯು ಚಿತ್ರಿಸಲಾಗಿದೆ.............. ಆಧುನಿಕ ಮಾನವ ಚರಿತ್ರೆಯ ಪ್ರಗತಿಯ ಮೇಲೆ ಹೆಚ್ಚು ಅಧಿಕಾರ ಸ್ಥಾಪನೆಯ ಕತೆಯು ಹೌದು............. ಪ್ರಕೃತಿಯನ್ನು ಸ್ತ್ರೀಯಾಗಿ ತಾಯಾಗಿ ಕಾಣಲಾಗಿದೆ. ಇಂತಹ ವ್ಯಕ್ತಿತ್ವಾರೋಪಣೆ ಸ್ತ್ರೀಯನ್ನು ಅಲೌಕಿಕಗೊಳಿಸಿ, ಮೊದಲನೆಯ ಸ್ಥಾನಕ್ಕೆ ಏರಿಸುತ್ತದೆ.

(ತೇಜಸ್ವಿನಿ ನಿರಂಜನ, ಸೀಮಂತಿನಿ ನಿರಂಜನ, ೧೯೯೪, ಪುಟ ೨೦-೨೧)

ತೇಜಸ್ವಿನಿ ಸೀಮಂತಿನಿಯರಂತೆ ಸ್ತ್ರೀ ದೇವತೆಗಳ ಹಿಂದಿರುವ ಪುರುಷ ರಾಜಕಾರಣವನ್ನು ಅರ್ಥೈಸುವವರು ಕಡಿಮೆ. ಬಹುಪಾಲು ಮಹಿಳಾ ಚಿಂತಕರು ಹೆಣ್ಣನ್ನು ಪ್ರಕೃತಿ ನೆಲೆಯಲ್ಲಿಯೇ ವ್ಯಾಖ್ಯಾನಿಸುವರು.

**ಪೂಜಾರಿಣಿ : ಸ್ತ್ರೀಶಕ್ತಿ ಕೇಂದ್ರ ೨**

ಮಾತೃದೇವತಾ ಪರಂಪರೆಯಲ್ಲಿ ಕಾಣಿಸಿಕೊಳ್ಳುವ ಮಹಿಳಾ ಪೂಜಾರಿಗಳನ್ನು ಮಾತೃಪ್ರಧಾನ ಸಿದ್ಧಾಂತವು ತನ್ನ ವೈಚಾರಿಕ ಸಮರ್ಥನೆಗಾಗಿ ಬಳಸಿಕೊಂಡಿದೆ. ಪೂಜಾರಿಣಿಯರ ಕುರಿತು ವಿದ್ವಾಂಸರು ನೀಡಿದ ವಿವರಣೆಗಳನ್ನು ಗಮನಿಸಬೇಕು. ದೇವಿಪ್ರಸಾದರು ಖಾಸಿ ಜನಾಂಗದವರನ್ನು ಮಾತೃಪ್ರಧಾನ ಸಮಾಜದವರು ಎಂದು ಗುರುತಿಸಿ, ಅಲ್ಲಿ.............. ಪುರುಷ ಪುರೋಹಿತ ಧಾರ್ಮಿಕ ಕ್ರಿಯಾ ವಿಧಿಗಳನ್ನು ಆಚರಿಸುವಾಗ ಅವನ ಬಳಿಯಲ್ಲಿಯೇ ಒಬ್ಬ ಮಹಿಳಾ ಪುರೋಹಿತಳು ಕುಳಿತಿರುತ್ತಾಳೆ. ಈ ಮಹಿಳಾ ಪುರೋಹಿತಳ ಅನುಪಸ್ಥಿತಿಯಲ್ಲಿ ಪುರುಷ ಪುರೋಹಿತನಿಗೆ ಯಾವ ಬೆಲೆಯೂ ಇಲ್ಲ. ಇದರ

ಅರ್ಥವೇನು? ಈ ವಿಷಯದಲ್ಲಿಯೂ ಸಹ ಒಂದು ಕಾಲದಲ್ಲಿ ಸ್ತ್ರೀಯರಿಗೆ ದಕ್ಷತೆ ಇದ್ದಿತು......... (ದೇವಿಪ್ರಸಾದ ಚಟ್ಟೋಪಾಧ್ಯಾಯ ೧೯೯೭ ಪುಟ ೪೦)

ಎಂದು ಹೇಳುವರು ಕೊಸಾಂಬಿ ಅವರು "............... ಮಾತೃದೇವತೆಗಳ ಪೂಜೆಗಳನ್ನು ಮೊದಲಿಗೆ ಮಹಿಳೆಯರೇ ನಿರ್ವಹಿಸುತ್ತಿದ್ದರು. ಅಷ್ಟೆ ಅಲ್ಲದೆ ಆ ಪೂಜಾ ಸ್ಥಳಗಳಿಗೆ ಪುರುಷರು ಹೋಗುವಂತೆ ಕೂಡ ಇರಲಿಲ್ಲ". (ಕೊಸಾಂಬಿ ಡಿ.ಡಿ.ಉದ್ಧೃತ ಬಾಲಗೋಪಾಲ್, ೧೯೯೮ ಪುಟ ೩೩) ಎಂದು ಹೇಳಿದರೆ, ಗುರುಮೂರ್ತಿ ಅವರು ಹೀಗೆ ಅರ್ಥೈಸುವರು. **"ಮಾತೃದೇವತಾ ಸಂಪ್ರದಾಯದಲ್ಲಿ ಸ್ತ್ರೀಯರೇ ಪೂಜಾರಿಣಿಯರು. ಪುರುಷ ಪ್ರಧಾನ ಅಥವಾ ಶಿಷ್ಟ ಸಂಪ್ರದಾಯದಲ್ಲಿ ಸ್ತ್ರೀಯರು ಪೂಜಾರಿಗಳಾಗುವುದು ನಿಷೇಧ ಇರುವಂತೆ ಮಾತೃದೇವತಾ ಸಂಪ್ರದಾಯದಲ್ಲಿ ಪುರುಷರು ಪೂಜಾರಿಗಳಾಗುವುದು ನಿಷೇಧ"** (ಗುರುಮೂರ್ತಿ ಕೆ.ಜಿ ೧೯೯೬ ಪುಟ ೭೮) ಮೇಲಿನ ವಿದ್ವಾಂಸರೆಲ್ಲ ಫಲವಂತಿಕೆಯ ನೆಲೆಯಲ್ಲಿ ಗೌರವಿಸಲ್ಪಡುವ ದೇವತಾ ಸಂಪ್ರದಾಯದ ಪೂಜಾರಿಣಿಯರನ್ನು ಧಾರ್ಮಿಕ ಮಹಿಳಾ ಸಬಲೀಕರಣ ನಿಲುಮೆಯಲ್ಲಿಯೇ ನಿರ್ವಚಿಸುತ್ತಾರೆ. ಈಗಾಗಲೇ ಚರ್ಚಿಸಿದಂತೆ ಈ ಹೆಣ್ಣು ದೈವಗಳು ಸಾಮಾಜಿಕ ವ್ಯವಸ್ಥೆಯಲ್ಲಿ ಗೌರವಿಸಲ್ಪಟ್ಟಿರುವುದೆ ಪ್ರಜನನ ಶಕ್ತಿಯ ಮೂಲಕ. ಇಂತಹ ಮಾತೃದೇವತಾ ಪರಂಪರೆಯಲ್ಲಿ ಕಾಣಿಸಿಕೊಳ್ಳುವ ಪೂಜಾರಿಣಿಯ ಸ್ವರೂಪವೆಂಥದ್ದು? ಪುರುಷ ಪೂಜಾರಿಗೂ, ಸಾಮಾಜಿಕ ಸಂದರ್ಭದಲ್ಲಿರುವ ಅರ್ಥ ನಿರ್ವಚನದ ವ್ಯತ್ಯಾಸವೇನು? ಮಹಿಳಾ ಪೂಜಾರಿಣಿಗಳು ಪ್ರತಿನಿಧಿಸುವ ಸಂಸ್ಕೃತಿಯ ಸ್ವರೂಪ ಎಂಥದ್ದು? ಪೂಜಾರಿಣಿ, ದೇವರ ಮತ್ತು ಭಕ್ತರ ಮಧ್ಯವರ್ತಿಯಾಗಿ ಎಂತಹ ಬೇಡಿಕೆಗಳನ್ನು ಪೂರೈಸುತ್ತಾಳೆ? ಹೆಣ್ಣಿಗೆ ದೊರೆತ ಪೌರೋಹಿತ್ಯದ ಸ್ಥಾನ ಅವಳಿಗೆಂತಹ ಆತ್ಮವಿಶ್ವಾಸವನ್ನು ಸಾಮಾಜಿಕ ಹಾಗೂ ಧಾರ್ಮಿಕ ಸ್ಥಾನಮಾನಗಳನ್ನು ನೀಡುತ್ತದೆ ಎನ್ನುವ ಪ್ರಶ್ನೆಗಳನ್ನಿಟ್ಟುಕೊಂಡು ವಿಶ್ಲೇಷಣೆಗೆ ಇಳಿಯಬೇಕಾಗಿದೆ. ಯಾಕೆಂದರೆ ಮಹಿಳಾ ಪೂಜಾರಿಕೆಯನ್ನು ಎತ್ತಿ ಹಿಡಿಯುವ ವಿದ್ವಾಂಸ ವ್ಯಾಖ್ಯಾನಗಳು ಅವಳ ಕಾರ್ಯ ವ್ಯಾಪ್ತಿಯ ಒಟ್ಟು ಸ್ವರೂಪವನ್ನು ನಿರ್ವಚಿಸುವುದಿಲ್ಲ.

ಕ್ಷೇತ್ರಾಧ್ಯಯನದಲ್ಲಿ ದೊರೆತ ಈ ಕೆಳಗಿನ ಮಾಹಿತಿಗಳನ್ನು ಆಧಾರವಾಗಿಟ್ಟುಕೊಂಡು ಪೂಜಾರಿಣಿಯರು ಕೆಲಸಗಳನ್ನು ವಿಶ್ಲೇಷಿಸಲಾಗಿದೆ. ನನ್ನ ಊಹೆ ಎಂದರೆ ಪೂಜಾರಿಣಿಯರು ಪುರುಷವ್ಯವಸ್ಥೆಯ ಮಧ್ಯವರ್ತಿಯಾಗಿಯೇ ಕೆಲಸ ನಿರ್ವಹಿಸುತ್ತಾರೆ ಅದನ್ನು ಮುಂದೆ ವಿಶ್ಲೇಷಿಸಲಾಗಿದೆ. ಪೂಜಾರಿಣಿಯರು ಭಕ್ತರಿಂದ ಬಂದ ಎಂತಹ ಹರಕೆಗಳನ್ನು ದೇವಿಗೆ ತಲುಪಿಸಿ ಅವುಗಳು ಫಲಕಾರಿಯಾಗಲು ಪ್ರಯತ್ನಿಸುತ್ತಿದ್ದರು ಎನ್ನುವುದನ್ನು ವಿಶ್ಲೇಷಿಸುವ ಅಗತ್ಯವಿದೆ. ಸಾಂದರ್ಭಿಕವಾಗಿ ಮೂರು ಕ್ಷೇತ್ರಗಳಲ್ಲಿ ಮಾಡಿದ ಕ್ಷೇತ್ರಕಾರ್ಯಾಧ್ಯಯನ ವಿವರಗಳನ್ನು ಈ ಕೆಳಗೆ ಸಂಕ್ಷಿಪ್ತವಾಗಿ ಕೊಡಲಾಗಿದೆ.

೪೦-೪೫ ವರ್ಷಗಳಿಂದಲು ಕಮಲಾಪುರದ ತಿಮ್ಲದಕೇರಿಯ ನಿಜಲಿಂಗಮ್ಮ ದೇವಿಯ ಗುಡಿಯ ಪೂಜಾರಿಣಿಯನ್ನು ಮಾಡಿಕೊಂಡು ಬಂದ ಪೂಜಾರಿ ನಿಂಗಮ್ಮನೇ ಈ ದೇವಸ್ಥಾನದ ಮೊದಲ ಮಹಿಳಾ ಪೂಜಾರಿ. ಈ ಹಿಂದೆ 'ನಿಜಲಿಂಗಮ್ಮ ದೇವಿ'ಯ ಪೂಜಾರಿಕೆಯನ್ನು ಕುರುಬರ ಮುದುಕಪ್ಪನು ನಡೆಸಿಕೊಂಡು ಹೋಗುತ್ತಿದ್ದನು. ಆತನ ನಂತರ ಮನೆಯಲ್ಲಿ ಗಂಡು ಸಂತಾನ ಇರಲಿಲ್ಲವಾದ್ದರಿಂದ ಪೂಜಾರಿಕೆಯು ಮುದುಕಪ್ಪನ ಮನೆತನದಿಂದ ಕೈತಪ್ಪಿ ಹೋಯಿತು. ಕುರುಬರು ನಾಯಕ, ಹೊಲೆ ಮಾದಿಗರಿಗಿಂತ ಉತ್ತಮ ಜಾತಿಯವರು ನಿರ್ವಚಿಸಿದ ಮಡಿ, ಮೈಲಿಗೆ ಪರಿಕಲ್ಪನೆಯನ್ನು ಪಾಲಿಸುವ ಕುರುಬರಲ್ಲಿ ಹೆಂಗಸರು ಪೂಜಾರಿಕೆಯನ್ನು ಮಾಡಲಾಗುವುದಿಲ್ಲ ಅಲ್ಲದೆ ಪೂಜಾರಿಕೆ ಮಾಡುವ ಹೆಂಗಸರು ದೇವಿಯ ಹೆಸರಿನಲ್ಲಿ ಮುತ್ತು ಕಟ್ಟಿಸಿಕೊಳ್ಳಬೇಕಾಗುತ್ತದೆ. ಕುರುಬರು ತಳಸಮುದಾಯದವರಿಗಿಂತಲೂ ಉತ್ತಮ ಜಾತಿಯವರು ಎಂದು ಸಮಾಜದಲ್ಲಿ ಪರಿಗಣಿತವಾದ್ದರಿಂದ, ಅವರಲ್ಲಿ ದೇವಿಗೆ ಹೆಣ್ಣು ಮಕ್ಕಳನ್ನು ಅರ್ಪಿಸುವ ಪದ್ಧತಿಯಲ್ಲಿ ಹೀಗಾಗಿ ನಾಯಕ ಜಾತಿಯ ನಿಂಗಮ್ಮನಿಗೆ ಮುತ್ತು ಕಟ್ಟಿಸಿಕೊಂಡು ಪೂಜಾರಿಕೆ ಮಾಡುವುದು ಅನಿವಾರ್ಯವಾಯಿತು. ಅವಳಿಗಾಗ ಹತ್ತು ವರ್ಷ ವಯಸ್ಸು, ಭಕ್ತರು ಹೊತ್ತುಕೊಂಡು ಬಂದ ಎಂತಹ ಬೇಡಿಕೆಗಳನ್ನು ದೇವಿಗೆ ತಲುಪಿಸಲಾಗುತ್ತದೆ ಎನ್ನುವ ವಿವರಗಳನ್ನು ಪೂಜಾರಿ ನಿಂಗಮ್ಮನ ಮಾತುಗಳಲ್ಲಿಯೇ ಕೊಡಲಾಗಿದೆ.

ನಾನು ನಲ್ವತ್ತು ನಲ್ವತ್ತೈದು ವರ್ಷಗಳಿಂದ ನೋಡಕೊಂಡ ಬಂದ್ಹಂಗ ಮಕ್ಕಳಾಗದವರು ಮದ್ವಿಯಾಗದವರು,ಚಲೋಪಸಲು ಬರ್ಲೀ ಎಂದವರು ಹೆಚ್ಚಾಗಿ ನಡ್ಕೋತಾರ ದೇವಿ ದಯದಿಂದ ಮಕ್ಕಳನ್ನು ಪಡೆದವರು ಸಣ್ಣ ತೊಟ್ಟಿಲು ಕೊಡತಾರ. ದೇವಿ ಆಶೀರ್ವಾದದಿಂದ ಮದ್ವಿಯಾದವರು, ದೇವಿಗೆ ಸೀರಿ, ಕುಬಸಾ, ತಾಳಿಸಾಮಾನು ಕೊಡತಾರ. ಚಲೋ ಬೆಳಿ ಬಂದವರು ಮಕ್ಕಳಾಗಬೇಕೆಂದವರು ಮದ್ವಿಯಾಗಬೇಕೆಂದವರು, ಐದ ಮಂಗಳವಾರಾನೋ ಇಲ್ಲ ಐದು ಶುಕ್ರವಾರನೋ ನಡಕೋ ಬೇಕಾಗತೈತಿ, ನನ್ನ ಅನುಭವಕ್ಕೆ ಬಂದಂಗ ಗಂಡಸರಾರು ಇಂಥಾ ಹರಕೆ ಹೊತ್ತಿಲ್ಲ. ಹೆಂಗಸರು ಮಕ್ಕಳಾ ಕೊಡು, ಮದ್ವಿಮಾಡು ಅಂತ ದೇವಿ ಹತ್ರ ಕೇಳಿಕೊಳ್ಳದು.

ಹೊಸಪೇಟೆಯ ಗಾಳೆಮ್ಮನ ಗುಡಿಯ ಪೂಜಾರಿಕೆಯನ್ನು ಐದು ತಲೆಮಾರುಗಳಿಂದಲು ಹೆಂಗಸರೇ ಮಾಡಿಕೊಂಡು ಬಂದರಿರುವರು ಬೋವಿ ಜನಾಂಗಕ್ಕೆ ಸೇರಿದ ಈ ಹೆಣ್ಣು ಮಕ್ಕಳು ದೇವಿಯ ಹೆಸರಿನಲ್ಲಿ ಮುತ್ತು ಕಟ್ಟಿಸಿಕೊಂಡು ಗಾಳೆಮ್ಮನ ಪೂಜಾರಿಕೆಯನ್ನು ನಿರ್ವಹಿಸುವರು. ಈ ದೇವಿಯಲ್ಲಿ ಹರಕೆ ಕೇಳಿಕೊಳ್ಳುವವರು ಹೆಚ್ಚಾಗಿ ಮಹಿಳೆಯರೇ ಆಗಿರುತ್ತಾರೆ. ವನಿತಾ, ಭಕ್ತರ ಹರಕೆಯ ಸ್ವರೂಪವನ್ನು ಹೀಗ ವಿವರಿಸಿದಳು.

ಮಕ್ಕಳಾಗದವರು ಬಂದ್ರ, ಮದ್ವಿಯಾಗದವರು ಬಂದ್ರದೇವಿಗೆ ಐದು ಇಲ್ಲಾ ಒಂಭತ್ತು ಮಂಗಳವಾರ ನಡಕೊಳ್ಳಾಕ ಹೇಳ್ತಿವಿ. ಹರಕಿ ಕೈಗೂಡಿದ್ರ ಇಂಥಾ ಹರಿಕಿಗಿ ಇಂಥಾ ವಸ್ತುಗಳನ್ನು

ಕೊಡಾಕ ಹೇಳ್ತಿವಿ. ಹರಕಿ ಹೊತ್ತು ಮದ್ವಿಯಾದ ಹೆಂಗಸರು ದೇವಿಗೆ ಹಳದಿ ಸೀರಿ, ಹಳದಿ ಬಿಳಿ, ಕಣಾ ಉಡಿ ಕೊಡಬೇಕಾಗುತ್ತದೆ. ತಾಕತ್ತಿದ್ದವರು ತಾಳಿಸಾಮಾನು ಕೊಡತಾರು. ದೇವಿಗೆ ಬೇಡಿಕೊಂಡು ಮಕ್ಕಳನ್ನು ಪಡಕೊಂಡವರು ಗುಡಿಗೆ ತೊಟ್ಟಿಲಾ ಕೊಡಬೇಕಾಗ್ತದೆ. ಶಕ್ತಿಯಿದ್ದವರು ಸಣ್ಣ ಬೆಳ್ಳಿ ತೊಟ್ಟಿಲಾ ಕೊಡಬೇಕಾಗುತ್ತದೆ. ಶಕ್ತಿಯಿದ್ದವರು ಸಣ್ಣ ಬೆಳ್ಳಿ ತೊಟ್ಟಿಲಾ ಕೊಡತಾರ. ಇರ್ಲಾರದವು ಸಣ್ಣ ಕಟಗಿ ತೊಟ್ಟಿಲಾ ಕೊಡತಾರ. ಮುತ್ತೈದಿ ಹೆಣ್ಣು ಮಕ್ಕಳು ದೇವಿ ಅರಿಸಿನ ಕುಂಕುಮಾ ದಿನ ಹಚಕೊಂತ ಇದ್ದರ ಸುಮಂಗಲಿ ಸಾವು ಬರ್ತದೆ. ಮೊಡವಿ ಎದ್ದ ಹುಡಿಗೇರೂ ದೇವಿಗೆ ಹರಕೆ ಹೊತ್ತು, ಮೊಡವಿ ಕಳಕೊಂಡಾಗ ಮೊಡವಿ ಹೋದ್ರ ಉಪ್ಪಾ ಮೆಣಸಿಕಾಯಿ ದೇವಿಗೆ ಕೊಡತಾರ, ಹಂಗ ಬೆಳಿಚಲೋ ಬೇಕೆಂದವರು, ರೋಗಾರುಜಿನಿ ಬಂದವರು ದೇವಿಗೆ ನಡ್ಕೋತಾರ ದೇವಿ ಎಲ್ಲರಿಗೂ ಚಲೋ ಮಾಡತಾಳ.

ಕುಷ್ಟಗಿ ತಾಲ್ಲೂಕಿನ ಬಂಡ್ರಗಲ್ಲು ದುರುಗಮ್ಮನ ಪೂಜಾರಿಕೆ ಮಾಡುತ್ತಿರುವವಳು ದುರುಗಮ್ಮ, ದುರುಗಮ್ಮನ ಪೂಜಾರಿಯಾಗುವವಳು, ಮದುವೆಯಾಗುವಂತಿಲ್ಲಾ. ಪೂಜಾರಿ ದುರುಗ್ವನು ಹೊಲೆಯರ ಜಾತಿಗೆ ಸೇರಿದವಳು. ***"ಕಂಕಣ ಭಾಗ್ಯ ಬೇಕೆಂದವರು, ಮಕ್ಕಳ ಬೇಕೆಂದವರು ದೇವಿಗೆ ನಡ್ಕೋತಾರ ದೇವಿ ರೋಗಾರುಜಿನಿಗೂ ಕಳಿತಾಲು ದುರುಗವ್ವನ ದರ್ಶನಾತಗೊಂಡು ಬಿತ್ತಿದ್ರ ಹೊಲದಾಗ ಬೆಳೆಸೊಂಪಾಗ ಬರ್ತಾವು ಎಂದಳು."***

ಪೂಜಾರಿಣಿಯು ಪುರುಷಶಾಹಿ ವ್ಯವಸ್ಥೆಯ ಪರವಾಗಿಯೇ ಕೆಲಸ ಮಾಡುತ್ತಿರುತ್ತಾಳೆ. ಮುತ್ತೈದೆತನವನ್ನು ವೈಭವೀಕರಿಸುವ ಮದುವೆಯನ್ನು ಹೆಣ್ಣಿಗೆ ಅನಿವಾರ್ಯವಾಗಿಸುವ ಕುಟುಂಬ ಹಾಗೂ ಸಮಾಜದ ಅಪೇಕ್ಷೆಗಾಗಿ ತಾಯಿಯಾಗುವ ಹಂಬಲವನ್ನು ತುಂಬುವ ಕೆಲಸವನ್ನು ಮಹಿಳಾ ಪೂಜಾರಿಗಳು ಮಾಡುತ್ತಿರುತ್ತಾರೆ. ಧಾರ್ಮಿಕ ಸಂಸ್ಥೆಗಳು ಪುರುಷರಿಂದಲೇ ರೂಪುಗೊಂಡಿರುವ ಪುರುಷ ಪರವಾಗಿಯೇ ಇರುವ ಸಂಸ್ಥೆಗಳು. ಇಂತಹ ಧಾರ್ಮಿಕ ವ್ಯವಸ್ಥೆಯಲ್ಲಿ ಪುರುಷನು ಅದರಲ್ಲೂ ಪುರೋಹಿತನು ಪ್ರಬಲನಾಗಿರುತ್ತಾನೆ. ಮಹಿಳಾ ಪೌರೋಹಿತ್ಯವು, ಧಾರ್ಮಿಕ ಕ್ಷೇತ್ರದ ಮೇಲಾಗಲಿ, ಆರ್ಥಿಕ, ಸಮಾಜಿಕ, ಹಾಗೂ ರಾಜಕೀಯ ವ್ಯವಸ್ಥೆಗಳ ಮೇಲಾಗಲಿ ಪರಿಣಾಮವನ್ನುಂಟುಮಾಡುವಷ್ಟು ಪ್ರಭಾವಿಯಾಗಿರುವುದಿಲ್ಲ. ಅವಳು ಪುರುಷಶಾಹಿ ವ್ಯವಸ್ಥೆಯ ಮಧ್ಯವರ್ತಿಯಾಗಿಯೇ ಪೂಜಾರಿಕೆಯ ಕೆಲಸವನ್ನು ನಿರ್ವಹಿಸುತ್ತಾಳೆ.

ತಳಸಮುದಾಯದ ಪೂಜಾರಿಣಿಯರು ಪುರುಷಶಾಹಿ ವ್ಯವಸ್ಥೆ ನಡೆಸುವ ದೌರ್ಜನ್ಯವನ್ನು ಎಸಗುವ ಶೋಷಣೆಯನ್ನು ಪ್ರಶ್ನಿಸುವುದಿಲ್ಲ. ಲಿಂಗತಾರತಮ್ಯವನ್ನು ಪ್ರಶ್ನಿಸಿ ನ್ಯಾಯ ದೊರಕಿಸ ಕೊಡುವುದಿಲ್ಲ. ಲಿಂಗ ಸಮಾನತೆಯನ್ನು ಪ್ರತಿಪಾದಿಸುವುದಿಲ್ಲ. ಬದಲಾಗಿ ಪುರುಷಪ್ರಧಾನ ವ್ಯವಸ್ಥೆ ಲೈಂಗಿನ ಭೋಗವನ್ನು ಕಲ್ಪಿಸುವ ಮಧ್ಯವರ್ತಿಯಾಗುತ್ತಾಳೆ.

**'ಪೂಜಾರಿಣಿ'** ಪದಕ್ಕೆ ಶಕ್ತಿ ಬರಬೇಕಾದರೆ ಮಹಿಳಾ ಪೂಜಾರಿಗಳು ಭೋಗ ಪರಂಪರೆ ಮತ್ತು ಮಾತೃತ್ವ ಆರಾಧನಾ ಪ್ರಕ್ರಿಯೆಯಿಂದ ಬಿಡಿಸಿಕೊಳ್ಳಬೇಕು, ಸಮಾಜದ ಸಮಗ್ರ ನೆಲೆಗಳಲ್ಲಿ ಸಮಾನವಾಗಿ ಗುರುತಿಸಿಕೊಳ್ಳುತ್ತಾ ಗೌರವಿಸಲ್ಪಡಬೇಕು. ಕೇವಲ 'ಪೂಜಾರಿಣಿ' ಪದ ಅವಳಿಗೆ ಸಬಲೀಕರಣದ ಆತ್ಮವಿಶ್ವಾಸವನ್ನು ತಂದು ಕೊಡುವುದಿಲ್ಲ.

**ಮಾತೃಪ್ರಧಾನ ಸಮಾಜ ಅಸಂಸ್ಕೃತ :-**

ಸಮೂಹ ಕುಟುಂಬದ ಎಲ್ಲಾ ರೂಪಗಳಲ್ಲೂ ಮಗುವೊಂದರ ತಂದೆ ಯಾರೆಂಬುದು ಖಚಿತವಿರುವುದಿಲ್ಲ. ಆದ್ದರಿಂದ ಎಲ್ಲೆಲ್ಲಿ ಸಮೂಹ ವಿವಾಹ ಅಸ್ತಿತ್ವದಲ್ಲಿರುತ್ತದೆಯೋ ಅಲ್ಲಿ ವಂಶಾವಳಿಯನ್ನು ತಾಯಿಯ ಕಡೆಯಿಂದಷ್ಟೇ ಗುರುತಿಸಲು ಸಾಧ್ಯ. ಹೀಗೆ ತಾಯಿಯ ವಂಶವನ್ನಷ್ಟೇ ಮನ್ನಿಸಲಾಗುತ್ತಿದೆ. ಎಂಬುದು ಇದರಿಂದ ಸ್ಪಷ್ಟವಾಗುತ್ತದೆ. ಇದು ವಾಸ್ತವವಾಗಿ ಎಲ್ಲ ಕಿರಾತಾವಸ್ಥೆಯ ಜನರ ಮಧ್ಯೆಯೂ ಮತ್ತು ಅನಾಗರೀಕಾವಸ್ಥೆಯ ಕೆಳಮಜಲಿನ ಜನತೆಗಳ ಮಧ್ಯೆಯೂ ಕಾಣಬರುತ್ತದೆ. (ಏಂಗೆಲ್ಸ್ ೧೯೮೦, ಪುಟ ೬೧)

ಮಾತೃ ಅಧಿಕಾರ ಎನ್ನುವುದು ಅನಾಗರೀಕ ಕಿರಾತಾವಸ್ಥೆಯ ಘಟ್ಟವಾಗಿ ಗುರುತಿಸಲ್ಪಟ್ಟರೆ ಪಿತೃಪ್ರಧಾನ ವ್ಯವಸ್ಥೆಯು ನಾಗರಿಕ ಸುಸಂಸ್ಕೃತ ಘಟ್ಟವಾಗಿ ಗೌರವಿಸಲ್ಪಟ್ಟಿದೆ. ಭಾರತದಲ್ಲಿ ಮಾತೃಪ್ರಧಾನ ಸಮಾಜವನ್ನು ಆರ್ಯರೊಂದಿಗೆ ಗುರುತಿಸಲಾಗುತ್ತದೆ. ದ್ರಾವಿಡ ಮೂಲದಿಂದ ಗುರುತಿಸಿಕೊಳ್ಳುವ ಮಾತೃಪ್ರಧಾನ ಸಮಾಜವು ಅಸಂಸ್ಕೃತವಾಗಿಯೇ ಪರಿಗಣಿಸಲ್ಪಟ್ಟಿದೆ. ಜೋಗತಿಪಾತರದವರು ಮೊದಲಾದ ಮಾತೃಮೂಲ ಕುಟುಂಬದವರು ಎಂದಿನಂತೆ ಇಂದಿಗೂ ಸುಸಂಸ್ಕೃತರಾಗಿ ಪರಿಗಣಿಸಲ್ಪಟ್ಟಿರುವರು.

**ಮಾತೃಪ್ರಧಾನ ನೆಲೆಗಳು : ವಿಶ್ವಾತ್ಮಕ ಸ್ವರೂಪ**

ಉತ್ತರ ಅಮೇರಿಕಾ, ಆಸ್ಟ್ರೇಲಿಯಾ, ಚೀನಾ ಟಿಬೆಟ್, ಸುದೂರ ಈಜಿಪ್ಟ್ ಮೊದಲಾದ ದೇಶಗಳಲ್ಲಿ ಬೇರಿಂಗ್, ತಿನ್ನೆಹ್, ಕರೇನ್, ಕುಕೂಸ್, ಸೆನೆಕಾ, ಇರಕಾಸ್ ಸುಮುಮಯೆಕುನ್, ಅಗೂನ್ನ, ಲಟುಟಕಾ, ಯುಂಬೆಂಬಾ ಮೊದಲಾದ ಜನಾಂಗಗಳಲ್ಲಿ ಮಾತೃ ಅಧಿಕಾರ ಇದೆ ಎಂದು ಹೇಳಲಾಗಿದೆ. ಹಾಗೇ ಭಾರತದ ಶಾರೋ ಪರ್ವತದಲ್ಲಿ ಕರ್ನಾಟಕ ಕರಾವಳಿ ಪ್ರದೇಶದಲ್ಲಿ ಕೇರಳದಲ್ಲಿ ಖಾಸಿ, ಹಲಬಾ, ಕೈಕಾ, ನಾಯರ್ ಹೀಗೆ ಕೆಲವೆ ಕೆಲವು ಸಮುದಾಯಗಳಲ್ಲಿ ಮಾತೃಪ್ರಧಾನ ಸಾಮಾಜಿಕ ವ್ಯವಸ್ಥೆ ಇದೆ ಎಂದು ವಿದ್ವಾಂಸರು ಹೇಳಿರುವರು. ದೇಶದ ಕೆಲವೇ ಕೆಲವು ಬುಡಕಟ್ಟುಗಳಲ್ಲಿ ಸ್ತ್ರೀಕೇಂದ್ರಿಕೃತವಾದ ಆಚರಣೆಗಳು ಪ್ರಚಲಿತದಲ್ಲಿವೇ ಈ ಸಂಗತಿಯನ್ನೇ ಆಧಾರವಾಗಿಟ್ಟುಕೊಂಡು ಅದನ್ನು ಎಲ್ಲ ಜನಸಮುದಾಯಗಳ ಮೇಲೆ ಆರೋಪಿಸಿ ಅನ್ವಯಿಸಲಾಗದು. ವಿವಿಧ ದೇಶಗಳಲ್ಲಿ ದೊರೆಯುವ ಇಂಥ ಕೆಲವು ಉದಾಹರಣೆಗಳನ್ನಿಟ್ಟುಕೊಂಡು ಇಡೀ ವಿಶ್ವದಲ್ಲಿಯೇ ಸ್ತ್ರೀ ಪ್ರಧಾನ

ಸಮಾಜ ಇತ್ತು ಎನ್ನುವ ಸರಳ ನಿರ್ಣಯಕ್ಕೆ ಬರಬಾರದು. ಮೇಲ್ಪದರಿನಲ್ಲಿ ಸ್ತ್ರೀ ಪ್ರಾಮುಖ್ಯತೆಯನ್ನು ಅಧಿಕಾರವನ್ನು ಹೇಳುವ ಅನೇಕ ಆಚರಣೆಗಳು ನಂಬಿಕೆಗಳು ಆಳದಲ್ಲಿ ಪುರುಷಶಾಹಿ ಧೋರಣೆಗಳ್ನು ಪೋಷಿಸುತ್ತಿರಬಹುದು. ಹೀಗಾಗಿ ಮಹಿಳೆಯನ್ನು ಶ್ರೇಷ್ಟತೆಯ ಮಾನದಂಡದಲ್ಲಿ ಪ್ರತಿಪಾದಿಸುತ್ತಿರುವ ಸಂಗತಿಗಳನ್ನೆಲ್ಲಾ ಬಹಳ ಮುಗ್ಧವಾಗಿ ಅವಸರದಲ್ಲಿ ಪ್ರೀತಿಯಿಂದ ನಂಬಿಕೆಯಿಂದ ಸ್ವೀಕರಿಸಕೂಡದು.

ಸ್ತ್ರೀವಾದದ ಆಶಯ ಪ್ರಧಾನತೆಯೊ? ಸಮಾನತೆಯೋ? ನಾರಿಪ್ರಧಾನ ಸಿದ್ಧಾಂತ ನಿರೂಪಣೆಯಲ್ಲಿ ದೇವಿಪ್ರಸಾದ ಅವರು ಕಾಮಾಕ್ಷ ಪ್ರದೇಶದ ಸ್ತ್ರೀಯರು ಪುರುಷರನ್ನು ಕುರಿಗಳನ್ನಾಗಿಸುತ್ತಿದ್ದರು ಎನ್ನುವ ಕಥೆಯನ್ನು ಹೇಳುತ್ತಾ ಅದನ್ನು ವಿಶ್ಲೇಷಿಸಿದ್ದಾರೆ. ಮೂಲತಃ ಇದು ಸ್ತ್ರೀಪ್ರಧಾನ ಸಮಾಜವನ್ನು ವರ್ಣಿಸುವ ರೀತಿ ಸ್ತ್ರೀಯರು ಅಧೀನ............ ಎನ್ನುವುದನ್ನು ಹೇಳಲು ಈ ರೀತಿ ಕುರಿಗಳನ್ನಾಗಿಸುವ ಕಥೆ ಹೇಳುತ್ತಿದ್ದರು ಅದನ್ನು ಹೀಗೆ ವಿಶ್ಲೇಷಿಸಿದ್ದಾರೆ.............. ಮೂಲತಃ ಇದು ಸ್ತ್ರಿ ಪ್ರಧಾನ ಸಮಾಜವನ್ನು ವರ್ಣಿಸುವ ರೀತಿ ಸ್ತ್ರಿಯರು ಅಧೀನ........... ಎನ್ನುವುದನ್ನು ಹೇಳಲು ಈ ರೀತಿ ಕುರಿಗಳನ್ನಾಗಿಸುವ ಕಥೆ ಹೇಳುತ್ತಿದ್ದರು. (ದೇವಿಪ್ರಸಾದ್ ಚಟ್ಟೋಪಾಧ್ಯಾಯ, ೧೯೯೭, ಪುಟ **೩೪**) ಈ ಮೇಲಿನ ಕಥೆಯನ್ನು ಹೆಣ್ಣಿನ ಕುರಿತು ಭಯವಿರುವ ಪುರುಷ ಮನಸ್ಸುಗಳೇ ಸೃಷ್ಟಿಸಿರಬೇಕು. ಭಾರತೀಯ ಬಹುಪಾಲು ಸಂಸ್ಕೃತಿಗಳು ಮಹಿಳೆಯನ್ನು ಮಾಯೆಯಾಗಿಯೇ ಕಂಡಿವೆ. ಗಂಡಸಿನ ಚಿತ್ತವನ್ನು ಚಂಚಲಗೊಳಿಸುತ್ತ ಭೋಗಾಸಕ್ತಿಗೆ ಎಳೆಸುವ ವ್ಯಕ್ತಿಯಾಗಿಯೇ ಹೆಣ್ಣು ಚಿತ್ರಿತವಾಗಿರುವಳು. ಜನಪದ ಕಥೆಗಳಾಗಿರಬಹುದು ಮಾಟಗಾರ್ತಿಯರನ್ನು ಖಳನಾಯಕಿಯರನ್ನಾಗಿಯೇ ಕಂಡಿವೆ. ಮಹಿಳೆಯರು ಮಂತ್ರ ವಿದ್ಯೆಯಿಂದ ಪುರುಷರನು ವಶೀಕರಸಿಕೊಮಡು ಬೇಕಾದ ಹಾಗೇ ಬಳಸಿಕೊಳ್ಳುವರು ಎನ್ನುವ ನಂಬಿಕೆಯನ್ನು ಈ ಬಗೆಯ ಕಥೆಗಳು ಬಿತ್ತರಿಸುತ್ತವೆ. ಹೆಣ್ಣಿಗೆ ಅಧೀನವಾಗುವ ಭಯ ಗಂಡಸಿಗೆ ಸದಾ ಕಾಡುತ್ತಿತ್ತೋ ಏನೋ ಅದಕ್ಕಾಗಿಯೇ ಈ ಬಗೆಯ ಕಥೆಗಳು ಪ್ರಚಲಿತದಲ್ಲಿರಬೇಕು. ನಾರಿಪ್ರಧಾನ ಸಿದ್ಧಾಂತವನ್ನು ನಿರೂಪಿಸುವಾಗ ದೇವಿಪ್ರಸಾದ ಅವರು ಸಾಂದರ್ಭಿಕವಾಗಿ ಹೇಳಿದ ಕಥೆಗು ಹಾಗೂ ಆ ಕಥೆಯನ್ನು ಸ್ತ್ರೀಪ್ರಧಾನವಾದ ಮಾನದಂಡದಲ್ಲಿಟ್ಟು ವಿಶ್ಲೇಷಿಸಿದ ರೀತಿಗೂ ತಾಳೆಯಾಗುವುದಿಲ್ಲ. ಪುರುಷನಿಷ್ಟ ಧ್ವನಿಯನ್ನು ಒಳಗೊಂಡ ಈ ಮೇಲಿನ ಕಥೆಯನ್ನು ಸ್ತ್ರೀಪ್ರಧಾನ ನೆಲೆಯಲ್ಲಿ ವಿಮರ್ಶಿಸಲಾಗದು. ಆದರೆ ಬಹುಪಾಲು ಸ್ತ್ರೀವಾದಿ ಚಿಂತಕರ ಮಾತೃಪ್ರಧಾನತೆಯ ನಿರ್ವಚನಗಳಿಗೂ ದೇವಿಪ್ರಸಾದರ ನಿರ್ವಚನಕ್ಕೂ ಸಾಮ್ಯತೆ ಕಂಡುಬರ್ತದೆ. ಪುರುಷ ಕೇಂದ್ರೀತ ಅಧಿಕಾರವನ್ನು ಅದು ಮಾಡುತ್ತಿರುವ ತಾರತಮ್ಯವನ್ನು ಎಸಗುತ್ತಿರುವ ಶೋಷಣೆಯನ್ನು ಪ್ರಶ್ನಿಸುತ್ತಿರುವ ನಾವುಗಳು, ಮಾತೃಪ್ರಧಾನತೆಯ ಸ್ತ್ರೀ ಪ್ರಧಾನತೆಯ ಹೆಸರಿನಲ್ಲಿ ಅಂಥವೇ ಮೌಲ್ಯಗಳನ್ನು ಹಾಡಿ ಹೊಗಳುವುದು, ಅವುಗಳಿಗೊಂದು ಘನತೆಯನ್ನು ತಂದುಕೊಡುವುದು ಉಚಿತವಲ್ಲ ಹೆಣ್ಣೆ ಆಗಿರಲಿ, ಗಂಡೇ ಆಗಿರಲಿ ಒಬ್ಬರನು ಕುರಿಗಳನ್ನಾಗಿಸಿ, ಅವರನು ಆಳುವ ಪ್ರಕ್ರಿಯೆಯೇ ಸಮಾನತೆಯ ಮೌಲ್ಯಗಳನ್ನು ವಿರೋಧಿಸುತ್ತದೆ.

ಸ್ತ್ರೀಪ್ರಧಾನತೆಯನ್ನು ಸಮರ್ಥಿಸಿದರೆ ಶೋಷಣೆಯನ್ನು ಸಮರ್ಥಿಸಿದಂತಾಗುತ್ತದೆ. ಯಾವಾಗಲೂ ಪ್ರಧಾನತೆಯು ಮತ್ತೊಬ್ಬರ ಅಧೀನತೆಯನ್ನು ಸಮರ್ಥಿಸುತ್ತಿರುತ್ತದೆ. ಸ್ತ್ರೀಪ್ರಧಾನತೆಯಾಗಲಿ, ಪುರುಷಪ್ರಧಾನತೆಯಾಗಲಿ ಶೋಷಣಾ ಸ್ಥಿತಿಯನ್ನು ಪೋಷಿಸುತ್ತಿರುತ್ತದೆ. ಸ್ತ್ರೀ ವಾದವು ಪಿತೃ ಪ್ರಧಾನ ಮೌಲ್ಯಗಳು ಸೃಷ್ಟಿಸಿದ ಶೋಷಣೆಗಳನ್ನು ವಿರೋದಿಸಬೇಕೆ ಹೊರತು ಪುರುಷರನ್ನಲ್ಲ ಶೋಷಕ ವ್ಯವಸ್ಥೆಯನ್ನು ವಿರೋಧಿಸುತ್ತಿರುವ ನಾವುಗಳು ಮಹಿಳೆಯ ಶೋಷಕ ಸ್ಥಿತಿಯನ್ನು ವೈಭವೀಕರಿಸಿದರೆ ನಮ್ಮ ಅಧ್ಯಯನದ ತಾತ್ವಿಕತೆಯನ್ನು ನಾವೇ ವಿರೋಧಿಸಿದಂತಾಗುತ್ತದೆ ಸ್ತ್ರೀ ಪ್ರಧಾನತೆಯಾಗಲೀ, ಪುರುಷ ಪ್ರಧಾನತೆಯಾಗಲಿ ಎರಡಕ್ಕು ಅಂತಹ ತಾತ್ವಿಕವಾದ ವ್ಯತ್ಯಾಸವೇನಿಲ್ಲ. ಎರಡು ಸ್ಥಿತಿಗಳು ಶೋಷಣೆಯನ್ನು ಸಮರ್ಥಿಸುತ್ತಿರುತ್ತವೆ. ಸ್ತ್ರೀವಾದವು, ಮಹಿಳಾ ಅಧ್ಯಯನವು ಸಮಾನತೆಯ ನೆಲೆಯ ಮೇಲೆ ನಂಬಿಕೆಯಿಟ್ಟು ಕೊಂಡಿದೆ. ಸಮಾಜದ ಎಲ್ಲ ವಲಯಗಳಲ್ಲೂ ಲಿಂಗ ಅಸಮಾನತೆಯನ್ನು ಪ್ರತಿನಿಧಿಸುವ ಸಂಗತಿಗಳು ಇವತ್ತಿಗು ಅಚರಣೆಯಲ್ಲಿ ಸಂಕೇತಾತ್ಮಕವಾಗಿ ಉಳಿದುಕೊಂಡು ಬಂದಿದ್ದರೆ ಅವುಗಳನ್ನು ಅರ್ಥಪೂರ್ಣವಾಗಿ ಧ್ವನಿಸಲು ಬೇರೋಂದು ಪಾರಿಭಾಷಿಕ ಪದವನ್ನು ಕಟ್ಟಿಕೊಳ್ಳುವ ಜರೂರಿದೆ. ಹೆಣ್ಣನ್ನು ದುರ್ಬಲ ಸ್ಥಾನದಲ್ಲಿಟ್ಟು ಅದನ್ನು ನಿಸರ್ಗ ಸಹಜಗೊಳಿಸಿದ ಪುರುಷ ರಾಜಕರಾಣದ ತಂತ್ರಗಳನ್ನು ಹುಸಿಗೊಳಿಸಲು ಸ್ತ್ರೀ ಶೋಷಕ ಸ್ಥಾನದಲ್ಲಿದ್ದ ವಿವರಗಳನ್ನು ದಾಖಲಿಸಬೇಕಿದೆ. ಈ ಹಿನ್ನೆಲೆಯಲ್ಲಿಯೇ ಚರಿತ್ರೆಯಲ್ಲಿ ಮಹಿಳೆ ನಡೆದು ಬಂದ ವಿವಿಧ ಘಟ್ಟಗಳನ್ನು ಅಧ್ಯಯನ ಮಾಡುವ ಅಗತ್ಯವಿದೆ. ಸ್ತ್ರಿ ಶೋಷಕ ಸ್ಥಾನದಲ್ಲಿದ್ದುದನ್ನು ಭಾವನಾತ್ಮಕ ನೆಲೆಯಲ್ಲಿಟ್ಟು ವೈಭನೀಕರಿಸದೇ ಅದನ್ನು ವಸ್ತುನಿಷ್ಟವಾಗಿ ನಿರೂಪಿಸಬೇಕು. ಆದರೆ ಅಂತಹ ಮೌಲ್ಯಗಳನೆಂದೂ ಹಾಡಿಹೊಗಳಿ ಉತ್ತುಂಗಕ್ಕೇರಿಸಕೂಡದು. ಸ್ತ್ರೀವಾದಿ ಚಿಂತನೆಯು, ಮಹಿಳಾ ಅಧ್ಯಯನವು ಪ್ರತಿಪಾದಿಸುತ್ತಿರುವುದು ಸಮಾನ ಸ್ವಾತಂತ್ರ ಮತ್ತು ಸಮಾನ ಗೌರವವನ್ನು ಮಾರಿ,ಕಾಳಿ ದುರ್ಗಿ ಮೊದಲಾದ ದೇವತೆಗಳ ಹೊರ ಆಕೃತಿಗಳ ಕುರಿತು ರಾಮಚಂದ್ರರಾವ್ ಅವರು ನೀಡುವ ಈ ಕೆಳಗಿನ ವಿವರಗಳನ್ನು ಗಮನಿಸಬೇಕು.

ದೇವಿಯ ಮೊದಮೊದಲ ಶಿಲ್ಪಗಳು ಒರಟಾಗಿಯೆ ಇವೆ..........ಕೆಲವೊಮ್ಮೆ ಘೋರವಾದ ಆಕಾರ (ಮಾರಿ,ಕಾಳಿ ದುರ್ಗಿ ಮೊದಲಾದ ಮೂರ್ತಿಗಳು, ತಲೆಯ ಮೇಲೆ ಹಾವಿನ ಸುರುಳಿ ಹಣೆಗಣ್ಣು ಉಳಿದೆರಡು ಬರಿಗಣ್ಣುಗಳು, ಬಾಯಲ್ಲಿ ಕೊರೆದಾಡೆ ಹೊರಚಾಚಿ ಇಳಿಬಿದ್ದ ನಲಿಗೆ ಮೊರದಗಲ ಹರಡಿಕೊಮಡ ತಲೆಗೂದಲು, ಮುನಿಸಿನಿಂದ ಎದ್ದು ನಿಂತ ಜಟಗಳು ಕೈಯಲ್ಲಿ ಹಿಡಿದ ಕತ್ತಿ, ಈಟಿ, ಭರ್ಜಿ ಮತ್ತು ಕಡಿದ ತಲೆ ನಡುವಿಗೆ ರುಂಡಮಲೆ ವಾಹನಕ್ಕೆ ಸಿಂಹವೋ, ಹುಲಿಯೋ, ಹೀಗೆ............. ಸಾಮಾನ್ಯವಾಗಿ ಪಾಪ ಪುರುಷನನ್ನೋ ರೋಗ ಯಕ್ಷನನ್ನೋ. ತುಳಿಯುತ್ತಿರುವಂತೆ ಅಂಥ ಆತಂಕಕಾರಿಯ ಮೇಲೆ ಕುಳಿತಂತೆ ಮೂರ್ತಿಯ ರೂಪ ಇರುತ್ತದೆ. ಚಾಮುಂಡೇಶ್ವರಿಯು

ಸಿಂಹವನ್ನೇರಿ ಕುಳಿತು ಎಮ್ಮೆಯ ರೂಪದ ಅಸುರವನ್ನು ಕೊಲ್ಲುವುದು ಇದಕ್ಕೆ ನಿದರ್ಶನ (ರಾಮಚಂದ್ರರಾವ್ ಎಸ್.ಕೆ ೧೯೮೧, ಪು ೮೬-೯೦)

ಈ ಹೆಣ್ಣು ದೇವತೆಗಳನ್ನು ಮಾತೃದೈವಗಳೆಂದು ಕರೆಯಲಾಗುವುದಿಲ್ಲ. ಬನದಮ್ಮ, ಎಲ್ಲಮ್ಮ, ಮೊದಲಾದ ಮಾತೃದೈವಗಳು ಪುರುಷನಿಷ್ಠ ಆಕೃತಿಯಲ್ಲಿ ರೂಪಪಡೆದಂತವುಗಳು. ಇವುಗಳು ಸಂತಾನ ಕಲ್ಪಿಸುವ ಮುತ್ತೈದೆ ಭಾಗ್ಯ ಕಾಪಾಡುವ ದೈವಗಳಾಗಿ ನಿಲ್ಲುತ್ತವೆ. ಆದರೆ ಪುರುಷಪ್ರಧಾನ ಸಮಾಜದಲ್ಲಿ ವಿಕಾರದ ನೆಲೆಯಲ್ಲಿ ನಿರ್ವಹಿಸಲ್ಪಟ್ಟ ಚಂಡಿ, ದುರ್ಗಿ ಚಾಮುಂಡಿ ಮೊದಲಾದ ದೈವಗಳ ಹೊರ ಆಕೃತಿಗಳೇ ಅಸಾಂಪ್ರದಾಯಿಕ ಸಾಂಸ್ಕೃತಿಕ ಕಥನವನ್ನು ಹೇಳುತ್ತವೆ. ಅವರೆಂದೂ ವಿವಾಹ ಮತ್ತು ಸಂತಾನ ಪ್ರಕ್ರಿಯೆಯನ್ನು ಹೆಣ್ಣಿಗೆ ಅನಿವಾರ್ಯವಾಗುವುದಿಲ್ಲ. ಈ ಬಗೆಯ ಹೆಣ್ಣು ದೈವಗಳು ಯಾವ ಸ್ವರೂಪವನ್ನು ಹೊಂದಿವೆ. ಏನನ್ನು ಹೇಳುತ್ತವೆ, ಇಂತಹ ಸ್ತ್ರೀ ದೈವಗಳನ್ನು ರೂಪಕ ಏನನ್ನು ಹೇಳುತ್ತವೆ. ಇಮತಹ ಸ್ತ್ರೀ ದೈವಗಳನ್ನು ರೂಪಕವಾಗಿಟ್ಟುಕೊಂಡು ಹೆಣ್ಣು ಅಬಲೆ ಎನ್ನುವ ಸಾಮಾಜಿಕ ನಂಬಿಕೆಯನ್ನು ಹೇಗೆ ಬಡಿದು ಹಾಕಬೇಕಿದೆ ಎಂಬುದನ್ನು ಆಲೋಚಿಸಬೇಕಿದೆ. ಆದರೆ ಇತ್ತೀಚೆಗೆ ಪುರುಷನಿಷ್ಠ ಮಾತೃದೇವತೆಗಳ ಸಿದ್ಧಾಂತ ಸ್ವರೂಪದಲ್ಲಿ ಚಂಡೆ, ದುರ್ಗಿಯನ್ನು ಗುರುತಿಸಲಾಗುತ್ತಿದೆ. ಅನೇಕರು ಮದುವೆಗಾಗಿ ಮಕ್ಕಳನ್ನು ಪಡೆಯುವುದಕ್ಕಾಗಿ ಮುತ್ತೈದೆ ಭಾಗ್ಯಕ್ಕಾಗಿ ಚಂಡಿ ಚಾಮುಂಡಿಯರಲ್ಲಿಗೆ ಹೋಗುತ್ತಾರೆ. ಭಕ್ತ ಈ ಬೇಡಿಕೆಯನ್ನು ಪೂರೈಸುವ ದೈವಗಳಾಗಿ ಚಂಡಿ ಚಾಮುಂಡಿಯರು ಚಿತ್ರಿತವಾಗುತ್ತಿದ್ದಾರೆ.

ಅಲ್ಲದೆ ಕನ್ಯೆಯಾಗಿದ್ದುಕೊಂಡೇ ಕ್ರಿಸ್ತನಿಗೆ ಜನ್ಮಕೊಟ್ಟ ಮೇರಿ, ಕನ್ಯೆಯಾಗಿದ್ದುಕೊಂಡೇ ಪರಶುರಾಮನಿಗೆ ಜನ್ಮನೀಡಿದ ಎಲ್ಲಮ್ಮ, ಪರಮೇಶ್ವರನ ಸಂಪರ್ಕವಿಲ್ಲದೆ ಗಣಪತಿಯನ್ನು ಹೆತ್ತ ಪಾರ್ವತಿ ಹೀಗೆ ಜಾಗತಿಕ ಮಟ್ಟದಿಂದ ಹಿಡಿದು ಸ್ಥಳೀಯವಾಗಿ ಪ್ರಚಲಿತದಲ್ಲಿರುವ ಜನಪದ ಕಥೆಗಳು ಏನನ್ನು ಹೇಳುತ್ತವೆ. ಅವುಗಳು ಪುರುಷ ಅಸ್ತಿತ್ವವನ್ನು ನಿರಾಕರಿಸುತ್ತಿವೆಯೇ ಹೇಗೆ ಎನ್ನುವುದನ್ನು ವಿಶ್ಲೇಷಿಸುವ ಜರೂರಿದೆ. ಈ ಎಲ್ಲ ಚಿಂತನೆಗಳು, ಚರ್ಚೆಗಳು ಹೆಣ್ಣಿನ ಅಸ್ತಿತ್ವವನ್ನು ಗಟ್ಟಿಗೊಳಿಸುತ್ತಾ ಲಿಂಗ ಸಮಾನತೆಯತ್ತ ಒಲವನ್ನು ಇಟ್ಟುಕೊಂಡು ಸಾಕಬೇಕು.

ಅಧ್ಯಾಯ - ೪

# ಪುರುಷ ಪ್ರಧಾನ ಕುಟುಂಬ ವ್ಯವಸ್ಥೆ – ಮಹಿಳೆಯ ಸ್ಥಾನ

ಜಗತ್ತಿನ ಬಹುಪಾಲು ಕುಟುಂಬಗಳಲ್ಲಿ ಪುರುಷಪ್ರಧಾನ ಸ್ವರೂಪವನ್ನೇ ಹೊಂದಿರುವುದನ್ನು ಕಾಣಬಹುದಾಗಿದೆ. ಈ ವ್ಯವಸ್ಥೆಯಲ್ಲಿ ಕುಟುಂಬದ ನಾಯಕ ಅಥವಾ ಯಜಮಾನ ಪುರುಷನಾಗಿದ್ದು, ವಂಶಾವಳಿ ಅವನ ಹೆಸರಿನಲ್ಲಿರುತ್ತದೆ. ಮಹಿಳೆ ವಿವಾಹವಾದ ನಂತರ ತಂದೆ ಮನೆಯನ್ನು ತೊರೆದು ಗಂಡನೇ ಸರ್ವಸ್ವವೆಂದು ತಿಳಿದು ಗಂಡನ ಮನೆಯೇ ಶಾಶ್ವತವೆಂದು ತಿಳಿದು ಗಂಡನ ಮನೆಗೆ ಹೋಗಿ ನೆಲೆಸುತ್ತಾಳೆ. ಆಸ್ತಿ ಸಾಮಾನ್ಯವಾಗಿ ಪುರುಷನಿಂದ ಪುರುಷನಿಗೇ ಹಸ್ತಾಂತರವಾಗುತ್ತದೆ. ಹೆಣ್ಣು ಮಕ್ಕಳು ತಂದೆಯ ಆಸ್ತಿಯಲ್ಲಿ ನಮಗೂ ಪಾಲು ಬರಬೇಕೆಂದು ಕಾನೂನಿನ ಮೂಲಕ ಪ್ರಯತ್ನಿಸಿ ಆಸ್ತಿಯನ್ನು ಪಡೆದುಕೊಂಡಾಗ ಸಂಬಂಧಗಳಲ್ಲಿ ಒಡಕು ಹುಟ್ಟುವ ಅಪಾಯ ಒದಗುತ್ತದೆ. ಪುರುಷ ಪ್ರಧಾನ ಕುಟುಂಬವನ್ನು ಸ್ತ್ರೀಶೋಷಣೆಯ ಮೂಲ ಎನ್ನಬಹುದು. **ಹೈದಿ ಹಾರ್ಟ್‌ಮನ್** ಎಂಬ ಸ್ತ್ರೀವಾದಿ ***"ಮಹಿಳೆಯರ ಲೈಂಗಿಕತೆ, ಸಂತಾನೋತ್ಪತ್ತಿಯ ಸಾಮರ್ಥ್ಯ, ಆರ್ಥಿಕ ಸಂಪನ್ಮೂಲಗಳ ಮೇಲೆ ಕಟ್ಟುನಿಟ್ಟಾದ ನಿಯಂತ್ರಣ ಹೊಂದುವ ಮೂಲಕ ಮಹಿಳೆಯರನ್ನು ನಿಯಂತ್ರಿಸಲಾಗುತ್ತದೆ. ಇದು ಏಕಪತಿ, ವಿವಾಹಪದ್ಧತಿ, ಮಕ್ಕಳ ಲಾಲನೆ, ಮನೆಗೆಲಸದ ಜವಾಬ್ದಾರಿ, ಪುರುಷರು, ರಾಜಕೀಯ ಮತ್ತಿತ್ತರ ಸಂಘಸಂಸ್ಥೆಗಳಲ್ಲಿ ಅಧಿಕಾರ ಹೊಂದಿ ಮಹಿಳೆಯರು ತಮ್ಮನ್ನು ಆರ್ಥಿಕವಾಗಿ ಅವಲಂಬಿಸುವಂತೆ ಮಾಡುವುದು ಮುಂತಾದವುಗಳಲ್ಲಿ ವ್ಯಕ್ತವಾಗುತ್ತದೆ."*** ಎಂದಿದ್ದಾರೆ.

ಪುರುಷ ಪ್ರಧಾನ ಕುಟುಂಬಗಳಲ್ಲಿ ಗಂಡು ಮಕ್ಕಳಿಗೆ ಹೆಚ್ಚು ಪ್ರಾಧಾನ್ಯತೆಯಿದ್ದು, ಅವರಿಗೆ ವಿಶೇಷವಾದ ಸ್ಥಾನಮಾನ ಅವಕಾಶ ನೀಡಲಾಗಿದೆ. ತಂದೆಯ ಅಪ್ಪೇಕ್ಷೆ ಕುಲದ ಘನತೆ ಗೌರವಗಳನ್ನು ಕಾಪಾಡುವ ಆಶ್ರಯದಾತ, ವಂಶೋದ್ಧಾರಕ ಎಂದು ಪರಿಗಣಿಸಲಾಗಿದೆ. ಹುಟ್ಟಿನಿಂದಲೇ ಹೆಣ್ಣು ಮಗುವನ್ನು ಪರರ ಮನೆಯ ಸೊತ್ತು ಎಂಬಂತೆ ಬೆಳೆಸಲಾಗುತ್ತದೆ. ಆಕೆ ಹೆಣ್ಣೆಂಬ ಕಾರಣಕ್ಕೆ ಆಕೆಗೆ ವ್ಯಕ್ತಿತ್ವ, ಶಿಕ್ಷಣ, ಆತ್ಮಗೌರವ, ರಕ್ಷಣೆಯನ್ನು ಪ್ರೋತ್ಸಾಹಿಸುವುದಕ್ಕೆ ಬದಲಾಗಿ ವಿನಯ, ಸಹನೆ ವಿಧೇಯತೆ, ಕ್ಷಮೆ, ಪ್ರೀತಿ, ವಿಶ್ವಾಸ, ಆತ್ಮೀಯತೆ ಇವುಗಳನ್ನೇ ಬೋಧಿಸಲಾಗುತ್ತದೆ. ಆಕೆಯು ಮುಂದೆ ವಹಿಸಬೇಕಾದ ಪತ್ನಿ, ತಾಯಿ ಹಾಗು ಸೊಸೆಯ ಪಾತ್ರಗಳನ್ನೇ ಗಮನದಲ್ಲಿಟ್ಟುಕೊಳ್ಳಲಾಗಿರುತ್ತದೆ. ಹೀಗಾಗಿ ಬುದ್ಧಿವಂತಿಕೆ ಮಟ್ಟ ಹೆಣ್ಣು ಮಕ್ಕಳಲ್ಲಿ ಕಡಿಮೆ ಎಂಬಂತೆ ಆಡಲು, ಓದಲು ಅವಕಾಶ ಕಲ್ಪಿಸಿದೆ ಹೆಣ್ಣೆಂದರೆ ಕೈಯಲ್ಲಿ ಆಗದವಳು ಅಂದರೆ ದುರ್ಬಲಳು ಗಂಡಸಿನ ರಕ್ಷಣೆಯಲ್ಲಿಯೇ ಇರಬೇಕೆಂಬುದನ್ನು ಮಕ್ಕಳ ಮನಸ್ಸಿನಲ್ಲಿ ಚಿಕ್ಕವಯಸ್ಸಿನಿಂದಲೇ ಮನದಟ್ಟು ಮಾಡಿ ಅದು ಹೆಣ್ಣಿನ ಮನಸ್ಸಿನಲ್ಲಿ ಬೇರೂರುವಂತೆ ಮಾಡಲಾಗುತ್ತದೆ. ಇದರಿಂದಾಗಿ ಆಕೆ ಸ್ವಂತ ನಿರ್ಧಾರಗಳನ್ನು ತೆಗೆದುಕೊಳ್ಳಲು ಸಾಧ್ಯವಿಲ್ಲದಂತಾಗುತ್ತದೆ. ಇನ್ನೂ ಹೋದ ಮನೆಯಲ್ಲಿ ಸೊಸೆಯಾಗಿ ಅನುಭವಿಸುವ ಮಾನಸಿಕ ಮತ್ತು ದೈಹಿಕ ಹಿಂಸೆಗೆ ಒಳಗಾಗುತ್ತಾಳೆ. ಅಲ್ಲದೆ ಬಾಲ್ಯವಿವಾಹ ಹಾಗೂ ವರದಕ್ಷಿಣೆಯ

ಭೂತ ಇಂದಿಗೂ ಯುವತಿಯರ ಬದುಕಿನ ಚಿತ್ರಹಿಂಸೆಯ ಮರಣದ ರೂಪವಾಗಿ ಬಿಟ್ಟಿದೆ. ಗಂಡನ ಕೈವಶವಾಗಿ ಹಾಗೂ ಕುಟುಂಬದ ಇತರ ಪುರುಷರ ದೌರ್ಜನ್ಯ, ದಬ್ಬಾಳಿಕೆಗೆ ಒಳಗಾಗುವುದು ಇವೆಲ್ಲವೂ, ಮಹಿಳೆಯರಿಗೆ ಕುಟುಂಬದೊಳಗೆ ಸಾವಿರಾರು ವರ್ಷಗಳಿಂದ ದಾಸ್ಯವನ್ನು ಒಪ್ಪಿಕೊಂಡು ಕೇವಲ ದುಡಿಮೆಯಲ್ಲಿಯೇ ಬದುಕಬೇಕಾದ ಸ್ಥಿತಿಯನ್ನು ತಂದಿಟ್ಟಿರುವುದನ್ನು ನಾವು ನೋಡಬಹುದು. ವಿಧವೆಯರನ್ನು ವಿರೂಪಗೊಳಿಸುವ, ಅಮಂಗಳೆಯರೆಂದು ಬಹಿಷ್ಕರಿಸುವ, ಮೈಲಿಗೆಯವರೆಂದು ಯಾವುದೇ ರೀತಿಯ ಸಂತೋಷಕೂಟ ಸಮಾರಂಭಗಳಲ್ಲಿ ಆಕೆ ಭಾಗವಹಿಸಲು ಅವಕಾಶವಿಲ್ಲದ ಹಿಂಸಾ ಪ್ರವೃತ್ತಿ ಕುಟುಂಬದಲ್ಲಿ ಬೇರೂರುವಂಥ ಸಾಮಾಜಿಕ ವ್ಯವಸ್ಥೆಯಿಂದಾಗಿ ಮಹಿಳೆ ತಾನು ಜೀವಿಸುವುದು ತನಗಾಗಿ ಅಲ್ಲ, ಬೇರೆಯವರ ಸೇವೆಗಾಗಿ ಎಂದು ನಂಬುತ್ತಿದ್ದಳು. ಪುರುಷಪ್ರಧಾನ ಸಮಾಜದಲ್ಲಿ ಹೆಣ್ಣು ಗಂಡಿನ ಅಡಿಯಾಳಾಗಿ ತನ್ನ ಕರ್ತವ್ಯವನ್ನು ನಿರ್ವಹಿಸುತ್ತಿದ್ದಳು.

ನಾಗರೀಕತೆಯ ಪೂರ್ವದ ಜನರಿಗೆ ಭೂತ-ಭವಿಷತ್‌ಗಳ ವಿಚಾರಕ್ಕಿಂತ ವರ್ತಮಾನದ ಬದುಕು ಮುಖ್ಯವಾಗಿತ್ತು. ಈ ವ್ಯವಸ್ಥೆಯಲ್ಲಿ ಹೆಣ್ಣು-ಗಂಡುಗಳೆಂಬ ಮೇಲು-ಕೀಳು ಭಾವನೆಗಳಿರದೇ ಇಬ್ಬರೂ ಸಹ ಕುಟುಂಬದಲ್ಲಿ ಸಮಾನವಾದ ಬಾಳ್ವೆಯನ್ನು ಮಾಡುತ್ತಿದ್ದರು. ಆ ಕಾಲದ ಮಹಿಳೆ ಅಪ್ರತಿಗಾಗಿ ಧೈರ್ಯದಿಂದ ಪುರುಷರನ್ನು ಸಹಚರರನ್ನಾಗಿಸಿಕೊಂಡು ಧೈರ್ಯ ಸಾಹಸವನ್ನು ಮೆರೆಯುತ್ತಿದ್ದಳು. ಆ ಕಾಲದ ಮಾನವ ಧರ್ಮದಂತೆ ಇಡೀ ಕುಟುಂಬವನ್ನು ಪೋಷಿಸುವುದು ಹೆಣ್ಣಿನ ಕರ್ತವ್ಯವಾಗಿತ್ತು. ತಾವೆಲ್ಲರೂ ಒಂದೇ ಎಂಬಂತೆ ಒಂದೇ ಸೂರಿನಡಿಯಲ್ಲಿ ವಾಸಿಸುತ್ತಿದ್ದರು. ಹೆಣ್ಣು-ಗಂಡು ತರುಣ-ತರುಣಿಯರು ಎಂಬ ಬೇಧ ಭಾವವಿಲ್ಲದೆ ಒಟ್ಟಾಗಿ ಕುಳಿತು ಪಾನಗೋಷ್ಠಿಯಲ್ಲಿ ತೊಡುಗುತ್ತಿದ್ದರು. ಪಂಜಿನ ಬೆಳಕಿನಲ್ಲಿ ಇಬ್ಬರು ಇನಿದನಿಯಿಂದ ಹಾಡುತ್ತಿದ್ದ ಇಡೀ ಬಳಗವೇ ಸಂತೋಷದಿಂದ ಪಾಲ್ಗೊಳ್ಳುತ್ತಿದ್ದರು. ಈ ವ್ಯವಸ್ಥೆಯಲ್ಲಿ ಹೆಣ್ಣು ತನ್ನ ಪ್ರಿಯಕರನನ್ನು ಆಯ್ಕೆ ಮಾಡುವ ಸ್ವತಂತ್ರ ಹೊಂದಿದ್ದಳು. ತನ್ನ ಪ್ರಿಯಕರನೊಂದಿಗೆ ಸ್ವತಂತ್ರವಾಗಿ ಸಂಸಾರವನ್ನು ಮಾಡುತ್ತಿದ್ದು ಇಡೀ ಬಳಗದ ಗಂಡುಗಳೆಲ್ಲಾ ಆಕೆಗೆ ತಂದೆಗಳಂತೆ ಇರುತ್ತಿದ್ದರು. ಹೆಣ್ಣು ಸ್ವತಂತ್ರವಾದ ಪರಿವಾರಗಳನ್ನು ಕಟ್ಟುತ್ತಿದ್ದಳು.

ಕೆಲವೊಮ್ಮೆ ಸಮೂಹಗಳಿಗೆ ಬೇಟೆಯಿಲ್ಲದೆ ಹಸಿವಿನಿಂದ ಇರುವ ಪರಿಸ್ಥಿತಿ ಬಂದಾಗ ಹೆಣ್ಣು ಆ ಪರಿಸ್ಥಿತಿಯನ್ನು ನಿಬಾಯಿಸಲು ಪ್ರಾಣಿಗಳನ್ನು ಸಾಕಲಾರಂಭಿಸಿದಳು. ಈ ರೀತಿಯಾಗಿ ಜೀವ ಕುಲವನ್ನೇ ತನ್ನ ಹತೋಟಿಯಲ್ಲಿಟ್ಟುಕೊಂಡು ಜೀವಿಸಿದ ಹೆಣ್ಣು ಶಕ್ತಿಯಾಗಿ ಕಂಡಿರಬೇಕು. ಹೆಣ್ಣೆ ಅದ್ಭುತವೆನಿಸಿರಬೇಕು. ಆಗಾಗಿ ಪುರುಷ ಹೆಣ್ಣಿನಲ್ಲಿ ದೇವತೆಯನ್ನು ಕಂಡಿದ್ದಾನೆ. ಈಗಾಗಿ ಅಂದು ಮಾತೃದೇವತಾ ಕಲ್ಪನೆ ಮೂಡಿಬಂದಿತು.

ಅದರಂತೆಯೇ ಶಿಲಾಯುಗದ ಮಾನವ ಬೇಟೆಗೆ ಎಷ್ಟು ಪ್ರಾಮುಖ್ಯತೆಯನ್ನು ನೀಡಿದ್ದನೋ ಅಷ್ಟೆ ಲೈಂಗಿಕತೆಗೂ ಪ್ರಾಮುಖ್ಯತೆಯನ್ನು ನೀಡಿದ್ದನು. ಲಿಂಗವ್ಯವಸ್ಥೆಯ ಪರಿಕಲ್ಪನೆ ಇಲ್ಲದುದ್ದರಿಂದ

ಹೆಣ್ಣಿನ ಸಂಬಂಧಗಳ ಪರಿವು ಇರಲಿಲ್ಲ. ಹೆಣ್ಣು ತಾಯಿಯಾಗುವಾಗ ಆಕೆಯ ಜೈವಿಕ ಕ್ರಿಯೆಯು ಬದಲಾವಣೆಗೆ ಅನುಗುಣವಾಗಿ ಆಕೆ ಒಂದು ಕಡೆ ನೆಲೆಸಿರಲೇಬೇಕಾಗಿತ್ತು. ಆ ಸಂದರ್ಭದಲ್ಲಿ ಆಕೆ ಬೇಟೆಗೆ ಹೋಗಲು ಆಗುತ್ತಿರಲಿಲ್ಲವಾದ್ದರಿಂದ ಪುರುಷನೇ ಆಹಾರ ಮತ್ತು ರಕ್ಷಣೆ ನೀಡಬೇಕಾಗಿತ್ತು. ಆಗಾಗಿ ಅವರಿಬ್ಬರು ಸುರಕ್ಷಿತ ಸ್ಥಳದಲ್ಲಿ ವಾಸಿಸಲು ಪ್ರಾರಂಭಿಸಿದರು. ಮಗುವಿನ ಜನನವಾದ ನಂತರ ಅದರ ಲಾಲನೆ ಮತ್ತು ಪೋಷಣೆಯು ಸ್ತ್ರೀಯ ಪಾಲಾಯಿತು. ಆಗಾಗಿ ಆಕೆ ಕುಟುಂಬದಲ್ಲಿ ಮಾತೃ ಪ್ರಧಾನಳಾದಳು. ಕೃಷಿಯ ಮೂಲಕರ್ತೃವಾದ ಸ್ತ್ರೀಯು ಸಾಕುಪ್ರಾಣಿಗಳ ಆದಾಯದಿಂದ ಉತ್ಪಾದನೆಯಲ್ಲಿ ಮುನ್ನೆಡೆದಾಗ ಗಂಡಸಿನಲ್ಲಿ ಹೆಣ್ಣಿನ ಬಗ್ಗೆ ಅಸಮಾನತೆಯೊಂದು ಮೂಡಿಬರಲು ಕಾರಣವಾಯಿತು. ಇದು ನಂತರದಲ್ಲಿ ಒಂದು ಕೌರ್ಯವಾಗಿಯೇ ಪರಿಣಮಿಸಿತು. ಪುರುಷನು ಹೆಣ್ಣಿನ ಮೇಲೆ ಕಠಿಣವಾದ ನಿಬಂಧನೆಯನ್ನು ಏರಿ ಆಕೆಯನ್ನು ನಿಯಂತ್ರಣದಲ್ಲಿರಿಸಿಕೊಳ್ಳುವ ಪ್ರಯತ್ನದಲ್ಲಿ ಮುನ್ನೆಡದಿದರಿಂದ ಮಾತೃಪ್ರಧಾನ ಪರಿಕಲ್ಪನೆ ಅಳಿಸಿ ಹೋಗಿ ಪಿತೃಪ್ರಧಾನ ಸಮಾಜದಲ್ಲೂ ಸಹ ಸ್ತ್ರೀಯು ಪುರುಷನ ಸಹಚರ್ಯದಲ್ಲಿಯೇ ಬುದುಕುವ ಪರಿಸ್ಥಿತಿ ನಿರ್ಮಾಣವಾಯಿತು.

ಮನುಷ್ಯನಿಗೆ ನಾಗರೀಕತೆಯ ಅರಿವಾದಾಗ ಸ್ತ್ರೀಯನ್ನು ಗುಲಾಮಳಂತೆ ನಡೆಸಿಕೊಳ್ಳುತ್ತಾನೆ. ಪುರುಷನು ಮನೆಯಿಂದ ಹೊರಗೆ ಹೋಗಿ ದುಡಿಯಲು ಪ್ರಾರಂಭಿಸದನು. ಹೆಣ್ಣನ್ನು ಮನೆಯ ಕೆಲಸಕ್ಕೆ ಸೀಮಿತಗೊಳಿಸಿ ಆಕೆಯನ್ನು ಅಡಿಯಾಳಾಗಿ ನಡೆಸಿಕೊಳ್ಳುತ್ತಾನೆ. ಪುರುಷನಿಗೆ ಒಂದು ನ್ಯಾಯ ಹೆಣ್ಣಿಗೆ ಒಂದು ನ್ಯಾಯ ಅಂದರೆ ಸ್ತ್ರೀಯರನ್ನು ಏಕಪತಿ ವ್ರತಸ್ಥರಂತೆ ಮಾಡಿ ತಾವು ಬಹುಪತ್ನಿತ್ವವನ್ನು ಹೊಂದುವ ಪದ್ದತಿಯನ್ನು ಜಾರಿಗೆ ತಂದು ಸ್ತ್ರೀಯನ್ನು ಕೀಳಾಗಿ ಕಾಣುತ್ತಿದ್ದರು. ಸ್ತ್ರೀಯು ಮನುಷ್ಯರನ್ನು ಉತ್ಪಾದನೆ ಮಾಡುವ ಉತ್ಪಾದಕಿಯಾಗಿದ್ದರು ಸಹ ಅವಳಿಗೆ ಎಷ್ಟು ಸ್ವಾತಂತ್ರ್ಯ ಬೇಕೋ ಅಷ್ಟು ಸ್ವಾತಂತ್ರ್ಯವನ್ನು ಪಡೆಯುವ ಹಕ್ಕು ಸಹ ಆಕೆಗೆ ಇರಲಿಲ್ಲ. ಪುರುಷರು ಸ್ತ್ರೀಯರನ್ನು ಮನೆ ಕೆಲಸಕ್ಕೆ ಸೀಮಿತಗೊಳಿಸಿದಲ್ಲದೆ ಆಕೆಯನ್ನು ದಿಗ್ಬಂಧನಕ್ಕೆ ಒಳಪಡಿಸಿ ಗುಲಾಮಳಂತೆ ಕಾಣತೊಡಗಿದರು.

ಪ್ರಾಚೀನ ನಾಗರೀಕತೆಗಳಲ್ಲಿ ಸ್ತ್ರೀಯರ ಸಾಮಾಜಿಕ ಬದುಕನ್ನು ಕುರಿತು ಹೆಚ್ಚಿನ ಚಿಂತನೆ ನಡೆದಿಲ್ಲ. ಪುರುಷನು ತನ್ನ ಸ್ವಾರ್ಥಕ್ಕಾಗಿ ಸ್ತ್ರೀಯನ್ನು ಧರ್ಮ ರೂಢಿ ಸಂಪ್ರದಾಯಗಳನ್ನು ಮುಂದು ಮಾಡಿಕೊಂಡು ಬಂದಿರುವುದನ್ನು ಪ್ರಾಚೀನ ಇತಿಹಾಸಗಳು ತಿಳಿಸುತ್ತವೆ. ಮನುಷ್ಯನ ಬದುಕನ್ನೇ ಅರಿಯಲು ಸಾಧ್ಯವಾಗದ ಪರಿಸ್ಥಿತಿಯಲ್ಲಿ ಸ್ತ್ರೀ ಪುರುಷ ಬೇಧವನ್ನು ತಿಳಿಯುವುದು ಸವಾಲಿನ ಕೆಲಸವೇ ಸರಿ. ಕ್ರಿ.ಪೂ–೨೦೦೦ ವರ್ಷಗಳ ಹಿಂದೆ ಮನುಷ್ಯನ ಜೀವನಸ್ಥಿತಿ ಆಚಾರ–ವಿಚಾರಗಳು ರೂಢಿಗಳನ್ನು ಕುರಿತು ಕೆಲವು ಮಾಹಿತಿಗಳ ಆಧಾರದ ಮೇಲೆ ಮಹಿಳಾ ಜೀವನದ ಸ್ಥಿತಿಯನ್ನು ಚಿತ್ರಣಗೊಳಿಸಿಕೊಳ್ಳಬಹುದಾಗಿದೆ. ಸಿಂಧು ನಾಗರೀಕತೆಯಲ್ಲಿನ ಹರಪ್ಪ–ಮೆಹೆಂಜೋದಾರಗಳ ನಗರಗಳಲ್ಲಿನ ಭೂಉತ್ಕನನ ಅವಶೇಷಗಳನ್ನು ಆಧರಿಸಿ ಸಿಂಧೂ ನಾಗರೀಕತೆಯ ಜನರು ಆಧುನಿಕ ಯೋಜನೆಯುಳ್ಳ ನಗರ ಜೀವನ ನಡೆಸುತ್ತಿದ್ದರು ಎಂಬುದು ಕಂಡು ಬರುತ್ತದೆ. ಅಲ್ಲಿನ ಸಾಮಾಜಿಕ

ವ್ಯವಸ್ಥೆಯಲ್ಲಿ ವರ್ಗ ಸಮಾಜವಿದ್ದು ಅಸ್ಪೃಶ್ಯತೆಯ ಬೀಜಾಂಕುರವನ್ನು ಸಹ ಆ ಸಮಾಜದಲ್ಲಿ ಗುರುತಿಸಬಹುದಾಗಿತ್ತು. ಅಸ್ಪೃಶ್ಯರನ್ನು ಹೀನಾಯವಾಗಿ ನಡೆಸಿಕೊಳ್ಳುವ ಯಾವುದೇ ಸಮಾಜ ಸ್ತ್ರೀಯರನ್ನು ಆರೋಗ್ಯಕರವಾಗಿ ನಡೆಸಿಕೊಳ್ಳುವುದು ಸಾಧ್ಯವಿಲ್ಲ. ಇಲ್ಲಿಂದ ಸಮಾಜದಲ್ಲಿನ ಸ್ತ್ರೀಯರು ಹೆಚ್ಚು ಅಲಂಕಾರ ಪ್ರಿಯರಾಗುತ್ತಿದ್ದು, ಗಂಡನನ್ನು ಹೊಂದಿದವಳು ಮಾತ್ರ ಬದುಕಿಗೆ ಅರ್ಹಳು ಗಂಡನನ್ನು ಕಳೆದುಕೊಂಡವಳು ಬದುಕಲು ಅನರ್ಹಳು ಎಂಬ ನಂಬಿಕೆ ಸತಿಸಹಗಮನ ಪದ್ಧತಿ ಕಡ್ಡಾಯವಾಗಿ ಜಾರಿಗೊಳ್ಳಲು ನೆರವಾಯಿತು. ಹಾಗೆಯೇ ಆ ಕಾಲದಲ್ಲಿ ದೇವದಾಸಿಯ ಕುರುಹುಗಳು ಸಹ ಹೆಣ್ಣಿನ ಸ್ಥಾನವನ್ನು ಚಿತ್ರಿಸುವ ಸ್ವರೂಪವಾಗಿ ಮೈ ತಳೆಯುತ್ತವೆ. ಕೆಲವು ಪಂಗಡಗಳಲ್ಲಿ ತಾಯಿಯೇ ಕುಟುಂಬದ ಯಜಮಾನಿಯಾಗಿದ್ದರಿಂದ ಮಾತೃದೇವತಾರಾಧನೆ ರೂಢಿಯಲ್ಲಿರುವುದು ಕಂಡು ಬರುತ್ತದೆ.

ಸ್ತ್ರೀಯರನ್ನು ಅತ್ಯಂತ ಗೌರವದಿಂದ ಕಂಡಂತಹ ಮತ್ತು ಪ್ರಥಮ ಮಹಿಳಾ ಆಡಳಿತಗಾರ್ತಿಯನ್ನು ನೀಡಿದ ಕೀರ್ತಿ ಈಜಿಪ್ಟ್‌ನ ನಾಗರೀಕತೆಯಲ್ಲಿ ಕಂಡುಬರುತ್ತದೆ. ಇಲ್ಲಿನ ಸಮಾಜದಲ್ಲಿ ಮಹಿಳೆಯರಿಗೆ ರಾಣಿಯ ಆಳ್ವಿಕೆಯನ್ನು ನೀಡಿದ ಅವಕಾಶವನ್ನು ಇಲ್ಲಿನ ವ್ಯವಸ್ಥೆಯಲ್ಲಿ ಕಲ್ಪಿಸಲಾಗಿತ್ತು. ಈ ಒಂದು ವ್ಯವಸ್ಥೆಯಲ್ಲಿ ಸ್ವಕುಟುಂಬ ವಿವಾಹ ಪದ್ಧತಿಯು ರೂಢಿಯಲ್ಲಿತ್ತು. ಸ್ತ್ರೀಯರಿಗೆ ಸಮಾನವಾದ ಹಕ್ಕುಗಳನ್ನು ನೀಡಲಾಗಿತ್ತು. ಆಸ್ತಿಯ ಮತ್ತು ಪಿತ್ರಾರ್ಜಿತವಾದ ಆಸ್ತಿಯಲ್ಲಿ ಸಮಾನತೆಯ ಅವಕಾಶವನ್ನು ನೀಡಲಾಯಿತು. ಈ ಒಂದು ನಾಗರೀಕತೆಯಲ್ಲಿ ಹೆಣ್ಣಿಗೆ ಆರ್ಥಿಕತೆಯ ಸ್ವಾತಂತ್ರ್ಯವನ್ನು ನೀಡಬಹುದಿತ್ತು ಮತ್ತು ಗಂಡನಾಗುವವನನ್ನು ಆಯ್ಕೆ ಮಾಡಿಕೊಳ್ಳುವ ಅವಕಾಶವನ್ನು ನೀಡಲಾಗಿತ್ತು. ಗಂಡನಿಂದ ತೊಂದರೆಗೊಳಗಾದರೆ ಆತನಿಗೆ ವಿಚ್ಛೇದನವನ್ನು ನೀಡಿ, ತನ್ನ ಆಸ್ತಿಯನ್ನು ಹಿಂತೆಗೆದುಕೊಂಡು ತವರಿಗೆ ಮರಳಬಹುದಾಗಿತ್ತು. ಮಹಿಳೆಯರು ಈ ಸಮಾಜದಲ್ಲಿ ಹಲವಾರು ಉನ್ನತವಾದ ಹುದ್ದೆಗಳನ್ನು ಹೊಂದಿದ್ದರು.

ಇಡೀ ವಿಶ್ವಕ್ಕೆ ಸಾಂಸ್ಕೃತಿಕ ಪರಂಪರೆಯನ್ನು ಪರಿಚಯಿಸಿದ ನಾಡೆಂದರೆ ಗ್ರೀಸ್ ಮತ್ತು ರೋಮ್ ನಾಗರೀಕತೆ ಎಂದು ಹೇಳಬಹುದು. ಗ್ರೀಕ್ ರಾಜ್ಯಗಳನ್ನು ಹೊಂದುಗೂಡಿಸಿ ಪ್ರಜಾಪ್ರಭುತ್ವವನ್ನು ಕಲ್ಪಿಸಿದರು ಸಹ ಸ್ತ್ರೀಗೆ ಯಾವುದೇ ರೀತಿಯಾದಂತಹ ಮಾನ್ಯತೆಯನ್ನು ನೀಡಲಿಲ್ಲ. ಸ್ತ್ರೀಯು ಈ ನಾಗರೀಕತೆಯಲ್ಲಿ ಅನುಭವಿಸಿರುವ ತೊಂದರೆಗಳು ಶೋಚನೀಯವಾದವುಗಳೆಂದರೆ ತಪ್ಪಾಗಲಾರದು. ಸ್ತ್ರೀಯು ಯಾವಾಗಲೂ ಸೌಂದರ್ಯಪ್ರಿಯಳಾಗಿದ್ದು ಆಕೆಯು ಕುಟುಂಬದ ಜನತೆಯ ಲಾಲನೆ ಪಾಲನೆಯನ್ನು ಮಾಡಿಕೊಂಡಿರಬೇಕಿತ್ತು. ಆಕೆಯ ಶಿಕ್ಷಣವು ಪುರುಷನ ಇಷ್ಟಾನಿಷ್ಟಕ್ಕೆ ಒಳಪಟ್ಟಿತ್ತು. ಗ್ರೀಸ್‌ನಲ್ಲಿ ಹುಟ್ಟಿ ಬಂದ ಮಹಾನ್ ಚಿಂತಕರಾದ ಅರಿಸ್ಟಾಟಲ್, ಪ್ಲೇಟೋ ಮುಂತಾದ ದಾರ್ಶನಿಕರನ್ನು ಮೀರಿಸುವ ಸ್ತ್ರೀಚಿಂತಕಿಯೊಬ್ಬಳು ಆ ಕಾಲದಲ್ಲಿ ಮೂಡಿಬರಲಿಲ್ಲ. ರೋಮ್ ರಾಜ್ಯವ್ಯವಸ್ಥೆಯು ಸಾಮಾಜಿಕ ವ್ಯವಸ್ಥೆಯು ಮನುವಾದಿ ಆಲೋಚನೆಗಳಿಗಿಂತ ಭಿನ್ನವಾಗಿರಲಿಲ್ಲ. ಮಹಿಳೆಯ ಬದುಕು

ಅವಲಂಬಿತ ಸ್ಥಿತಿಯಲ್ಲಿತ್ತು. ಆ ಕಾನೂನುಗಳು ಮಹಿಳೆಯರನ್ನು ಅಜ್ಞಾನಿಗಳೆಂದು ಪರಿಗಣಿಸಿದ್ದವು. ಯಾವುದೇ ವಿಷಯಗಳ ತೀರ್ಮಾನಗಳಲ್ಲಿ ಆಕೆಯ ತೀರ್ಮಾನವನ್ನು ಹೊರಗಿಡಲಾಗಿತ್ತು. ಸಾರ್ವಜನಿಕ ರಂಗದಲ್ಲಿ ಇವರಿಗೆ ಅವಕಾಶವಿರಲಿಲ್ಲ. ಪುರುಷರು ಪರಸ್ತ್ರೀಯರ ಸಂಗವನ್ನು ಬೆಳೆಸಿದ್ದರೂ ಸಹ ಸ್ತ್ರೀಯರು ಸಹಿಸಿಕೊಳ್ಳಬೇಕಿತ್ತು. ಆಕೆಗೆ ಯಾವುದೇ ಆಸ್ತಿಯು ಬರುತ್ತಿರಲಿಲ್ಲ. ಆಕೆಯು ಪುರುಷನ ಆಸ್ತಿಯಾಗಿದ್ದಳು.

ಈಜಿಪ್ಟ್‌ನ ನಾಗರೀಕತೆಯಲ್ಲಿ ಶ್ರೀಮಂತರು ಮತ್ತು ರಾಜರು ಹಲವು ಪತ್ನಿಯರನ್ನು ಹೊಂದಿರಬಹುದಿತ್ತು. ಆದರೆ ಸಾಮಾನ್ಯ ಜನರಲ್ಲಿ ಒಬ್ಬ ಪುರುಷ ಒಬ್ಬ ಸ್ತ್ರೀಯಳನ್ನು ಮಾತ್ರ ಮದುವೆಯಾಗುತ್ತಿದ್ದನು. ತಾಯಿಯನ್ನು ಗೌರವದ ಸ್ಥಾನದಲ್ಲಿ ಇರಿಸಲಾಗಿತ್ತು. ತಾಯಿಯು ಮನೆಯ ಒಡತಿಯಾಗಿದ್ದು ತಾಯಿಯ ಮುಖಾಂತರ ಆಸ್ತಿಯ ಒಡೆತನವು ರವಾನೆಯಾಗಬಾರದೆಂಬ ಪರಿಕಲ್ಪನೆಯು ಬೆಳೆಯಿತು. ಹಮ್ಮುರಬಿಯ ಶಾಸನವು ಸ್ತ್ರೀಯ ಸ್ಥಾನಮಾನದ ಬಗ್ಗೆ ಉತ್ತಮವಾದ ವಿಷಯಗಳ ಮಾಹಿತಿಯನ್ನು ನೀಡುವಲ್ಲಿ ಪ್ರತಿಬಿಂಬವೆಂಬಂತೆ ಕಂಡುಬರುವುದು.

ನಾಗರೀಕತೆಗಳ ಕಾಲದಲ್ಲಿ ಮನುಷ್ಯನು ನಗರಜೀವನಕ್ಕೆ ಬರುತ್ತಿದ್ದಂತೆಯೇ ಆತನು ವ್ಯವಸ್ಥೆಯ ಅಂಗವಾಗಿ ವರ್ತಿಸತೊಡಗಿದನು. ಹಲವಾರು ರೂಢಿ, ಸಂಪ್ರದಾಯಗಳ, ಆಚಾರವಿಚಾರಗಳು ಬಂದು ಸ್ತ್ರೀಯನ್ನು ನಿಯಂತ್ರಣದಲ್ಲಿಡುತ್ತಾ ಬಂದಾಗಿನಿಂದ ಸ್ತ್ರೀಯು ಶೋಷಣೆಗೆ ಒಳಗಾಗಿ ಇವರಿಬ್ಬರಲ್ಲೂ ಸಹ ಅಸಮಾನತೆಯ ಬಿರುಕು ಉಂಟಾಯಿತು.

ಒಟ್ಟಾರೆ ನಾಗರೀಕತೆಯಲ್ಲಿ ಹೆಣ್ಣು ಎರಡನೇ ಪ್ರಜೆಯಾಗಿ ರೂಪುಗೊಂಡಿರುವ ಲಕ್ಷಣಗಳು ಕಂಡುಬರುತ್ತವೆ. ಅವುಗಳ ಮುಂದುವರಿಕೆಯನ್ನು ವೇದಗಳಲ್ಲಿ ಕಾಣಬಹುದು.

ಆರ್ಯರು ಮತ್ತು ದ್ರಾವಿಡರ ಸಂಗಮದ ಫಲವಾಗಿ ಭಾರತೀಯ ಸಂಸ್ಕೃತಿಯನ್ನು ಇಂಡೋ–ಆರ್ಯನ್ ಸಂಸ್ಕೃತಿ ಎಂದು ಕರೆಯಲಾಯಿತು. ಈ ಎರಡು ಸಂಸ್ಕೃತಿಯ ಮಹತ್ತರ ಕೊಡುಗೆಗಳೆಂದರೆ, ವೇದಗಳು, ಋಗ್ವೇದ, ಯಜುರ್ವೇದ, ಅರ್ಥವರ್ಣವೇದ. ವೇದಗಳ ಆರಂಭದ ಕಾಲದಲ್ಲಿ ಮಹಿಳೆಯ ಜೀವನ ಸ್ಥಿತಿ ಉತ್ತಮವಾಗಿರುವುದು ಕಂಡುಬರುವುದು. ವೇದಗಳ ಕಾಲದಲ್ಲಿ ಸ್ತ್ರೀಪುರುಷರ ಸಂಬಂಧಗಳ ಮೇಲೆ ವಿಪರೀತ ಕಟ್ಟುಪಾಡುಗಳಿರಲಿಲ್ಲ. ಬಾಲ್ಯವಿವಾಹವು ರೂಢಿಯಲ್ಲಿರಲಿಲ್ಲ. ಸ್ತ್ರೀಯರೆಲ್ಲರೂ ಮದುವೆಯಾಗಲೇಬೇಕೆಂಬ ಕಟ್ಟುಪಾಡುಗಳಿರಲಿಲ್ಲ. ಪತಿಯು ಮರಣ ಹೊಂದಿದರೆ ಆತನ ತಮ್ಮನನ್ನೇ ಆಕೆಯು ವಿವಾಹವಾಗಬಹುದಿತ್ತು. ಸ್ತ್ರೀಯರು ಸಭೆ ಸಮಾರಂಭಗಳಲ್ಲಿ ಬೌದ್ಧಿಕ ಚಟುವಟಿಕೆಗಳಲ್ಲಿ, ಯಜ್ಞಯಾಗಾಧಿಗಳಲ್ಲಿ ಭಾಗವಹಿಸುತ್ತಿದ್ದರು. ಮಹಿಳೆಯರು ಹಲವಾರು ಶ್ಲೋಕಗಳನ್ನು ರಚಿಸುತ್ತಿದ್ದರು.

ಋಗ್ವೇದದಲ್ಲಿ ಹೆಣ್ಣು ಮನೆಯೊಡತಿ. ಆಕೆಯು ಯುದ್ಧದಲ್ಲಿಯೂ ಭಾಗವಹಿಸುತ್ತಿದ್ದಳು. ಧಾರ್ಮಿಕ ವಿಧಿವಿಧಾನಗಳಲ್ಲಿ ಭಾಗವಹಿಸುತ್ತಿದ್ದಳು. ಋಗ್ವೇದದಲ್ಲಿ ಸಹಗಮನ ಪದ್ಧತಿ ಆಚರಣೆಯಲ್ಲಿರಲಿಲ್ಲ. ಹಲವು ಮಕ್ಕಳಿಗೆ ತಂದೆ–ತಾಯಿಗಳಾಗುವುದೇ ಆದರ್ಶಮಯವಾಗಿತ್ತು. ಬಾಲಕಿಯರು ಉಪನಯನ, ಸನ್ಯಾಸತ್ವವನ್ನು ಅನುಸರಿಸಬಹುದಿತ್ತು. ಋಗ್ವೇದದಲ್ಲಿ ಸ್ತ್ರೀಗೆ ಎಲ್ಲಾ ಕ್ಷೇತ್ರದಲ್ಲೂ ಅವಕಾಶವಿತ್ತು. ಗಂಡುಮಕ್ಕಳಂತೆ ಆಕೆಗೂ ತಂದೆಯ ಆಸ್ತಿಯಲ್ಲಿ ಅಧಿಕಾರವಿದೆ. ತನ್ನ ಪತಿಯಾಗುವವನನ್ನು ಆಯ್ಕೆ ಮಾಡಿಕೊಳ್ಳುವ ಅವಕಾಶವಿತ್ತು. ಪುರೋಹಿತ ಪದ್ಧತಿಯಿಂದ ಶೂದ್ರರಂತೆ ಸ್ತ್ರೀಯು ಆ ಸ್ಥಾನಕ್ಕೆ ತಳ್ಳಲ್ಪಟ್ಟಳು. ವೇದಗಳ ಕಾಲದಲ್ಲಿ ಆಚರಣೆಗೆ ಬಂದ ಬಹುಪತ್ನಿತ್ವ ಪದ್ಧತಿ ಮಹಿಳೆಯರ ಹೀನಸ್ಥಿತಿಗೆ ಕಾರಣವಾಯಿತು. ಋಗ್ವೇದದ ನಂತರ ಸ್ತ್ರೀಯು ಗಂಡಸಿನ ದೈಹಿಕ ಸುಖಕ್ಕೆ ಮಾತ್ರ ಇರಬೇಕು ಎಂಬ ಭಾವನೆಯು ಬೆಳೆಯಿತು. ಅಥರ್ವಣ ವೇದದಲ್ಲಿ ಸ್ತ್ರೀವಶೀಕರಣ ವಿದ್ಯೆಯನ್ನು ಮಾಡಲಾಗುತ್ತಿತ್ತು. ಜೂಜುಗಾರರು ತಮ್ಮ ಹೆಂಡತಿಯರನ್ನೇ ಜೂಜಿನಲ್ಲಿ ಪಣವಾಗಿಡುತ್ತಿದ್ದರು. ದಾಸಿಯರನ್ನು ದಾನಕೊಡುವ ಪದ್ಧತಿಯು ಈ ಕಾಲದಲ್ಲೇ ಬೆಳೆಯಿತು. ಅದೇನೆ ಇರಲಿ ವೇದಗಳ ಕಾಲದಲ್ಲಿಯೇ ನಾರಿಯರನ್ನು ಆರ್ಯರು ತೊತ್ತಿನ ಆಳುಗಳಾಗಿ, ಭೋಗದ ವಸ್ತುಗಳಾಗಿ ಕಂಡಿರುವುದು ಸ್ಪಷ್ಟವಿದೆ. ವೇದಗಳ ಕಾಲದಲ್ಲಿ ವಿವಾಹವೆಂಬುದು ಒಂದು ಕಟ್ಟುನಿಟ್ಟಿನ ನಿಯಮವಾಗಿ ಮಾರ್ಪಾಟು ಹೊಂದಿತ್ತು. ಮದುವೆಗೆ ಅಗತ್ಯವಾಗಿದ್ದ ದೈಹಿಕ, ಮಾನಸಿಕ ಸಿದ್ಧತೆಗಳಿಗಿಂತ ಸ್ತ್ರೀಪುರುಷರು ಧಾರ್ಮಿಕವಾದ ಹಾಗೂ ಆಧ್ಯಾತ್ಮಿಕವಾದ ಸಿದ್ಧತೆಗೆ ಹೆಚ್ಚಿನ ಆಸಕ್ತಿ ವಹಿಸಬೇಕು. ಇದರ ಪರಿಣಾಮವಾಗಿ ಸ್ತ್ರೀ–ಪುರುಷರಲ್ಲಿ ಅಸಮಾನತೆಗಳು ತಲೆದೋರಿದವು ಸ್ತ್ರೀಯರ ಸ್ಥಾನಮಾನ ಇಳಿಮುಖವಾಯಿತು.

ಬ್ರಾಹ್ಮಣಗಳು, ಉಪನಿಷತ್ತುಗಳು, ಅರಣ್ಯಕಗಳು, ನೀತಿಸಂಹಿತೆಗಳೆಂದು ಕರೆಯುವುದು ವರ್ಣಾಶ್ರಮಗಳನ್ನು ಪ್ರತಿನಿಧಿಸುವಂತಿದ್ದವು. ಇದರಿಂದ ಮೇಲು–ಕೀಳು ಎಂಬುದು ಬೆಳೆಯಲು ಕಾರಣವಾಯಿತು.

ವೇದಗಳ ಕಾಲದಲ್ಲಿ ಗಂಡು ಮಗುವಿಗ ಪ್ರಾಧಾನ್ಯತೆಯನ್ನು ನೀಡಲಾಯಿತು. ಗಂಡು ಮಕ್ಕಳಿಗೆ ಹೆಚ್ಚು ಮಾನ್ಯತೆಯನ್ನು ನೀಡುವ ಸಮಾಜವಾಗಿ ನಿರ್ಮಾಣವಾಯಿತು. ಉಪನಿಷತ್ತುಗಳು ಸ್ತ್ರೀಯರ ವಿಷಯದಲ್ಲಿ ಮಾನವೀಯವಾಗಿರುವುದನ್ನು ಕಾಣುತ್ತೇವೆ.

ಋಗ್ವೇದದ ನಂತರದ ಕಾಲದಲ್ಲಿ ಹೆಣ್ಣಿನ ಬಗ್ಗೆ ಕ್ಷುಲ್ಲಕ ಭಾವನೆ ಬೆಳೆಯಲಾರಂಭಿಸಿತು. ವಿಚ್ಛೇಧನ ಸಾಮಾನ್ಯವಾಗಿತ್ತು. ಸಭೆ–ಸಮಾರಂಭಗಳಲ್ಲಿ ಪಾವಿತ್ರತೆಯನ್ನು ಮುಂದು ಮಾಡಿ ಪಾಲ್ಗೊಳ್ಳುವಿಕೆಯನ್ನು ನಿಷೇಧಿಸಲಾಯಿತು. ಹೆಣ್ಣನ್ನು ರಾಜಕೀಯ ಆರ್ಥಿಕ, ಸಾಮಾಜಿಕವಾಗಿ ದೂರ ಸರಿಸಲಾಯಿತು. ಆಕೆಯನ್ನು ಕುಟುಂಬ ಪೋಷಣೆಗೆ ತರಭೇತುಗೊಳಿಸಲಾಯಿತು. ಇದರಿಂದ ಅವರ ವಿದ್ಯಾಭ್ಯಾಸ ಕುಂಠಿತವಾಯಿತು.

ಋಗ್ವೇದದ ಕಾಲದಲ್ಲಿ ಹೆಣ್ಣು ಮೈನೆರೆಯುವುದಕ್ಕೆ ಮುಂಚಿತವಾಗಿಯೇ ಆಕೆಗೆ ವಿವಾಹ ಮಾಡುತ್ತಿರಲಿಲ್ಲ. ಆಕಗೆ ಹದಿನಾರು ವರ್ಷ ತುಂಬಿದ ನಂತರವೇ ಆಕೆಗೆ ವಿವಾಹ ಮಾಡಲಾಗುತ್ತಿತ್ತು. ಆದರೆ ವೇದಗಳ ಕಾಲದಲ್ಲಿ ಹೆಣ್ಣು ಋತುಮತಿಯಾಗುವುದಕ್ಕೆ ಮುಂಚಿತವಾಗಿಯೇ ವಿವಾಹ ಮಾಡದಿದ್ದರೆ ತಂದೆಗೆ ನರಕಭಾಜನನಾಗುವ ಭಯವನ್ನು ಮಾಡುತ್ತಿದ್ದರು.

ಸ್ತ್ರೀಯು ಸ್ನೇಹಕ್ಕೆ ಯೋಗ್ಯಳಾದವಳಲ್ಲ, ಅವರ ಹೃದಯಗಳನ್ನು ತೋಳಕ್ಕೆ ಹೋಲಿಸಲಾಗಿದೆ. ವೇದಗಳ ಕಾಲದಲ್ಲಿ ಸ್ತ್ರೀಯರ ಸ್ಥಾನಮಾನಗಳು ಅಷ್ಟೊಂದು ಉತ್ತಮವಾಗಿರಲಿಲ್ಲ. ಆಗಲೂ ಕೂಡ ಹೆಣ್ಣನ್ನು ಹೀನಾಯವಾಗಿಯೇ ಕಾಣಲಾಗುತ್ತಿತ್ತು. ಅಂದರೆ ವೇದಗಳ ಕಾಲದಲ್ಲಿಯೂ ಸ್ತ್ರೀಯರನ್ನು ಎರಡನೇಯ ದರ್ಜೆ ಪ್ರಜೆಯಂದೆ ಗುರ್ತಿಸಲಾಗಿತ್ತು. ಪುರುಷನಿಗೆ ಹೆಚ್ಚಿನ ಪ್ರಾಧ್ಯಾನ್ಯತೆಯನ್ನು ನೀಡಲಾಗಿತ್ತು.

ನಾಗರೀಕತೆಯ ಪೂರ್ವದಿಂದ ಹಿಡಿದು ಶಿಲಾಯುಗ, ವೇದಗಳ ಕಾಲದಿಂದ ಪುರಾಣ, ಮಹಾಕಾವ್ಯ, ಜೈನಧರ್ಮ ಮತ್ತು ಬೌದ್ಧಧರ್ಮ, ಚಾಣುಕ್ಯನ ನೀತಿ, ಮನುಸ್ಮೃತಿ ಇವೆಲ್ಲವೂಗಳನ್ನು ಅಧ್ಯಯನ ಮಾಡಿದಾಗ ತಿಳಿದುಬರುವ ಸಂಗತಿಯೆಂದರೆ ನಾಗರೀಕತೆಯ ಪೂರ್ವದಿಂದ ಹಿಡಿದು ಇಂದಿನವರೆಗೂ ಪುರುಷಪ್ರಧಾನತೆಯನ್ನೇ ಕಾಣಬಹುದಾಗಿದೆ. ಪುರುಷಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ ಸ್ತ್ರೀಯರನ್ನು ಎರಡನೇ ದರ್ಜೆಯವಳೆಂದು ಯಾವ ಕೆಲಸಕ್ಕೂ ಯೋಗ್ಯಳಲ್ಲದವಳು ಎಂದು ತೀರ್ಮಾನಿಸಿದ್ದಾರೆ. ಇಂದಿಗೂ ಸಹ ಸ್ತ್ರೀಯು ಪುರುಷನ ಅಡಿಯಾಳಾಗಿ ತನ್ನ ಕರ್ತವ್ಯವನ್ನು ನಿರ್ವಹಿಸುತ್ತಿದ್ದಾಳೆ.

ಅಧ್ಯಾಯ - ೨೭

# ಮಧ್ಯಯುಗದಲ್ಲಿ ಸ್ತ್ರೀಯರ ಸ್ಥಾನಮಾನ

ಭಾರತದಲ್ಲಿ ಮಧ್ಯಯುಗವನ್ನು ಮುಸ್ಲಿಂರಯುಗ ಎಂದು ಕರೆಯುತ್ತಾರೆ. ಏಕೆಂದರೆ ಈ ಅವಧಿಯಲ್ಲಿ ಅವರು ಭಾರತದ ಸಾಂಸ್ಕೃತಿಕ ಮತ್ತು ಧಾರ್ಮಿಕ ಅಂಶಗಳನ್ನು ನಾಶಗೊಳಿಸುತ್ತಾರೆ. ಈ ಅವಧಿಯಲ್ಲಿ ಸ್ತ್ರೀಯರ ಸ್ಥಾನಮಾನಗಳು ಸಹ ಅದೋಗತಿ ಪರಿಸ್ಥಿತಿಯನ್ನು ತಲುಪಿತು. ಸ್ತ್ರೀಯರ ಶೋಷಣೆ ಎಲ್ಲೆ ಮೀರಿತು ಆದ್ದರಿಂದ ಈ ಯುಗವನ್ನು ಅಂದಕಾರ ಯುಗ ಎಂದು ಕರೆಯುತ್ತಾರೆ. ಈ ಯುಗದಲ್ಲಿ ಸ್ತ್ರೀ ಪುರುಷರಲ್ಲಿ ಸರಿಸಮಾನತೆ ಇರಲಿಲ್ಲ ಅಲ್ಲದೆ ಸ್ತ್ರೀ ಮತ್ತು ಪುರುಷರಲ್ಲಿ ಸರಿಸಮಾನತೆ ಇರಲಿಲ್ಲ ಅಲ್ಲದೆ ಸ್ತ್ರೀ ಮತ್ತು ಪುರುಷರಲ್ಲಿ ಸರಿಸಮಾನತೆ ಇರಲಿಲ್ಲ ಅಲ್ಲದೆ ಸ್ತ್ರೀ ಮತ್ತು ಪುರುಷರಲ್ಲಿ ಸಮಾನವಾದ ಹಕ್ಕುಗಳಿರಲಿಲ್ಲ. ಈ ಕಾಲದಲ್ಲಿ ಸ್ತ್ರೀಯರನ್ನು ಎರವಲು ನೀಡುವ, ಅತಿಥಿಗಳನ್ನು ಸತ್ಕಾರ ಮಾಡಲು ಬಿಡುತ್ತಿದ್ದರು. ಹುಟ್ಟಿದ ಹೆಣ್ಣು ಮಕ್ಕಳು ಬೇಡವೆನಿಸಿದರೆ ವಿಚ್ಛೇದನ ನೀಡುವ ಪದ್ದತಿಗಳು ರೂಢಿಯಲ್ಲಿದ್ದವು. ಸ್ತ್ರೀಯರ ಸಾಮ್ಯಾಜಿಕ ಪರಿಸ್ಥಿತಿ ಅಷ್ಟೊಂದು ಉತ್ತಮವಾಗಿರಲಿಲ್ಲ. ಕೊಲೆ, ಸುಲಿಗೆ ಕಳ್ಳತನ ದರೋಡೆ ಜೂಜು, ಮಧ್ಯಪಾನ ಇನ್ನೂ ಮುಂತಾದ ಸಾಮಾಜಿಕ ಪಿಡುಗುಗಳ ಜೊತೆಗೆ ಹೆಣ್ಣಿನ ಮೇಲೆ ಜೊತೆಗೆ ಹೆಣ್ಣಿನ ಮೇಲೆ ಬಲತ್ಕಾರವಾಗಿ ವ್ಯಭಿಚಾರ ಮಾಡುತ್ತಿದ್ದರು ಕೆಲವು ಅರಬರು.

ಇಬ್ರಾಹಿಮ್ ಸಈದ್ ಅವರಿಂದ ರಚಿತವಾದ ಮುಸುಕಿನಲ್ಲಿ ಮುಸ್ಲಿಂ ಮಹಿಳೆ ಎಂಬ ಕೃತಿಯಲ್ಲಿ ಇಸ್ಲಾಂ ಧತ್ಮದ ಮಹಿಳೆಯರ ಸ್ಥಾನಮಾನವನ್ನು ಯಾವ ರೀತಿ ಚಿತ್ರಿಸಿದ್ದಾರೆ ಎಂಬುದನ್ನು ಈ ಕೆಳಕಂಡಂತೆ ಕಾಣಬಹುದು.

ನಾಗರೀಕತೆ ಮತ್ತು ಸಂಸ್ಕೃತಿಗಳ ಗಂಧಗಾಳಿಯೂ ಸೋಕಿರದ ಅರೇಬಿಯಾದಲ್ಲಿ ಅಂದಿನ ಕಾಲದಲ್ಲಿ ಹೆಣ್ಣಿನ ಸ್ಥಿತಿ ತುಂಬ ಶೋಚನೀಯವಾಗಿತ್ತು ಎಂದರೆ ತಪ್ಪಾಗಲಾರದು. ಅರಬರು ಹೆಣ್ಣಿನ ಅಸ್ಥಿತ್ವವನ್ನೇ ಅಪಮಾನವೆಂದು ಭಾವಿಸಿದ್ದರು. ಹೆಣ್ಣು ಮಕ್ಕಳು ಹುಟ್ಟಿದ ಸುದ್ದಿ ಕೇಳಿದರೆ ಶೋಕ ಸಂದೇಶ ಕೇಳಿದವರಂತೆ ದುಃಖ ತಪ್ತರಾಗುತ್ತಿದ್ದರು. ಗಂಡು ಮಗುವಿನ ಜನನವಾಗಿದೆ ಎಂಬ ಸುದ್ದಿ ಕೇಳಿದರೆ ಬಿಗುತ್ತಿದ್ದರು. ಅರಬರಲ್ಲಿ ಯಾರಿಗಾದರು ಹೆಣ್ಣು ಮಗುವಿನ ಜನನವಾಗಿದೇ ಎಂಬ ಸುದ್ದಿ ಕೇಳಿದ ಕೂಡಲೇ ಅವರ ಮುಖ ಕಪ್ಪಾಗುತ್ತಿತ್ತು. ದುಃಖದಿಂದ ಮುಖವೇ ಇಳಿದು ಹೋಗಿ ಈ ಸುದ್ದಿ ಕೆಟ್ಟದೆಂದು ತಿಳಿದು ತನ್ನ ಜನಾಂಗದವರ ಎದುರಿಗೆ ಮುಖವನ್ನು ತೋರಿಸಲಾಗದೆ ಮರೆಸಿ ಕೊಳ್ಳುತ್ತಿದ್ದರು ಆ ಹೆಣ್ಣು ಮಗುವನ್ನು ಇಟ್ಟಿಕೊಳ್ಳುಬೇಕೋ ಅಥವಾ ಮಣ್ಣಿನಲ್ಲಿ ಹೂತುಬಿಡಬೇಕೋ ಎಂದು ಯೋಚಿಸುತ್ತಿರುತ್ತಾನೆ. (ಪವಿತ್ರ ಕುರ್‌ಆನ್ ೧೬-೫೮-೫೯) ಸ್ತ್ರೀಯರ ಬಗ್ಗೆ ದ್ವೇಷ ಅಸೂಯೇ ಅಸೂಯೇ ಮತ್ತು ಜಿಗುಪ್ಸೆ ಎಷ್ಟರ ಮಟ್ಟಿಗೆ ವ್ಯಾಪಸಿತ್ತೆಂದರೆ ಒಬ್ಬನ ಮನೆಯಲ್ಲಿ ಹೆಣ್ಣು ಶಿಶು

ಹುಟ್ಟಿದಾಗ ಆತ ಆ ಮನೆಯನ್ನೇ ಅಪಶಕುನವೆಂದು ತೊರೆದು ಬಿಡುತ್ತಿದ್ದ (ತಫ್ಸಿರ್ ಕಬೀರ್ ಭಾಗ ೨ ಪುಟ **೪೩೫**) ಎಂದಿದೆ.

ಸ್ತ್ರೀಯರ ಬಗ್ಗೆ ಅರಬರಲ್ಲಿ ಕರುಣೆ ಮತ್ತು ಪ್ರೀತಿ, ವಾತ್ಸಲ್ಯ ಮನೋಭಾವವೇ ಇರಲಿಲ್ಲ. ಅವರು ಹೆಣ್ಣು ಮಕ್ಕಳನ್ನು ಜೀವಂತವಾಗಿಯೇ ಹೂತು ಬಿಡುತ್ತಿದ್ದರು. ಇಲ್ಲದೆ ಹೋದರೆ ಬಾವಿಗೆ ನೂಕುತ್ತಿದ್ದರು. ಇದಕ್ಕೆ ಒಂದು ನಿದರ್ಶನ ಹೀಗಿದೆ – ಒಬ್ಬನು ಪ್ರವಾದಿಯಲ್ಲಿ ತನ್ನ ಅಜ್ಞಾನ ಕಾಲದ ಘಟನೆಯನ್ನು ವಿವರಿಸುತ್ತಾ ಹೀಗೆ ಹೇಳಿದನು ನನಗೆ ಒಬ್ಬಳು ಮಗಳಿದ್ದಳು. ಆಕೆ ನನ್ನನ್ನು ಬಹಳವಾಗಿ ಪ್ರೀತಿಸುತ್ತಿದ್ದಳು. ನಾನು ಕರೆದಾಗಲೆಲ್ಲಾ ಸಂತೋಷದಿಂದ ನನ್ನ ಬಳಿ ಬರುತ್ತಿದ್ದಳು. ಒಂದು ದಿನ ನಾನು ಆಕೆಯನ್ನು ಕರೆದು ಆಕೆ ಓಡೋಡಿ ಬಂದಳು. ನಾನು ಆಕೆಯನ್ನು ಕರೆದುಕೊಂಡು ಹೋಗಿ ಸಮೀಪದ ಬಾವಿಯೊಂದಕ್ಕೆ ದೂಡಿಬಿಟ್ಟೆ ಆಗಲೂ ಆಕೆ ಅಪ್ಪಾ ಅಪ್ಪಾ ಅಪ್ಪಾ ದೂಡ ಭೇಡಿ ಎನ್ನುತ್ತಿದ್ದಳು. ಇದನ್ನು ಕೇಳಿ ಪ್ರಾವದಿವರ್ಯರು ತಮ್ಮ ಗಡ್ಡ ತೊಯ್ದು ಹೋಗುವಷ್ಟು ಅತ್ತುಬಿಟ್ಟರು. ಮುಂತಾದ ಉದಾಹರಣೆಗಳಿಂದ ತಿಳಿದು ಬರುವುದೇನೆಂದರೆ ಅರಬರಲ್ಲಿ ತಂದೆಯ ವಾತ್ಸಲ್ಯಮಯ ಕೈಗಳೂ ಸಹ ಹೆಣ್ಣು ಮಕ್ಕಳ ವಿಷಯದಲ್ಲಿ ನಿರ್ದಯವಾಗಿದ್ದವು ಎಂಬ ಕಾರಣಕ್ಕೆ ಜೀವಂತ ಉಳಿಸುತ್ತಿಲಿಲ್ಲ. ಜೀವಂತ ಉಳಿಸಿದರೂ ಜೀವನದ ಯಾವ ಹಕ್ಕುಗಳು ಹೆಣ್ಣಿಗೆ ಇರಲಿಲ್ಲ ಎಂಬುದು ತಿಳಿಯುತ್ತದೆ. ಪುರುಷರು ಎಷ್ಟು ಜನಹೆಂಗಸರನ್ನಾದರೂ ವಿವಾಹವಾಗಬಹುದಾಗಿತ್ತು. ವಹಬ್ ಅಸದಿ ಇಸ್ಲಾಮ್ ಸ್ವೀಕಾರ ಮಾಡಿದಾಗ ಗೀಲಾನ್ ಸಖಿಫಿ ಮುಸ್ಲಿಂರಾದಾಗ ಅವರಿಗೆ ತಲಾ ಹತ್ತು ಮಂದಿ ಪತ್ನಿಯರಿದ್ದರು ಅದೇ ರೀತಿ ತಲಾಕ್ ನೀಡುವುದಕ್ಕೂ ಯಾವುದೇ ಮಿತಿಯಿರಲಿಲ್ಲ ಪತಿಯು ಯಾವಾಗ ಎಷ್ಟು ಸಲ ಬೇಕಾದರೂ ತಲಾಕ್ ನೀಡಿ ಇದ್ದತ್ ಅವಧಿ ಮುಗಿಯುವುದರೊಳಗೆ ಆಕೆಯನ್ನು ಮರಳಿ ಸ್ವೀಕರಿಸುತ್ತಿದ್ದ ಇದೇ ರೀತಿಯಲ್ಲಿ ಆತ ಜೀವನಪರ್ಯಂತ ತನ್ನ ಪತಿಯನ್ನು ಪೀಡಿಸಬಹುದಾಗಿತ್ತು. ಪತಿಯು ಜೀವಿಸಿರುವತನಕ ಆಕೆ ಅವನ ಅಧೀನದಲ್ಲಿರುದ್ದಳು ಪತಿ ತೀರಿಕೊಂಡ ಬಳಿಕ. ಅವನ ಉತ್ತರಾಧಿಕಾರಿಗಳಿಗೆ ಅವಳ ಮೇಲೆ ಪೂರ್ಣ ಅಧಿಕಾರವಿರುತ್ತಿತ್ತು. ಅವರು ಬಯಸಿದರೆ ಆಕೆಯನ್ನು ಸ್ವತಃ ವಿವಾಹ ಮಾಡಿಕೊಡುತ್ತಿದ್ದರು. ಇಲ್ಲವಾದರೆ ಬೇರೆಯವರಿಗೆ ವಿವಾಹ ಮಾಡಿಕೊಡುತ್ತಿದ್ದರು.ಅವರ ವಿವಾಹವನ್ನೇ ಮಾಡದೆ ಇರುವುದಕ್ಕೂ ಅವರಿಗೆ ಅಧಿಕಾರವಿರುತ್ತಿತ್ತು. ವಿಧವೆಯ ಸೊತ್ತನ್ನು ಕಬಳಿಸಲಿಕ್ಕಾಗಿ ಆಕೆಯನ್ನು ಮರುವಿವಾಹದ ಹಕ್ಕಿನಿಂದಲೇ ವಂಚಿಸುತ್ತಿದ್ದರು. ಕೆಲವೊಮ್ಮೆ ಎಳೆಯ ಹುಡುಗನು ಪ್ರಾಯಕ್ಕೆ ಬಂದು ಆಕೆಯನ್ನು ವಿವಾಹ ತನಕ ಆಕೆಯ ವಿವಾಹವನ್ನು ತಡೆ ಹಿಡಿಯುತ್ತಿದ್ದರು. ಮಲತಾಯಿಯೊಂದಿಗೆ ಮದುವೆ ಯಾಗುವುದೂ ಕೂಡಾ ಅವರ ಮೆಟ್ಟಿಗೆ ಕೆಟ್ಟದಾಗಿರಲಿಲ್ಲ. ಮಲತಾಯಿಯೊಂದಿಗೆ ವಿವಾಹವು ಅರಬರಲ್ಲಿ ಸಾಮಾನ್ಯವಾಗಿತ್ತು. (ಕುರ್ಆನ್ ಭಾಗ ೨ ಪುಟ ೧೪೮)

ಇಷ್ಟೇ ಅಲ್ಲದೆ ಇಸ್ಲಾಂ ಮಹಿಳೆಗೆ ಆಸ್ತಿಯ ಹಕ್ಕಿರಲಿಲ್ಲ. ಇಂಥ ಹೊತ್ತಿನಲ್ಲಿ ಮಹಮದ್ ಪೈಗಂಬರರು ಇಸ್ಲಾಂ ಧರ್ಮ ಜೀವನ ಸಂದೇಶ ಸಾರಿದರು. ಅವುಗಳೆಂದರೆ ೧. ಎಲ್ಲಾ ಮಾನವರೂ ಅಲ್ಲಾನ ಕುಟುಂಬದ ಸದಸ್ಯರು. ೨. ಎಲ್ಲರೂ ಸಹೋದರ – ಸಹೋದರಿಯರು ೩. ಎಲ್ಲಾರೂ ಸಮಾನರು ೪. ಅನ್ಯರಿಗೆ ಸಹಾಯ ಮಾಡಬೇಕು ೫.ಮಹಿಳೆಯರನ್ನು ಸದಾ ಗೌರವಿಸಬೇಕು ೬. ಮೋಸ ವಂಚನೆ ವ್ಯಭಿಚಾರ, ಕಳ್ಳತನ ಕೊಲೆ, ಸುಲಿಗೆಗಳನ್ನು ಮಾಡಬಾರದು ಎಂದು ಆದೇಶವಿತ್ತರು. ಹೀಗೆ ಮನುಷ್ಯನ ಘನತೆ ಮತ್ತು ಉನ್ನತಿಯನ್ನು ಎತ್ತಿ ಹಿಡಿದ ಇಸ್ಲಾಂ ಧರ್ಮದಲ್ಲಿ ಅನೇಕ ಸಾಮಾಜಿಕ ಕಟ್ಟುಪಾಡುಗಳು ಸ್ತ್ರೀಯರ ವಿಷಯದಲ್ಲಿ ನಿರೂಪಿತಗೊಂಡಿರುವುದನ್ನು ಅಲ್ಲೆಗಳೆಯಲಾಗುವುದಿಲ್ಲ. ಕುರ್‌ಆನ್ ಮೂರನೇ ಭಾಗವಾದ ಸೂರಃ ಅನ್ನೋರ್‌ನಲ್ಲಿ ಈ ಕೆಳಕಂಡಂತೆ ಸ್ತ್ರೀಯರಿಗೆ ಸಾಮಾಜಿಕ ನಿಯಮಗಳಿವೆ.

೧) ಗೌರವ ಗಾಂಭೀರ್ಯದೊಂದಿಗೆ ಮನೆಯಲ್ಲಿ ಕುಳಿತಿರಿ. ಸಲ್ಲದ ಶೃಂಗಾರಗಳನ್ನು ಮಾಡಿ ಬೀದಿಗಿಳಿಯಬೇಡಿ. ಪರಪುರುಷರ ಜೊತೆ ಮಾತನಾಡಬೇಕಾಗಿ ಬಂದರೆ ಆತನ ಮನದಲ್ಲಿ.

೨) ನಿಮ್ಮ ಕುರಿತು ಸಲ್ಲದ ಆಸೆಗಳು ಅಂಕುರಿಸುವ ರೀತಿಯ ಮೋಹಕ ದನಿಯಲ್ಲಿ ಮಾತನಾಡಬೇಡಿ ಎಂದು ಪ್ರವಾದಿ ಪತ್ನಿಯರೊಂದಿಗೆ ಏನಾದರೂ ಕೇಳಲಿಕ್ಕದ್ದರೆ ಪರದೆಯ ಹಿಂದಿನಿಂದ ಕೇಳಬೇಕೆಂದು ಆದೇಶಿಸಲಾಯಿತು. (ಅಯತ್ – ೫೩)

೩) ಪ್ರವಾದಿವರ್ಯರ ಮನೆಗೆ ಅನುಮತಿ ವಿನಾಪರ ಪುರುಷರ ಪ್ರವೇಶಿಸುವುದನ್ನು ನಿಷೇಧಿಸಲಾಯಿತು. ಪ್ರವಾದಿ ಪತ್ನಿಯರೊಂದಿಗೆ ಏನಾದರೂ ಕೇಳಲಿಕ್ಕದ್ದರೆ ಪರದೆಯ ಹಿಂದಿನಿಂದ ಕೇಳಬೇಕೆಂದು ಆದೇಶಿಸಲಾಯಿತು. (ಅಯತ್ – ೫೩)

೪) ಮನೆಯಿಂದ ಹೊರ ಹೋಗ ಬೇಕಾದಾಗ ಸರಿಯಾಗಿ ಚದ್ದರ ಹೊದ್ದು ಮುಸುಕು ಹಾಕಿಕೊಂಡು ಹೋಗಬೇಕೆಂದು ಎಲ್ಲ ಮುಸ್ಲಿಂಮಹಿಳೆಯರಿಗೆ ಆಜ್ಞೆ ಕೊಡಲಾಯಿತು. (ಆಯತ್ ೫೯)

ಸ್ತ್ರೀ ಮತ್ತು ಪುರುಷರು ಪರಸ್ಪರ ದೃಷ್ಟಿಯಿಟ್ಟು ನೋಡುವುದನ್ನು ತಪ್ಪಿಸಲಾಯಿತು. ವ್ಯಭಿಚಾರ ಮಾಡುವಂತಹ ಸ್ತ್ರೀ – ಪುರುಷರನ್ನು ಸಾಮಾಜಿಕವಾಗಿ ಬಹಿಷ್ಕರಿಸುವ ಆದೇಶವನ್ನು ಹೊರಡಿಸಿದರು. ಅವರ ಜೊತೆ ಮುಸಲ್ಮಾನರು ವೈವಾಹಿತ ಸಂಬಂಧ ಸ್ಥಾಪಿಸುವುದನ್ನು ನಿಷೇಧಿಸಲಾಯಿತು. ವ್ಯಭಿಚಾರದ ಆರೋಪ ಹೊತ್ತ ವ್ಯಕ್ತಿಗೆ ೮೦ ಛಡಿಯೇಟುಗಳನ್ನು ನೀಡಿಬೇಕೆಂದು ನಿಶ್ಚಾಯಿಸಲಾಯಿತು. ಸ್ತ್ರೀ ಯರು ಮನೆಯೊಳಗಡೆಯೇ ಇದ್ದು ಕೊಂಡು ಎದೆ ಮತ್ತು ಮುಖಗಳನ್ನು ಮುಚ್ಚಿಡುವಂತೆ ಹೇಳಲಾಯಿತು. ಮನೆಯ ಹತ್ತಿರದ ರಕ್ತಸಂಬಂಧಿಗಳು ಮತ್ತು ಮನೆಯ ಖಾಸಗಿ ಸೇವಕರ ವಿನಾ ಇತರರ ಮುಂದೆ ಶೃಂಗರಿಸಿಕೊಂಡು ಬರಬಾರದೆಂದು ಅಪ್ಪಣೆ ಮಾಡಲಾಯಿತು. ಮನೆಯಿಂದ ಹೊರಗಡೆ ಹೋಗುವಾಗ

ತಮ್ಮ ಸೌಂದರ್ಯ, ಶೃಂಗಾರ್ ಇತ್ಯಾದಿಗಳು ಕಾಣದಂತೆ ಹಾಗೂ ಶಬ್ಧ ಮಾಡುವಂತಹ ಆಭರಣಗಳನ್ನು ಹಾಕಿಕೊಳ್ಳ ಬಾರದೆಂದು ಮುಸ್ಲಿಂ ಮಹಿಳೆಯರಿಗೆ ಆದೇಶಿಸಲಾಯಿತು.

ಮುಸ್ಲಿಂ ಸಮಾಜದಲ್ಲಿ ಸ್ತ್ರೀ ಮತ್ತು ಪುರುಷರು ಅವಿವಾಹಿತರಾಗಿ ಕುಳಿತಿರುವುದನ್ನು ನಿರುತ್ತೇಜಿಸಲಾಯಿತು. ಮದುವೆಯಾಗದೇ ಇರುವವರಿಗೆ ಮದುವೆ ಮಾಡಬೇಕೆಂದು ಆದೇಶ ನೀಡಲಾಯಿತು ಇಷ್ಟೇ ಅಲ್ಲದೆ ದಾಸಿಯರು ಮತ್ತು ಸೇವಕರು ಕೂಡ ಮದುವೆಯಾಗದೇ ಇರಲು ಬಿಡಬೇಡಿ ಏಕೆಂದರೆ ಅವಿವಾಹಿತರ ಜೀವನದಲ್ಲಿ ಕೆಟ್ಟ ಕೆಲಸಕ್ಕೆ ಅವಕಾಶವಿರುತ್ತದೆ. ಸ್ತ್ರೀ ಯರು ಮತ್ತು ಪುರುಷರ ಮದುವೆಯಾಗುವುದಕ್ಕೆ ಮೊದಲೇ ಮಾತನಾಡುವುದನ್ನು ನೀಷೇದಿಸಲಾಯಿತು.

ವೃದ್ದಮಹಿಳೆಯರು ತಮ್ಮ ಮನೆಯೊಳಗೆ ತಲೆಯಿಂದ ಮುಸುಕು ಬೇಕಾದರೆ ಹಾಕಿಕೊಳ್ಳದೇ ಇರಲು ಅವಕಾಶ ನೀಡಲಾಯಿತು. ಆದರೆ ಅವರು ಕೂಡ ಹೆಚ್ಚು ಅಲಂಕಾರ ಮಾಡಿಕೊಳ್ಳಲು ಅವಕಾಶವಿರಲಿಲ್ಲ ಇದ್ದರೂ ಬೇರೆಯ ಪುರುಷರ ಮುಂದೆ ಅಲಂಕಾರ ಮಾಡಿಕೊಂಡು ಹೋಗಬಾರದೆಂದು ಎಚ್ಚರಿಸಲಾಯಿತು.

ಇಸ್ಲಾಮಿ ಕಾನೂನಿನ ದೃಷ್ಠಿಯಲ್ಲಿ ವಿವಾಹೊತ್ತರ ವ್ಯಭಿಚಾರವು ಘೋರವಾದ ಅಪರಾಧವಾಗಿದೆ. ಪವಿತ್ರ ಕುರ್‌ಆನ್‌ನಲ್ಲಿ ಅನ್ನಿಸಾ ಅಧ್ಯಾಯದಲ್ಲಿ ಹೀಗೆ ಹೇಳಲಾಗಿದೆ. *"ನಿಮ್ಮ ಮಹಿಳೆಯ ಪೈಕಿ ವ್ಯಭಿಚಾರವೆಸಗಿದವರ ಬಗ್ಗೆ ನಿಮ್ಮೊಳಗೆ ನಾಲ್ಕು ಮಂದಿ ಸಾಕ್ಷ್ಯವನ್ನು ಪಡೆಯಿರಿ. ಅವರು ಸಾಕ್ಷ್ಯ ಹೇಳಿದರೆ ಆ ವ್ಯಭಿಚಾರಿ ಸ್ತ್ರೀಯರನ್ನು ಮನೆಯೊಳಗೆ ಬಂಧಿಸಿಡಿರಿ. ಅವರಿಗೆ ಮರಣಬರುವವರೆಗೆ ಅಥವಾ ಅಲ್ಲಾಸನೇ ಅವರಿಗೇ ಏನಾದರೊಂದು ದಾರಿ ತೋರಿಸುವವರೆಗೆ "* (ಅನ್ನಿಸಾ – ೧೫)

ಹೀಗೆ ಇಸ್ಲಾಂಧರ್ಮದ ಕಾನೂನು ಸ್ತ್ರೀಯರ ವಿಷಯದಲ್ಲಿ ಕಟ್ಟುನಿಟ್ಟಾಗಿದೆ. ಪುರುಷರಿಗೆ ಇಲ್ಲದಂತಹ ವಿಧಿ ನಿಷಿದ್ದಗಳು ಸ್ತ್ರೀಯರ ವಿಷಯದಲ್ಲಿದ್ದವು. ಸ್ತ್ರೀ ಮತ್ತು ಪುರುಷರು ಸಹಜವಾಗಿ ಸ್ವಾಭಾವಿಕವಾಗಿ ಹೊಂದಾಗುವುದಕ್ಕೆ ಹಲವು ಪ್ರತಿಬಂಧಗಳಿವೆ. ಇಲ್ಲಿ ಸ್ತ್ರೀಯರನ್ನು ದಾಸಾನುದಾಸಿಯರನ್ನಾಗಿ ನೆಡೆಸಿಕೊಳ್ಳುವಂತೆ ಈ ಸಾಮಾಜಿಕ ಕಟ್ಟಲೆಗಳೇ ಹೇಳುತ್ತಿವೆ. ಗಂಡು ಮತ್ತು ಹೆಣ್ಣಿನ ಪರಸ್ಪರ ಪ್ರೀತಿ ಅನುರಾಗ ವಿವಾಹಗಳಿಗೆ ಇಲ್ಲಿ ಆಸ್ಪದವೇ ಇಲ್ಲ. ಒಂದು ರೀತಿಯಲ್ಲಿ ಸಹಜ ಬದುಕಿಗೆ ಅಸಹಜವಾದ ಅಡ್ಡಗೋಡೆಯನ್ನು ಧರ್ಮದ ಹೆಸರಿನಲ್ಲಿ ಕಟ್ಟಲಾಗಿದೆ.

ಮದುವೆ ಎಂಬುದು ಜೀವನದಲ್ಲಿ ಅತೀ ಮುಖ್ಯ ಘಟ್ಟ, ಇದಕ್ಕೆ ಕಾರಣವಾಗುವುದು ನಿಸರ್ಗದಲ್ಲಿದೆ. ಸ್ತ್ರೀ ಮತ್ತು ಪುರುಷ ಜೊತೆಗೂಡುವಿಕೆಯ ಪ್ರಕ್ರಿಯೆ ಮನುಷ್ಯನ ಉಗಮ ವಿಕಾಸದಷ್ಟೇ ಹಳೆಯದು. ಬರಿಯ ಮಾನವತಿಕೆ ಜೀವವಿರುವ ಯಾವುದೇ ಬಗೆಯ ಪ್ರಾಣಿಗಳಾಗಲೀ, ಪಕ್ಷಿಗಳಾಗಲೀ, ಕ್ರಿಮಿ ಕೀಟಗಳಾಗಲೀ, ಹೂಗಳಾಗಲೀ....... ಹೊಂದಾಗದೆಯೆ ವಿಧಿಯಿಲ್ಲ. ಇದು ಪ್ರಕೃತಿಯ ಸಹಜ ಧರ್ಮ. ಆದಿವಾಸಿಯಾದ ಮಾನವನ ಕಾಲದಲ್ಲಿ ಸ್ತ್ರೀ–ಪುರುಷ ಜೊತೆಗೂಡುವಿಕೆ ಸ್ವೇಚ್ಛೆಯಾಗಿತ್ತು.

ಲೈಂಗಿಕ ಆಸಕ್ತಿ ಹೆಚ್ಚಾದಾಗ ಉದ್ರೇಕಗೊಂಡಾಗ ವಿಹರಿಸುತ್ತಿದ್ದರು. ಯಾವುದೇ ರೀತಿಯ ನಿಷೇಧವಿರಲಿಲ್ಲ. ಆಗಿನ ಯುಗದಲ್ಲಿ ಮದುವೆಯೆಂಬುದು ಸಾಂಸ್ಥಿಕ ಚೌಕಟ್ಟು ಇರಲಿಲ್ಲ. ನಾಗರೀಕತೆಯ ಅರಿವಾದಾಗ ಸ್ವೇಚ್ಛೆಯಾಗಿದ್ದ ಹೊಂದಾಗುವಿಕೆಯನ್ನು ಶಾಸ್ತ್ರೋಕ್ತ ಕಟ್ಟುಪಾಡುಗಳ ವ್ಯಾಪ್ತಿಗೆ ತಂದ ಮಾನವನೇ ನಿರ್ಮಾಣಮಾಡಿದ ಏರ್ಪಾಟಿಗೆ ಪುರೋಹಿತ ಧಾರ್ಮಿಕ ವಿವರಣೆ ನೀಡಿ ಮನಸ್ಸುಗಳನ್ನು ಧಾರ್ಮಿಕ ಚೌಕಟ್ಟುಗಳಲ್ಲಿ ಬಂಧಿಸಿದ. ಈ ಪ್ರಕಿಯೆ ಸ್ತ್ರೀ ಪುರುಷರಲ್ಲಿ ಭೇದವೆಣಿಸಲಾಗಿದೆ. ಪುರುಷ ಯಜಮಾನ್ಯವನ್ನು ಸ್ಥಾಪಿಸಿದ. ಆದ್ದರಿಂದ ಜಗತ್ತಿನ ಎಲ್ಲಾ ಧರ್ಮಗಳಲ್ಲಿಯೂ ವಿವಾಹ ವಿಷಯದಲ್ಲಿ ತಮ್ಮದೇ ಆಧ ಶಾಸ್ತ್ರೋಕ್ತ ಶಿಸ್ತನ್ನು ಹೇಳುತ್ತವೆ.

ಸ್ತ್ರೀಯರಿಗೆ ಪುರುಷರಷ್ಟೇ ಸಮಾನವಾದ ಸ್ಥಾನಮಾನಗಳಿವೆ ಎಂಬುದಾಗಿ ಇಸ್ಲಾಂ ಧರ್ಮ ಹೇಳುತ್ತದೆಯಾದರೂ ***"ಪುರುಷರಿಗೆ ಸ್ತ್ರೀಯರ ಮೇಲೆ ಒಂದು ಪದವಿ ಪ್ರಾಪ್ತವಾಗಿದೆ"*** ಎನ್ನುತ್ತದೆ. ಆದರೆ ಕುರಾನ್ ನೀಡುವ ವಿವರಣೆ ಎಂದರೆ ಸ್ತ್ರೀ ಪುರುಷರು ವಿವಾಹದ ಎರಡು ಗಾಲಿಗಳಿದ್ದಂತೆ. ಅವರಿಬ್ಬರ ಪೈಕಿ ಒಬ್ಬರಿಗೆ ಕುಟುಂಬದ ನಾಯಕತ್ವ ಇರಬೇಕಾದುದು ಅವಶ್ಯಕ. ಅವನು ಕುಟುಂಬದ ಸಂರಕ್ಷಕ ಮತ್ತು ವ್ಯವಸ್ಥಾಪಕನೂ ಆಗಿರಬೇಕು. ಈ ಸ್ಥಾನವನ್ನು ಪುರುಷನಿಗೆ ವಹಿಸಿಕೊಡಲಾಗಿದೆ. ಆದ್ದರಿಂದ ಅಲ್ಲಾಹನು ಹೇಳುತ್ತಾನೆ. ಪುರುಷರು ಸ್ತ್ರೀಯರ ಮೇಲೆ **ಕವ್ವಾಮ್** (ಮೇಲ್ವಿಚಾರಕ) ಅಂದರೆ ಆಜ್ಞಾಧಿಕಾರಿಗಳಾಗುತ್ತಾರೆ. ಇದು ಅಲ್ಲಾಹನು ಕೆಲವರಿಗೆ ಕೆಲವರ ಮೇಲೆ ಶ್ರೇಷ್ಟತೆ ಪ್ರಧಾನ ಮಾಡಿದುದರಿಂದ ಸುಶೀಲೆಯಾದ ಸ್ತ್ರೀಯರು ಅನುಸರಣಶೀಲರಾಗಿರುತ್ತಾರೆ. (ಅನ್ನಿಸಾ – ೪-೨೧) ಪುರುಷರು ತಮ್ಮ ಸಂಪತ್ತನ್ನು ಖರ್ಚು ಮಾಡುವುದರಿಂದ ಶ್ರೇಷ್ಠತೆಯ ಸ್ಥಾನ ಮತ್ತು ಸ್ತ್ರೀಯರ ಮೇಲೆ ಅಧಿಕಾರ ಪ್ರಾಪ್ತವಾಗಿದೆ ಎನ್ನಬಹುದು.

ಇಲ್ಲಿ ಪ್ರಭುಸಂಹಿತೆಯಾಗಿರುವುದರಿಂದ ಚರ್ಚೆ ಅಥವಾ ಆದ ವಿವಾದಗಳಿಗೆ ಅವಕಾಶವಿಲ್ಲ. ಇದರಿಂದ ಸ್ತ್ರೀಯರಿಗೆ ಯಾವುದೇ ರೀತಿಯಾದ ಅಧಿಕಾರವಿಲ್ಲವೇ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಅಲ್ಲದೆ ಅದನ್ನು ಪ್ರಶ್ನಿಸುವಂತಿಲ್ಲ. ಪುರುಷನು ಕುಟುಂಬದ ಮೇಲ್ವಿಚಾರಕನಾಗಿದ್ದು ಸ್ತ್ರೀಯು ಪುರುಷನ ಆಜ್ಞಾನುಸಾರಿಯಾಗಿಯೂ ಆಗುವುದು ಅಗತ್ಯವೆಂದು ಸ್ತ್ರೀಯರನ್ನು ವಿಧೇಯ ಮತ್ತು ಅನುಸರಣಶೀಲರಾಗಿ ಪರಿಣಮಿಸಿದೆಯಂತೆ. ಹೀಗೆ ಇಸ್ಲಾಂ ಧರ್ಮವು ಪುರುಷನ ಶ್ರೇಷ್ಠತೆಯನ್ನು ಎತ್ತಿ ಹಿಡಿಯುತ್ತದೆ. ಸ್ತ್ರೀಯರು ಎಷ್ಟೇ ವಿದ್ಯಾವಂತೆ, ಪ್ರತಿಭಾವಂತೆಯಾಗಿದ್ದರೂ, ಕುಟುಂಬವನ್ನು ಸಂರಕ್ಷಿಸುತ್ತಿದ್ದರೂ ಆಜ್ಞಾಪಾಲಕರೇ ಆಗಿರಬೇಕು. ಪುರುಷರಿಗಿರುವಂತ ಸ್ಥಾನಮಾನಗಳು ಸ್ತ್ರೀಯರಿಗಿಲ್ಲ.

ಇಸ್ಲಾಮಿ ವೈವಾಹಿಕ ಕಾನೂನಿನ ಪ್ರಥಮ ಉದ್ದೇಶ ಚಾರಿತ್ರ್ಯದ ಸಂರಕ್ಷಣೆ ಅದು ವ್ಯಭಿಚಾರವನ್ನು ನಿಷೇಧಿಸುತ್ತದೆ. ಹೆಣ್ಣು-ಗಂಡುಗಳೆಂಬ ಮಾನವ ಕುಲದ ಎರಡು ವರ್ಗಗಳೂ ತಮ್ಮ ನೈಸರ್ಗಿಕ ಸಂಬಂಧಗಳನ್ನು ಒಂದು ವ್ಯವಸ್ಥೆಗೆ ಒಳಪಡಿಸುವಂತೆ ನಿರ್ಬಂಧಿಸುತ್ತದೆ. ವಿವಾಹ ಮಾಡಿಕೊಳ್ಳುವ ಪುರುಷನು **'ಮುಹ್ಸಿನ್'** ಆಗುತ್ತಾನೆ ಅಂದರೆ ಅವನೊಂದು ಕೋಟೆಯನ್ನು

ಕಟ್ಟಿಕೊಳ್ಳುತ್ತಾನೆ. ಮದುವೆಯಾಗುವ ಸ್ತ್ರೀಯು **'ಮುಹ್ಸಿನ್'** ಅಂದರೆ ಕೋಟೆಯ ರಕ್ಷಣೆಯಲ್ಲಿ ಬಂಧಿತಳಾಗುತ್ತಾಳೆ. ವಿವಾಹದ ರೂಪದಲ್ಲಿ ಸ್ತ್ರೀಯರ ಶರೀರ ಮತ್ತು ಚಾರಿತ್ರ್ಯಗಳ ರಕ್ಷಣೆ ಎಂಬ ನೆಪದಲ್ಲಿ ಸ್ತ್ರೀಯರನ್ನು ಬಂಧಿಸುವ ನಿಯಮವನ್ನು ಇಸ್ಲಾಂ ಹೇಳುತ್ತದೆ. ಇಲ್ಲಿ ಪುರುಷ ನಿರ್ಮಾಣ ಮಾಡಿದ ಕೃತಕ ಗೋಡೆಯನ್ನು ಸ್ತ್ರೀಯು ದಾಟುವಂತಿಲ್ಲ. ಇಲ್ಲಿ ಸ್ತ್ರೀಯರ ಸ್ವಾಭಾವಿಕ ನಡಿಗೆಯಾಗಲೀ ಅವಳ ಅಭಿಪ್ರಾಯ, ಅನಿಸಿಕೆ, ಸ್ವಂತ ತೀರ್ಮಾನ ಆಶೋತ್ತರಗಳಿಗನುಗುಣವಾಗಿ ಬದುಕುವ ಸ್ವಾತಂತ್ರ್ಯವಾಗಲೀ ಇರುವುದಿಲ್ಲ.

ಇಸ್ಲಾಂ ಧರ್ಮವು ಬಹುಪತ್ನಿತ್ವಕ್ಕೆ ಅವಕಾಶ ನೀಡಿದೆ. ಆದರೆ ಬಹುಪತಿತ್ವಕ್ಕೆ ಅವಕಾಶವಿಲ್ಲ. ಒಬ್ಬ ಪುರುಷನಿಗೆ ಒಂದಕ್ಕಿಂತ ಹೆಚ್ಚು ಪತ್ನಿಯರ ಅವಶ್ಯಕತೆ ಇದೆ. ಮತ್ತು ಎರಡನೆಯ ವಿವಾಹವನ್ನು ಬಯಸುವುದರಲ್ಲಿ ಪ್ರಾಮಾಣಿಕನೂ ಹಾಗೂ ಮೊದಲನೆಯ ಪತ್ನಿಗೆ ನೋವುಂಟು ಮಾಡುವುದು ಅವನ ಉದ್ದೇಶವಲ್ಲವೆಂದಾದರೆ ಅವನಿಗೆ ಗರಿಷ್ಟ ನಾಲ್ಕು ಪತ್ನಿಯರನ್ನು ಹೊಂದುವ ಅನುಮತಿ ನೀಡಲಾಗಿದೆ. **"ಸ್ತ್ರೀಯರ ಪೈಕಿ ನೀವು ಮೆಚ್ಚಿದ ಇಬ್ಬರನ್ನೋ, ಮೂವರನ್ನೋ, ನಾಲ್ವರನ್ನೋ ವಿವಾಹ ಮಾಡಿಕೊಳ್ಳಿರಿ" (ಅನ್ನಿಸಾ –೪-೩)**

ಎನ್ನುತ್ತದೆ ಇಸ್ಲಾಮಿನ ಧಾರ್ಮಿಕ ಕಾನೂನು ಇದೇ ಅವಕಾಶವನ್ನು ಸ್ತ್ರೀಯರಿಗೆ ಕಲ್ಪಿಸಿಲ್ಲ. ಪುರುಷರಿಗಿರುವ ಧಾರ್ಮಿಕ ಸ್ವಾಯತ್ತತೆ, ಸ್ವೇಚ್ಚಾಚಾರಣೆ ಒಂದು ಬಗೆಯಲ್ಲಿ ಪಕ್ಷಪಾತದಿಂದ ಕೂಡಿದೆ. ಬಹುಪತ್ನಿತ್ವದ ಅಧಿಕೃತ ಅನುಮತಿಯನ್ನು ಉಳಿಸಿಕೊಳ್ಳುವುದು ಸಾಮಾಜಿಕ ಅವಶ್ಯಕತೆಗಳಲ್ಲೊಂದು. ಎಂದು ವಾದಿಸುವವರಿದ್ದಾರೆ. ವಾಸ್ತವವಾಗಿ ನೋಡಿದರೆ ಇದೊಂದು ಸ್ತ್ರೀ ವಿರೋಧಿ ನೀತಿ.

ಸ್ತ್ರೀಯರ ವಿಷಯದಲ್ಲಿ ಇಸ್ಲಾಂ ಧರ್ಮದ ಮತ್ತೊಂದು ಅನೀತಿ ಎಂದರೆ ಪತ್ನಿಯರ ದಂಡನೆಗೆ ಅವಕಾಶ ಕಲ್ಪಸಿದೆ. ಅಲ್ಲಾನು ಹೇಳುತ್ತಾನೆ. **"ನಿಮ್ಮ ಸ್ತ್ರೀಯರಿಮದ ಆಜ್ಞೋಲ್ಲಂಘನೆಯ ಶಂಕೆ ನಿಮಗಿದ್ದರೆ ಅವರಿಗೆ ಉಪದೇಶ ನೀಡಿರಿ, ಮಲಗುವಲ್ಲಿ ಅವರಿಂದ ದೂರವಿರಿ ಮತ್ತು ಅವರನ್ನು ದಂಡಿಸಿರಿ ಅನಂತರ ಅವರು ನಿಮಗೆ ವಿಧೇಯರಾಗಿ ನಡೆದರೆ ಅವರ ಮೇಲೆ ಕೈಯೆತ್ತುವ ಪ್ರಯತ್ನ ಮಾಡಬೇಡಿ (ಅನ್ನಿಸಾ:೩೪)** ಎಂದು ಹೇಳಲಾಗಿದೆ.

ಇಲ್ಲಿ ಅವಿಧೇಯ ಪತ್ನಿಗೆ ದಂಡಿಸುವ ಅನುಮತಿಯನ್ನು ಪವಿತ್ರ ಕುರಾನ್ ನೀಡಿದೆ. ಅವರನ್ನು ಯಾವ ಯಾವ ಸಂದರ್ಭದಲ್ಲಿ ದಂಡಿಸಬಹುದು ಎಂಬುದರ ಬಗ್ಗೆ ಅನುಮತಿ ನೀಡಲಾಗಿದೆ. ಪರ ಪುರುಷನಿಗೆ ಮಾತನಾಡಿಸಲು ಗಂಡನ ಅನುಮತಿ ಕೇಳಬೇಕಾಗುತ್ತದೆ. ಗಂಡನ ಮಾತಿಗೆ ತಪ್ಪಿದರೆ ಶಿಕ್ಷೆ ಕಾದಿರುತ್ತದೆ. ಇವೆಲ್ಲ ಕಾರಣಗಳಿಂದ ಮುಸ್ಲಿಂ ಸ್ತ್ರೀಯರ ಬಗ್ಗೆ ಇಸ್ಲಾಂ ಕಾನೂನು ಎಷ್ಟೊಂದು ನಿಷ್ಕರುಣಿಯಾಗಿದೆ ಎಂಬುದು ಅರ್ಥವಾಗುತ್ತದೆ. ಪುರುಷನಿಗಿಲ್ಲದ ನಿಯಮವನ್ನು ಸ್ತ್ರೀಯರಿಗೆ ಹೇರಿರುವುದು ಮಾನವೀಯವಾದುದಲ್ಲ.

ಪುರುಷನಿಗೆ ಇಸ್ಲಾಂ ಧರ್ಮ ನೀಡಿರುವ ಮತ್ತೊಂದು ಅಧಿಕಾರವೆಂದರೆ **'ತಲಾಕ್'** ನೀಡುವುದು. ಪುರುಷನು ಮೂರು ಬಾರಿ ***'ತಲಾಕ್, ತಲಾಕ್, ತಲಾಕ್'*** ಎಂದರೆ ಸಾಕು ಅವರಿಬ್ಬರ ನಡುವೆ ಇರುವ ದಾಂಪತ್ಯ ಮುಗಿದುಹೋಗುತ್ತದೆ. ಪುರುಷನು ತನ್ನ ಹಣವನ್ನು ವ್ಯಯಮಾಡಿ ದಾಂಪತ್ಯದ ಹಕ್ಕುಗಳನ್ನು ಗಳಿಸುತ್ತಾನೆ. ಅಂದರೆ ಹೆಂಡತಿಯ ಸ್ವಾಮ್ಯ ಸಾಧಿಸುತ್ತಾನೆ. ಅಂದರೆ ಪುರುಷನಿಗೆ ಹಕ್ಕುಗಳಿಂದ ಮುಕ್ತವಾಗುವ ಅವಕಾಶ ನೀಡಲಾಗಿದೆ. ಆದರೆ ಸ್ತ್ರೀಯರಿಗೆ ಯಾವುದೇ ಅಧಿಕಾರ ನೀಡಿಲ್ಲ. ಏಕೆಂದರೆ ಪತ್ನಿಗೆ ತಲಾಕ್‌ನ ಹಕ್ಕು ನೀಡಲ್ಪಟ್ಟರೆ ಪುರುಷನ ಹಕ್ಕು ಚ್ಯುತಿ ಮಾಡಲು ಆತ ಸ್ವತಂತ್ರಳಾಗುತ್ತಾಳೆ. ಆದ್ದರಿಂದ ಪುರುಷನಿಗೆ ತಲಾಕ್‌ನ ಅಧಿಕಾರ ನೀಡಿರುವುದು ಆತನ ಧರ್ಮ ಸಮ್ಮತವಾದ ಹಕ್ಕು ಎಂದು ಇಸ್ಲಾಂ ಧರ್ಮ ಹೇಳಿದೆ.

ಇಸ್ಲಾಂ ಧರ್ಮದಲ್ಲಿಯೂ ಹೆಣ್ಣು ಒಂದು ಕೊಳ್ಳುವ ಸರಕಾಗಿದ್ದಾಳೆ. ಈ ಸರಕನ್ನು ಯಾರು ಕೊಂಡುಕೊಳ್ಳುತ್ತಾರೋ ಅವರು ಸ್ವತ್ತಿನಂತೆ ಬಳಕೆ ಮಾಡಬೇಕೆಂದು ನಿರ್ದೇಶಿಸುವುದೇ ಸ್ತ್ರೀ ಮತ್ತು ಪುರುಷ ಸಮಾನತೆಯಲ್ಲ. ಸ್ತ್ರೀ ಮತ್ತು ಪುರುಷರ ವೈವಾಹಿಕ ಸಂಬಂಧದಲ್ಲಿ ವ್ಯವಸ್ಥಿತಗೊಳಿಸಲು ರಚಿಸಲಾಗಿರುವ ಕಾನೂನಿನ ಚೌಕಟ್ಟಿನಿಂದ ಸ್ತ್ರೀಯಾಗಲೀ ಪುರುಷನಾಗಲೀ ಸಮಾನ ಸೌಜನ್ಯದ ಹಕ್ಕಿದೆ ಎನ್ನು ಇಸ್ಲಾಂ ಧರ್ಮವು ತಲಾಕ್‌ನ ವಿಷಯದಲ್ಲಿ ಪುರುಷನಿಗೆ ವಿಶಿಷ್ಟತೆಯನ್ನು, ಶ್ರೇಷ್ಠತೆಯನ್ನು, ಹೇಳಿ ಹೆಂಡತಿಯಾದವಳಿಗೆ ತಲಾಕ್‌ನ ಹಕ್ಕು ನೀಡಿದರೆ ಅವಳು ಗಂಡನ ಹಕ್ಕು ಚ್ಯುತಿ ಮಾಡುತ್ತಾಳೆ. ಅಲ್ಲದೆ ಆಕೆ ಸ್ವತಂತ್ರಳಾಗುತ್ತಾಳೆ ಎಂದು ಹೇಳುವುದನ್ನು ನೋಡಿದರೆ ಸ್ತ್ರೀಯು ಸ್ವತಂತ್ರಳಾಗದೇ ಗಂಡನ ಅಧೀನದಲ್ಲಿಯೇ ತಲಾಕ್‌ನ ಭಯದಲ್ಲೇ ಜೀವನ ಕಳೆಯುವಂತೆ ಹೇಳಿದಂತಾಗುತ್ತದೆ. ಆದ್ದರಿಂದ ಇಲ್ಲಿ ಗಂಡಿಗೆ ಒಂದು ನ್ಯಾಯ ಹೆಣ್ಣಿಗೆ ಒಂದು ನ್ಯಾಯ ಎಂದಾಗುತ್ತದೆ.

ಯಾವುದೇ ಸರಿಯಾದ ಕಾರಣವಿಲ್ಲದೆ ಹೆಂಡತಿಯನ್ನು ಶಿಕ್ಷಿಸುವ ಮತ್ತು ಹಿಂಸಿಸುವ ಉದ್ದೇಶದಿಂದ ಪತ್ನಿಯ ಲೈಂಗಿಕ ಬಯಕೆಯನ್ನು ಈಡೇರಿಸಿದೇ ಇರುವುದನ್ನು **'ಈಲಾ'** ಎನ್ನುತ್ತಾರೆ. ಇದಕ್ಕೆ ಇಸ್ಲಾಮಿ ಸಮಾಜ ನಾಲ್ಕು ತಿಂಗಳ ಅವಧಿ ಗೊತ್ತುಪಡಿಸಿದೆ. ಈ ಅವಧಿಯೊಳಗೆ ಪತ್ನಿಯೊಂದಿಗೆ ರಾಜಿ ಮಾಡಿಕೊಂಡು ದಾಂಪತ್ಯ ಸಂಬಂಧವನ್ನು ಪುನಃ ಸ್ಥಾಪಿಸುವುದು ಪತಿಯ ಮೇಲೆ ಕಡ್ಡಾಯ. ಅನ್ಯತಾ ಆ ಅವಧಿ ಕಳೆದು ಹೋದ ಬಳಿಕ ಆಕೆಯನ್ನು ವಿಚ್ಛೇದನಗೊಳಿಸುವಂತೆ ಅವನನ್ನು ನಿರ್ಬಂಧಿಸಲಾಗುವುದು. ***"ತಮ್ಮ ಪತ್ನಿಯರನ್ನು ಸಮೀಪಿಸಲಾರವೆಂದು ಶಪಥಹಾಕುವವರಿಗೆ ನಾಲ್ಕು ತಿಂಗಳುಗಳ ಅವಧಿಯುಂಟು. ಅದರೊಳಗೆ ಅವರು ಮರಳಿದರೆ ನಿಶ್ಚಯವಾಗಿಯೂ ಅಲ್ಲಾಹನು ಕ್ಷಮಾಶೀಲನೂ, ಕರುಣಾ ನಿಧಿಯೂ ಆಗಿರುತ್ತಾನೆ. ಆದರೆ ಅವರು ವಿವಾಹ ವಿಚ್ಛೇದನವನ್ನೇ ತೀರ್ಮಾನಿಸಿದರೆ ಅಲ್ಲಾಹನು ಸರ್ವಶ್ರುತನೂ ಸರ್ವಜ್ಞನೂ ಆಗಿರುತ್ತಾನೆ".*** (ಅಲ್ ಬಕರ:೨೨೬-೨೨೭) ಅಂದರೆ ಇದು ಕೂಡ ಪುರುಷನ ಆಶೋತ್ತರವನ್ನೇ ಪ್ರತಿನಿಧಿಸುವಂತದ್ದು. ಅವನ ಇಚ್ಛಾನುಕ್ಕೆ ಕಾನೂನು ಇವೆ. ಇಲ್ಲಿ ಹೆಣ್ಣು ಬೊಂಬೆಯಿದ್ದಂತೆ. ತನ್ನಿಂದ ದೂರವಾದ ಗಂಡನನ್ನು ಮರಳಿ ಪಡೆಯುವ

ಸ್ಥಿತಿಯೂ ಇಲ್ಲ. ಪುರುಷ ಬೇಕಾದರೆ ತನ್ನ ಇಚ್ಛೆಯಂತೆ ತಲಾಕ್ ನೀಡಬಹುದು. ಅದು ಪತ್ನಿಗೆ ಇಷ್ಟವಿರಲಿ, ಬಿಡಲಿ. ಅವಳ ಅಭಿಪ್ರಾಯವನ್ನು ಕೇಳದೇ ತಲಾಕ್ ನಿಡುತ್ತಾರೆ. ಏಕೆಂದರೆ ಇಸ್ಲಾಂ ಧರ್ಮವು ಹೆಣ್ಣಿಗೂ ಕೂಡ ತನ್ನದೇ ಆದ ಇಚ್ಛೆ, ಆಸೆ, ಆಕಾಂಕ್ಷೆ ಇದೆ ಎಂಬುದನ್ನು ಇಸ್ಲಾಂ ಧರ್ಮವು ಮಾನ್ಯ ಮಾಡಿಲ್ಲ. ಆದರೆ ಸ್ತ್ರೀಗೆ **'ಖುಲಾ'**ದ ಹಕ್ಕು ನೀಡಿದೆ.

ಆತನಿಗೆ ಇಷ್ಟವಿಲ್ಲದೆ ಗಂಡನ ಜೊತೆ ನೆಮ್ಮದಿಯಿಂದ ಸಹಬಾಳ್ವೆ ನಡೆಸಲು ಸಾಧ್ಯವಿಲ್ಲದ ಪರಿಸ್ಥಿತಿಯಲ್ಲಿ ಪುರುಷನಿಂದ ಬೇರ್ಪಡಿಸಲು ಸ್ತ್ರೀ ಗೆ **'ಖುಲಾ'**ದ ಹಕ್ಕು ಸಹಾಯಕವಾಗಿದೆ.

ವಸ್ತ್ರವನ್ನು ಧರಿಸುವ ವಿಷಯದಲ್ಲಿ ಪುರುಷನಿಗಿಂತ ಸ್ತ್ರೀಯರ ಹೊಣೆಗಾರಿಕೆ ಅಥವಾ ಜವಬ್ದಾರಿ ಅಧಿಕವೆಂದು ಇಸ್ಲಾಂ ಧರ್ಮ ಹೇಳುತ್ತದೆ. ಸ್ತ್ರೀಯರ ದೇಹ ರಚನೆಯು ವಿಶೇಷ ಆಕರ್ಷಣೆಯಿಂದ, ಪುರುಷನಿಗಿಂತ ಎಷ್ಟೋ ವಾಸಿಯಾಗಿರುವುದರಿಂದ ಸ್ತ್ರೀ ಮತ್ತು ಪುರುಷನನ್ನು ಸೃಷ್ಟಿಸಿರುವ ಅಲ್ಲಾಹನು ಸ್ತ್ರೀಯರಲ್ಲಿ ಪುರುಷರಿಗಿಂತ ಹೆಚ್ಚಿನ ನಾಚಿಕೆಯನ್ನು ಮೈಗೂಡಿಸಿರುವನು ಎಂಬ ವಿವರಣೆ ಇದಕ್ಕಿದೆ. ಪುರುಷನ ಮನಸ್ಸಿನಲ್ಲಿ ಚಾಂಚಲ್ಯವನ್ನುಂಟುಮಾಡಬಲ್ಲ ಸ್ತ್ರೀಯರ ಅಂಗಾಂಗಳನ್ನು ಮುಚ್ಚಲೇಬೇಕೆಂದು ಇಸ್ಲಾಂ ತನ್ನ ಅನುಯಾಯಿಗಳಿಗೆ ಕಡ್ಡಾಯಗೊಳಿಸಿದೆ. ಪುರುಷರು ಮೊಣಕಾಲಿನಿಂದ ಹೊಕ್ಕುಳವರೆಗಿನ ದೇಹಭಾಗವನ್ನು ಸದಾ ಮುಚ್ಚಿರಬೇಕು. ಸ್ತ್ರೀಯರು ಮಾತ್ರ ಮುಖ ಮತ್ತು ಅಂಗೈಗಳನ್ನು ಹೊರತುಪಡಿಸಿ ತನ್ನ ಸಂಪೂರ್ಣ ದೇಹವನ್ನು ಮುಚ್ಚಿಕೊಳ್ಳಬೇಕು. ಅದನ್ನು ತನ್ನ ಗಂಡನ ಹೊರತು ಪರ ಪುರುಷರಿಗೆ ಕಾಣದಂತೆ ಮುಚ್ಚಿಕೊಂಡಿರಬೇಕು. ಈ ನಿಯಮಗಳು ಸ್ತ್ರೀಯು ಋತುಮತಿಯಾದಂದಿನಿಂದಲೂ ಆಕೆ ಲೈಗಿಂಕ ಆಕರ್ಷಣೆ ಕಳೆದುಕೊಳ್ಳುವ ಮುದಿಪ್ರಾಯ ತಲುಪುವರೆಗಿನ ತನಕ ಕಡ್ಡಾಯವಾಗಿದೆ. ಈ ನಿಯಮಾಚರಣೆಯನ್ನೇ **'ಪರ್ದಾ'** ಅಥವಾ **'ಹಿಜಾಜ್'** ಎನ್ನಲಾಗಿದೆ. ಈ ಬಗ್ಗೆ ಪವಿತ್ರ ಕುರಾನ್ ಆದೇಶ ಈ ರೀತಿ ಇದೆ.

**"ಓ ಪ್ರವಾದಿಗಳೇ ನಿಮ್ಮ ಪತ್ನಿಯರಿಗೂ ಪುತ್ರರಿಗೂ ಸತ್ಯ ವಿಶ್ವಾಸಿಗಳಾದ ಸ್ತ್ರೀಯರಿಗೂ ತಮ್ಮ ಚಾದರಗಳನ್ನು ಹೊದ್ದುಕೊಳ್ಳುವಂತೆ ಆಜ್ಞಾಪಿಸಿರಿ. ಇದು ಅವರು ಗುರುತಿಸಲ್ಪಡಲು ಮತ್ತು ಸತಾಯಿಸಲ್ಪಡಲು ಉತ್ತಮ ವಿಧಾನವಾಗಿದೆ"......** (ಪವಿತ್ರ ಕುರ್‌ಆನ್:೩೩-೫೯)

ಹೀಗೆ ಇಸ್ಲಾಂ ಸಮಾಜವು ಸ್ತ್ರೀಯರ ವಿಷಯದಲ್ಲಿ ಬೇಧವನ್ನು ಎಣಿಸುತ್ತದೆ. ಪುರುಷರಿಗೊಂದು ನೀತಿ, ಸ್ತ್ರೀಯರಿಗೊಂದು ನೀತಿ ಇದೆ. ಇಸ್ಲಾಂ ಧರ್ಮವೂ ಕೂಡ ಸ್ತ್ರೀಯರನ್ನು ಎರಡನೇ ದರ್ಜೆ ಪ್ರಜೆಯಾಗಿಯೇ ಬದುಕುತ್ತಿರುವುದನ್ನು ಕಾಣಬಹುದು. ಪುರುಷನಿಗಿರುವ ಧಾರ್ಮಿಕ, ಸಾಮಾಜಿಕ ಸ್ವಾತಂತ್ರ್ಯವನ್ನು ಸ್ತ್ರೀ ಅನುಭವಿಸುತ್ತಿಲ್ಲ. ಒಂದು ರೀತಿಯಲ್ಲಿ ಮುಸ್ಲಿಂ ಮಹಿಳೆ ಪರದಾದಲ್ಲಿ ಕೊಳೆಯುತ್ತಿದ್ದಾಳೆ.

ಮಧ್ಯಯುಗದ ವೇಳೆಗೆ ಸ್ಮೃತಿಕಾರರ ಸಾಮಾಜಿಕ ಕಾನೂನುಗಳು ರಚನೆಯಾಗಿದ್ದವು. ಅವು ಧಾರ್ಮಿಕ ಶಾಸನಗಳಾಗಿ ಎಲ್ಲರೂ ಚಾಚೂ ತಪ್ಪದೆ ಅನುಸರಿಸುತ್ತಿದ್ದರು. ಸ್ವಲ್ಪಮಟ್ಟಿಗೆ ಸ್ವಾತಂತ್ರವನ್ನು ಅನುಭವಿಸುತ್ತಿದ್ದ. ಹೆಣ್ಣು ಮಧ್ಯಯುಗದಲ್ಲಿ ಹೀನಾಯ ಸ್ಥಿತಿಗೆ ಬಂದಳು. ಆಸ್ತಿಯ ಹಕ್ಕು ಮತು ಸ್ವಾತಂತ್ರವನ್ನು ಹೆಣ್ಣಿಗೆ ನಿರಾಕರಿಸಲಾಯಿತು. ಈ ಯುಗದಲ್ಲಿ ದೇವದಾಸಿ ಪದ್ಧತಿ, ಬಾಲ್ಯವಿವಾಹ ಪದ್ಧತಿ, ಸತಿಪದ್ದತಿ, ವಿಧವಾ ವಿವಾಹ ನಿಷೇಧ ಮುಂತಾದ ಪದ್ದತಿಗಳು ಈ ಕಾಲದಲ್ಲಿ ಜಾರಿಯಲ್ಲಿದ್ದವು.

**ಬಾಲ್ಯವಿವಾಹ ಪದ್ಧತಿ :-**

ಬಾಲ್ಯವಿವಾಹ ಪದ್ದತಿ ಎಂದರೆ ಅಪ್ರಾಪ್ತ ವಯಸ್ಸಿನ ಮಕ್ಕಳನ್ನು ವಿವಾಹ ಪದ್ದತಿಯಲ್ಲಿ ತೊಡಗಿಸುವ ಕ್ರಿಯೆಯೇ ಬಾಲ್ಯವಿವಾಹ. ಈ ಪದ್ದತಿಯು ಮಧ್ಯಯುಗದಲ್ಲಿ ಅನಿವಾರ್ಯವಾಗತೊಡಗಿತು. ಏಕೆಂದರೆ ಮುಸ್ಲಿಂದಾಳಿಕೋರರು ಕನ್ಯೆಯರನ್ನು ಅಪಹರಣ ಮಾಡಿ ಶಿಲಾಹರಣಮಾಡಬಹುದೆಂಬ ಭಯದಿಂದ ತಂದೆ-ತಾಯಿಗಳು ಹೆಣ್ಣು ಮಕ್ಕಳಿಗೆ ಬಾಲ್ಯಾವಸ್ಥೆಯಲ್ಲಿಯೇ ಇದ್ದಾಗ ವಿವಾಹ ಮಾಡುವುದು ಅನಿವಾರ್ಯವಾಯಿತು. ಇದರಿಂದ ಹೆಣ್ಣುಮಕ್ಕಳು ಅನೇಕ ರೀತಿಯ ಸಮಸ್ಯೆಯನ್ನು ಎದುರಿಸಬೇಕಾಯಿತು. ಅಪ್ರಾಪ್ತವಯಸ್ಸಿನಲ್ಲಿ ಕುಟುಂಬದ ಹೊರೆ ಹೊರಬೇಕಾಯಿತು ಅನಾರೋಗ್ಯ ಕಾಡಲಾರಂಭಿಸಿತು. ಚಿಕ್ಕವಯಸ್ಸಿನಲ್ಲಿ ಗಂಡಂದಿರನ್ನು ಕಳೆದುಕೊಂಡು ಬಾಲವಿಧವೆಯಾಗಿ ಜೀವನವಿಡೀ ನರಳಬೇಕಾಯಿತು.

**ವಿಧವಾವಿವಾಹ ನಿಷೇಧ :-**

ಧರ್ಮಶಾಸ್ತ್ರಗಳು ಭಾರತೀಯ ಸಂಸ್ಕೃತಿಯು ವಿಧವೆಯ ಪುನರ್‌ವಿವಾಹದ ಮೇಲೆ ಅನೇಕ ರೀತಿಯ ನಿರ್ಬಂಧವನ್ನು ವಿಧಿಸಲಾಯಿತು. ಬಾಲ ವಿಧವೆಯಾದ ಹೆಣ್ಣುಮಕ್ಕಳು ಮತ್ತು ವಿವಾಹವಾಗುವ ಅವಕಾಶವನ್ನು ಕಳೆದುಕೋಂಡರು. ಏಕೆಂದರೆ ಅವರನ್ನು ಅಮಂಗಳಕಾರಿ ವ್ಯಕ್ತಿಗಳೆಂದು ಪರಿಗಣಿಸಿ ಅವರಿಗೆ ಧಾರ್ಮಿಕ ಕ್ರಿಯೆಗಳಲ್ಲಿ ಮತ್ತು ವೈವಾಹಿಕ ಸಮಾರಂಭಗಳಲ್ಲಿ ಭಾಗವಹಿಸುವ ಹಕ್ಕನ್ನು ನಿರಾಕರಿಸಿತ್ತು. ಆಕೆಯನ್ನು ಕೇವಲ ಮನೆಗೆಲಸಕ್ಕೆ ಮಾತ್ರ ಸೀಮಿತಗೊಳಿಸಿದ್ದರು ಈ ನಿಷೇಧದಿಂದ ವಿಧವೆಯರು ವೇಶ್ಯಾವಾಟಿಕೆಯಲ್ಲಿ ತೊಡಗಿಸಿಕೊಂಡಿದ್ದರು ಅಷ್ಟೇ ಅಲ್ಲದೆ ಆಕೆಯ ಆಕರ್ಷಣೆಯನ್ನು ತೊಡೆದು ಹಾಕಲು ಕೇಶಮುಂಡನೇ ಮಾಡಿಸಿ ಬಿಳಿಸೀರೆ ತೊಡಿಸಿ ಎಲ್ಲಾ ಆಭರಣಗಳನ್ನು ಹಾಗೂ ಸೌಂದರ್ಯವರ್ಧಕಗಳನ್ನು ನಿರಾಕರಿಸುತ್ತಿದ್ದರು.

**ಸತಿಪದ್ಧತಿ :-**

ಸತಿ ಆಚರಣೆ ಎಂದರೆ ಮರಣ ಹೊಂದಿದ ಪತಿಯ ಜೊತೆಯಲ್ಲಿ ಜೀವಂತವಾಗಿರುವ ಪತ್ನಿಯು ಸಹ ಗಂಡನ ಜೊತೆಯಲ್ಲಿ ಚಿತೆಯೆರುವುದನ್ನು ಸತಿ ಆಚರಣೆ ಎಂದು ಕರೆಯುತ್ತೇವೆ ಇದೊಂದು ಅಮಾನುಷವಾದ ಆಚರಣೆಯಾಗಿದೆ. ಇದು ಹೆಚ್ಚಾಗಿ ರಜಪೂತರಲ್ಲಿ ಕಂಡು ಬರ್ತದೆ. ಏಕೆಂದರೆ ಹಿಂದೂ ಸ್ತ್ರೀಯರು ಪತಿವ್ರತೆಯನ್ನು ಉಳಿಸಿಕೊಳ್ಳಲು ಸ್ವಂತ ಇಚ್ಚೆಯಿಂದ ಆತ್ಮ ಬಲಿದಾನ ಮಾಡಿಕೊಳ್ಳುವುದು ಅನಿವಾರ್ಯವಾಯಿತು. ಏಕೆಂದರೆ ಯುದ್ಧದಾಳಿಗಳ ಸಮಯದಲ್ಲಿ ಮುಸ್ಲಿಂ ಆಕ್ರಮಣಕಾರರಿಗೆ ಸೋತು ಶರಣಾಗಿ ಅತ್ಯಾಚ್ಯಾರಕ್ಕೆ ಒಳಗಾಗುವ ಮುಂಚೆಯೇ ಪರಿಶುದ್ದರಾಗಿ ಸಾಯುವುದು. ಸತಿಪದ್ದತಿಯಾಗಿದೆ ಇದನ್ನು **'ಜೋಗರ್'** ಪದ್ದತಿ ಎಂದು ಕರೆಯುತ್ತಾರೆ. ಈ ಯುಗದಲ್ಲಿ ಋಷಿ ಮುನಿಗಳು ಮಹಾತಪಸ್ವಿಗಳೆನಿಸಿದ್ದವರೂ ಸಹ ವಿಧವೆಯರು ದ್ವಿತೀಯ ವರಮಾನ ದೇವರನ್ನು ಸ್ವೀಕರಿಸುವುದು. ಉಚಿತವೆಂದು ಬೋಧಿಸುತ್ತಿದ್ದರು. ಗಂಡಸತ್ತ ತರುಣಿಯರನ್ನು ವಿಧವೆಯರಾಗಿ ಇರಿಸುವುದೆಂದರೆ ರಹಸ್ಯ ಗರ್ಭಪಾತಕ್ಕೆ ಅವಕಾಶಮಾಡಿದಂತೆ, ಅವರು ಮಕ್ಕಳನ್ನು ಹೆತ್ತು ಬಾಳುವುದೆಂದರೆ ವಿಧವಾ ವಿವಾಹ ಒಪ್ಪಿಕೊಂಡಂತೆ ಆಗುತ್ತದೆ ಎಂಬುದಕ್ಕಾಗಿ ಪುರೋಹಿತರು ಮತ್ತು ಸಾಮಂತರು ಒಂದು ಹೊಸ ಪದ್ದತಿಯನ್ನು ಕಂಡುಕೊಂಡರು. ಅದೆಂದರೆ ವಿಧವೆಯರನ್ನು ಜೀವಂತವಾಗಿಯೇ ಸುಡುತ್ತಿದ್ದರು. ಈ ರೀತಿ ಅಬಲೆಯನ್ನು ಜೀವಂತವಾಗಿ ಸುಡುವುದು ಪಾಪವಲ್ಲ ಎಂದು ತೀರ್ಮಾನಿಸಿದರು. ಧರ್ಮ ಹೆಸರಿನಲ್ಲಿ ವಿಧವೆಯರನ್ನು ಬೆಂಕಿಗೆ ತಳ್ಳಿ ಬೂದಿ ಮಾಡುತ್ತಿದ್ದರು. ಸ್ತ್ರೀಹತ್ಯೆ ಸ್ತ್ರೀಯರ ಆತ್ಮಹತ್ಯೆಗಳೇ ಧರ್ಮ ಎನಿಸಿದ್ದವು.

**ದೇವದಾಸಿ ಪದ್ಧತಿ :-**

ದೇವದಾಸಿ ಪದ್ದತಿ ಎಂದರೆ ಧರ್ಮದ ಹೆಸರಿನಲ್ಲಿ ಸ್ತ್ರೀಯರನ್ನು ಸಂಗೀತ, ನೃತ್ಯಗಾರ್ತಿ ದೇವಸ್ಥಾನದ ಸೇವಕಿಯರಾಗಿ ಮುಡುಪಿಡುವ ಪದ್ದತಿಯಾಗಿದೆ. ದೇವರ ಸೇವೆಗೆಂದು ಆರಂಭದಲ್ಲಿ ದೈವಭಕ್ತಿಯಿಂದ ಕೂಡಿದ್ದರೂ ಸಹ ದೇವಸ್ಥಾನದ ಯಾತ್ರೆಗಾಗಿ ಬರುವ ಶ್ರೀಮಂತಯಾತ್ರಿಗಳು ಲೈಂಗಿಕ ಬಯಕೆಯನ್ನು ಈಡೇರಿಸಿಕೊಳ್ಳಲು ದೇವದಾಸಿಗಳನ್ನು ಬಳಸಿಕೊಳ್ಳುತ್ತಿದ್ದರು. ದೇವದಾಸಿಯರಿಗೆ ಹುಟ್ಟಿದ ಹೆಣ್ಣು ಮಕ್ಕಳು ಮತ್ತು ಹರಕೆ ಹೊತ್ತವರು ತಮಗೆ ಹೆಣ್ಣು ಮಗು ಹುಟ್ಟಿದಾಗ ಆಕೆಯನ್ನು ದೇವಸ್ಥಾನಗಳಿಗೆ **"ಬಸವಿ"** ಬಿಡುವುದು ಅನಿವಾರ್ಯವಾಯಿತು ಇದರಿಂದ ಸ್ತ್ರೀಯರು ಅನೇಕ ರೀತಿಯ ಸಮಸ್ಯೆಗಳನ್ನು ಎದುರಿಸಬೇಕಾಯಿತು.

ಈ ಪದ್ದತಿಗಳೆಲ್ಲಾ ಮಧ್ಯಯುಗದಲ್ಲಿ ಆಚರಣೆಯಲ್ಲಿದ್ದು ಸ್ತ್ರೀಯರನ್ನು ಎರಡನೇಯ ದರ್ಜೆಯ ಪ್ರಜೆ ಎಂದು ತಮ್ಮ ಮನಬಂದಂತೆ ಬಳಸಿಕೊಂಡು ದೌರ್ಜನ್ಯವೆಸಗುತ್ತಿದ್ದರು ಮಧ್ಯಯುಗದಲ್ಲಿ

ಮತ್ತೊಂದು ಸಾಮಾಜಿಕ ದೌಷ್ಟ್ಯವೆಂದರೆ ಹೆಣ್ಣನ್ನು ರಾಜರುಗಳು ತಮ್ಮ ಭೋಗದ ಬೆಲೆವೆಣ್ಣುಗಳು ಎಂದು ಭಾವಿಸಿಕೊಂಡು ತಮ್ಮ ಕಾಮಪ್ರಚೋದನೆಯ ಆಟಿಕೆಗಳಾಗಿ ಅವರನ್ನು ನಡೆಸುತ್ತಿದ್ದರು.

ಮಧ್ಯಯುಗದಲ್ಲಿ ಸ್ತ್ರೀಯರಿಗೆ ಪುರುಷಾವಲಂಬನೆ ಅನಿವಾರ್ಯವಾಯಿತು. ಏಕೆಂದರೆ ಈ ಕಾಲದಲ್ಲಿ ಯುದ್ಧ ಹೋರಾಟಗಳು, ದಾಳಿಗಳು ಆ ಕಾಲದಲ್ಲಿ ಹೆಚ್ಚಾಗಿದ್ದರಿಂದ ಶತ್ರುವಿನ ಕೈಯಲ್ಲಿ ಸಿಲುಕಿ ಮಾನಭಂಗಕ್ಕೆ ಒಳಗಾಗಿ ಅವರ ಭೋಗಕ್ಕೆ ಬಲಿಯಾಗುವುದರ ಬದಲು ಇದಕ್ಕೆಲ್ಲಾ ಆತ್ಮಹತ್ಯೆ ಸೂಕ್ತವಾದ ದಾರಿಯೆಂದು ಪರದಾಡುವ ಸ್ಥಿತಿ ಒದಗಿತು. ತರುಣ ವಯಸ್ಸಿನ ಸ್ತ್ರೀಯರು ನಗರದ ರಸ್ತೆಗಳಲ್ಲಿ ವ್ಯಾಪಾರ ಕೇಂದ್ರಗಳಲ್ಲಿ ಸುತ್ತಾಡುವುದನ್ನು, ಕಂಡಾಗ ಹಾಗೇ ಅವಳು ಸುತ್ತಾಡುತ್ತಿರುವಾಗ ತಲೆಯ ಮೇಲೆ ಮುಸುಕು ಹಾಕಿಕೊಂಡು ಮುಚ್ಚಿಕೊಳ್ಳದಿದ್ದ ಪಕ್ಷದಲ್ಲಿ ಅವಳು ಸೂಳೆಯರ ಬೀದಿಗೆ ಹೋಗಿ ಅಲ್ಲಿಯೇ ಇದ್ದಕೊಂಡು ಅದೇ ವೃತ್ತಿಯನ್ನು ಸ್ವೀಕರಿಸತ್ಕದ್ದು ಎಂಬಂಥ ಆಜ್ಞೆಗಳು ರಾಜರಿಮದ ಜಾರಿಯಾದವು.

ಮಧ್ಯಯುಗದ ಜನರ ಮತ್ತೊಂದು ನಂಬಿಕೆಯೆಂದರೆ ಹೆಣ್ಣು ಮಗು ಜನಿಸಿದರೆ ಅಶುಭ ಎಂದು ಭಾವಿಸಿಕೊಂಡಿದ್ದರು. ನಮಗೆ ಹೆಣ್ಣು ಶಿಶು ಹುಟ್ಟಿದ ದಿನ ಒಂದು ಶಾಪದ ದಿನ ಎಂದು ರಜಪೂತ ಪುರುಷರು ಹೇಳುತ್ತಿದ್ದರು. ಹೆಂಡತಿಯಾದವಳು ಅವಳ ಕರ್ಮದಿಂದ ಒಂದರ ಮೇಲೆ ಒಂದರಂತೆ ಹೆಣ್ಣು ಮಕ್ಕಳಿಗೆ ಜನ್ಮ ನೀಡಿದರೆ ಅವಳನ್ನು ನಿಂದಿಸಲಾಗುತ್ತಿತ್ತು. ಹೆಣ್ಣು ಶಿಶುವಿಗೆ ಜನ್ಮ ನೀಡುತ್ತಾಳೆ ಎಂಬ ಒಂದೇ ಒಂದು ಕಾರಣದಿಂದಲೇ ಅವಳಿಗೆ ವಿಚ್ಛೇದನ ನೀಡಲಾಗುತ್ತಿತ್ತು. ಗಂಡು ಮಗು ಜನಿಸಿದರೆ ಶುಭವೆಂದು ರಾಜನ ಆಶ್ರಯಗಳಲ್ಲಿ ಮಾತ್ರವಲ್ಲದೆ ಸಾಮಾನ್ಯ ಬುಡಕಟ್ಟುಗಳಲ್ಲಿ ಹರ್ಷೋಲ್ಲಾಸ ಸಂತೋಷದಿಂದ ಹಬ್ಬವನ್ನು ಆಚರಿಸುವ ಪದ್ಧತಿಯಿತ್ತು. ಮಧ್ಯಯುಗದಲ್ಲಿ ಆಚರಣೆಯಲ್ಲಿದ್ದ ಮತ್ತೊಂದು ನಿಯಮವೆಂದರೆ ಹೆಣ್ಣು ಮಕ್ಕಳು ತಂದೆ-ತಾಯಿ ಹೇಳಿದಂತೆ ಕೇಳಿಕೊಂಡು ಅವರ ಮೇಲ್ವಿಚಾರಣೆ ಹತೋಟಿ ಮತ್ತು ನಿರ್ದೇಶನದಂತೆ ಇರಬೇಕಾಗಿತ್ತು. ಹೆಣ್ಣು ಮಕ್ಕಳ ಒಪ್ಪಿಗೆಯನ್ನ ಪಡೆಯದೆ ತಂದೆ-ತಾಯಿಯರೇ ಮದುವೆಗಳನ್ನು ಮಾಡುತ್ತಿದ್ದರು. ಹೆಣ್ಣು ಮಕ್ಕಳು ತಮಗೆ ಒಪ್ಪಿಗೆ ಇರಲಿ ಇರದಿರಲಿ ತಂದೆ-ತಾಯಿ ತೋರಿಸಿದ ಹುಡುಗನನ್ನೇ ಮದುವೆಯಾಗಬೇಕಿತ್ತು. ಇಲ್ಲಿ ಅವಳ ಆಯ್ಕೆಗೆ ಅವಕಾಶವಿರಲಿಲ್ಲ. ಮಧ್ಯಯುಗದಲ್ಲಿ ಹೆಣ್ಣಿನ ಸ್ಥಿತಿ ಎಷ್ಟು ಆತಂಕಕಾರಿಯಾಗಿತ್ತೆಂದರೆ ಕನ್ಯೆ ಇರುವ ಮನೆ ಬಾಗಿಲನ್ನು ಒಡೆದು ಆಕೆಯ ಬಂಧುಗಳನ್ನು ಕೊಂಡು ಬಲತ್ಕಾರದಿಂದ ಕನ್ಯೆಯನ್ನು ಅಪಹರಿಸಿಕೊಂಡು ಹೋಗಿ ವಿವಾಹಗಳಾಗಿರುವ ನಿದರ್ಶನಗಳು ಇವೆ. ಮಧ್ಯಯುಗದಲ್ಲಿನ ರಾಜರಿಂದ ಹಿಡಿದು ಸಾಮಾನ್ಯ ಪುರುಷನವರೆಗೂ ಹೆಣ್ಣಿನೊಡನೆ ಬೆರೆಯುವ ಸುಖವನ್ನು ಬಿಟ್ಟರೆ ಬೇರೊಂದು ಸುಖ ಸಂತೋಷ ಗೊತ್ತಿಲ್ಲದಂತೆ ವರ್ತಿಸುತ್ತಿದ್ದರು. ಮಧ್ಯಯುಗದಲ್ಲಿ ಪರದಾಪದ್ಧತಿ ಮತ್ತು ವೇಶ್ಯಾವಾಟಿಕೆಗೆ ಹೆಚ್ಚಿನ ಪ್ರೋತ್ಸಾಹ ದೊರೆಯಿತು.

ಹೀಗೆ ಮಧ್ಯಯುಗದಲ್ಲಿ ಪಾಶ್ಚಾತ್ಯರಲ್ಲಿಯೂ ಸ್ತ್ರೀಯರ ಸ್ಥಿತಿಗತಿಗಳು ಆತಂಕಕಾರಿಯಾಗಿದ್ದವು. ಸಾಮಾಜಿಕ ಕಟ್ಟಲೆಗಳು ಬಲವಾಗಿದ್ದವು. ಚಕ್ರವರ್ತಿಯಿಂದ ಹಿಡಿದು ಸಾಮಾನ್ಯನರವರೆಗೂ ಪುರುಷ ಪ್ರಾಬಲ್ಯ ಪ್ರಧಾನವಾಗಿತ್ತು. ಸ್ತ್ರೀಸ್ವಾತಂತ್ರ್ಯದ ಅಗತ್ಯವನ್ನರಿತು ಅವರ ಜೀವನ ಕ್ರಮದ ಸುಧಾರಣೆಗೆ ಪ್ರಯತ್ನಿಸಿದವರು ತುಂಬ ಕಡಿಮೆ ಧಾರ್ಮಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯ ಸ್ತ್ರೀಯರನ್ನು ಕಡೆಗಣಿಸಿದ್ದು ಮಧ್ಯಯುಗದ ಸಾಧನೆ ಎಂದರೆ ಆಶ್ಚರ್ಯವಾಗದೇ ಇರದು.

ಅಧ್ಯಾಯ – ೬

# ಆಧುನಿಕ ಯುಗದಲ್ಲಿ ಮಹಿಳಾ ಪರ ಚಿಂತನೆಗಳು

## ಪುನರುಜ್ಜೀವನ ಕಾಲದಲ್ಲಿ ಹೆಣ್ಣು

ಪ್ರಾನ್ಸಿನ ಮಹಾಕ್ರಾಂತಿಯು ಮನುಕುಲಕ್ಕೆ ನೀಡಿದ ಮಹತ್ವದ ಕೊಡುಗೆ ಎಂದರೆ ಸ್ವಾತಂತ್ರ್ಯ ಸಮಾನತೆ ಮತ್ತು ಸೋದರತೆ, ಸಮಾಜದ ಮುಖ್ಯಧಾರೆಯಲ್ಲಿ ಆವರೆಗೆ ಹೊರಗಿದ್ದ ಜನಸಮುದಾಯದ ಭಾಗವಹಿಸುವಿಕೆ, ಪಾಲುಗಾರಿಕೆ, ಪರ್ಯಾಯ ಚಿಂತನೆಗಳು ಮಾನವ ಅಭಿವೃದ್ಧಿಯನ್ನು ಗುರಿಯಾಗಿಟ್ಟುಕೊಂಡವು. ಈ ಹಾದಿಯಲ್ಲಿಯೇ ಜನಸಂಖ್ಯೆಯ ಅರ್ಧದಷ್ಟಿರುವ ಮಹಿಳೆಯರನ್ನೂ ಮುಖ್ಯಧಾರೆಗೆ ಬರುವಂತೆ ಬಲಗೊಳಿಸಿಕೊಳ್ಳುವ ಅನಿವಾರ್ಯತೆ ಉಂಟಾಯಿತು. ತತ್ಪರಿಣಾಮವಾಗಿ **'೨೦೦೧ ಮಹಿಳಾ ಸಬಲೀಕರಣ ವರ್ಷ'** ಎಂದು ಘೋಷಿಸಲಾಯಿತು.

ದೇಶದ ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಮಹಿಳೆಯರ ಪ್ರತಿಭೆಯನ್ನು ಉಪಯೋಗಿಸಿಕೊಳ್ಳುವುದು ಆಧುನಿಕ ಆಭಿವೃದ್ಧಿಯ ಸಿದ್ಧಾಂತ. ಹೀಗಾಗಿ ಮಹಿಳೆ ಮತ್ತು ಪುರುಷ ಪಾತ್ರಗಳ ನಡುವಿನ ಪರಸ್ಪರ ಸಂಬಂಧ ವಿಚಾರಗಳೊಂದಿಗೆ ವಿಶ್ಲೇಷಿಸುವ ಚಿಂತನೆ ಪ್ರಾರಂಭವಾಯಿತು. ಪುರುಷ ಮತ್ತು ಸ್ತ್ರೀಗಿರುವ ಒಂದು ಪ್ರಮುಖವಾದ ವ್ಯತ್ಯಾಸವೆಂದರೆ ಸ್ತ್ರೀ ಜೀವಕ್ಕೆ ಜನ್ಮ ಕೊಡುತ್ತಾಳೆ. ಇದು ಪುರುಷನಿಗೆ ಸಾಧ್ಯವಾಗದ ಪಾತ್ರ ನಿರ್ವಹಣೆ.

ಹೆಣ್ಣು ಮಕ್ಕಳು ಪ್ರೌಢಾವಸ್ಥೆಗೆ ಬಂದ ನಂತರ ಅವಳ ಮೇಲೆ ನಿರ್ಬಂಧ ಹೇರುತ್ತಾರೆ. ಅದೇ ಗಂಡು ಮಕ್ಕಳಿಗೆ ಸ್ವಾತಂತ್ರ ನೀಡುತ್ತಾರೆ. ಇದರಿಂದಾಗಿ ಹೆಣ್ಣು ಮಕ್ಕಳ ಅವಕಾಶಗಳು ಕಡಿಮೆಯಾಗುತ್ತವೆ. ಇಷ್ಟಾದರೂ ಯಾವುದೇ ಪರೀಕ್ಷಾ ಫಲಿತಾಂಶ ಬಂದಾಗ ಈ ಎಲ್ಲಾ ಒತ್ತಡಗಳ ನಡುವೆಯೂ ಅವರು ಮೇಲುಗೈ ಸಾಧಿಸಿರುತ್ತಾರೆ.

ಹುಟ್ಟುವ ಮಕ್ಕಳಲ್ಲಿ ಪ್ರಾಥಮಿಕ ಶಾಲೆಯ ಒಂದನೇ ತರಗತಿಗೆ ಗಂಡು ಮಕ್ಕಳು ನೂರಕ್ಕೆ ನೂರು ದಾಖಲಾದರೆ ಹೆಣ್ಣು ಮಕ್ಕಳಲ್ಲಿ ಶೇ.೭೮% ಎಂದು ಲೆಕ್ಕಚಾರ ಮಾಡಿದ್ದಾರೆ. ಅವರಲ್ಲಿ ಏಳು ವರ್ಷದ ಪ್ರಾಥಮಿಕ ಶಿಕ್ಷಣವನ್ನು ಪೂರ್ಣಗೊಳಿಸುವವರು ಕೇವಲ ೩೫ರಷ್ಟು ಅವರಲ್ಲಿ ಪ್ರೌಢಶಿಕ್ಷಣ ಪೂರ್ಣಗೊಳಿಸಿದವರು ಶೇ.೧೫%ರಷ್ಟು ಮಾತ್ರ. ಪದವಿ ಮುಂತಾದ ಉನ್ನತ ವ್ಯಾಸಂಗಕ್ಕೆ ತೆರಳುವವರು ಒಟ್ಟು ಹೆಣ್ಣು ಮಕ್ಕಳಲ್ಲಿ ಶೇ. ೫ ರಿಂದ ೬ ಎಂದು ಮಹಿಳಾ ಅಭಿವೃದ್ಧಿ ಆಯೋಗ ಅಂದಾಜು ಮಾಡಿದೆ. ಪ್ರತಿಯೊಬ್ಬ ಹೆಣ್ಣು ಮಕ್ಕಳಿಗೂ ಶಿಕ್ಷಣ ದೊರೆಯುವಂತಾಗಬೇಕು. ಪೋಷಕರು ಗಂಡು ಮಕ್ಕಳಷ್ಟು ಹೆಣ್ಣು ಮಕ್ಕಳಿಗೂ ಪ್ರೋತ್ಸಾಹ ನೀಡಬೇಕು.

ಸಮಾನತೆ ಮತ್ತು ಸಂಕುಲತೆಗಳನ್ನು ಶಿಕ್ಷಣದ ಮೂಲಕ ಸಾಧಿಸಬೇಕು. ಶಿಕ್ಷಣಕ್ಕೆ ಬದಲಾವಣೆ ತರುವ ಶಕ್ತಿಯಿದೆ. ಮಹಿಳೆಯರು ಸಮಾಜದ ಎಲ್ಲಾ ಪ್ರಕ್ರಿಯೆಗಳಲ್ಲಿ ಕ್ರಿಯಾತ್ಮಕವಾಗಿ ಭಾಗವಹಿಸಿ ತನ್ನ

ಪ್ರಗತಿಯ ಬಗ್ಗೆ ಚಿಂತಿಸಿ ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಸ್ವಾವಲಂಬನೆ ಸಾಧಿಸುವುದು. ತಮ್ಮ ವಿದ್ಯಾಭ್ಯಾಸ, ಉದ್ಯೋಗ, ವಿವಾಹ ನಿರ್ಧಾರಗಳನ್ನು ತೆಗೆದುಕೊಳ್ಳುವ ಗುಣಗಳನ್ನು ಬೆಳಸಿಕೊಳ್ಳಬೇಕು. ಪುರುಷನಿಗೆ ಸಮಾನಳಾಗಿ ಮಹಿಳೆಯೂ ಗುಣಾತ್ಮಕ ವರ್ತನಾ ಸಂಪತ್ತನ್ನು ತೋರಗೊಡುತ್ತಿದ್ದಾಳೆ. ಮಹಿಳಾ ಸಬಲೀಕರಣದ ಹಾದಿಯಲ್ಲಿ ಇದು ಮಹತ್ವದ ಹೆಜ್ಜೆಯಾಗಿದೆ. ಸ್ತ್ರೀಯರ ಸಬಲೀಕರಣದ ಪ್ರಕ್ರಿಯೆಯಲ್ಲಿ ಪುರುಷರ ಸಹಭಾಗಿತ್ವವೂ ಮುಖ್ಯವಾದದ್ದು. ಈ ದಿಕ್ಕಿನಲ್ಲಿ ಪುರುಷರ ಮನೋಭಾವನೆಗಳನ್ನು ಒಗ್ಗಿಸುವ ಕೆಲಸ ಆಗಬೇಕಾಗಿದೆ.

ಮಹಿಳಾ ಸ್ವಸಹಾಯ ಗುಂಪುಗಳು ಜನರಲ್ಲಿ ಮಹತ್ವದ ಪರಿಣಾಮವನ್ನುಂಟು ಮಾಡುತ್ತಿವೆ. ಹತ್ತಾರು ಹೆಂಗಸರು ಒಂದೆಡೆ ಸೇರುವುದು ತಾವು ಗಳಿಸಿದ್ದರಲ್ಲಿ ಕನಿಷ್ಠ ಪ್ರಮಾಣದಲ್ಲಿಯಾದರೂ ಉಳಿತಾಯದಲ್ಲಿ ತೊಡಗಿಸುವುದು. ಅದಕ್ಕೆ ಸರ್ಕಾರವೂ ಧನಸಹಾಯ ನೀಡುವುದು. ಆ ಮೂಲಕ ಸ್ತ್ರೀಯರ ಆರ್ಥಿಕ ಸಬಲೀಕರಣಕ್ಕೆ ನೆರವಾಗುವುದು. ಈಗ ಹೆಚ್ಚು ಬಿರುಸಿನಿಂದ ನಡೆಯುತ್ತಿದೆ. ಸ್ತ್ರೀ-ಪುರುಷರಿಬ್ಬರೂ ಪರಿವರ್ತನಾಶೀಲ ಮನಸ್ಸಿನಿಂದ ತೊಡಗಿಕೊಳ್ಳಬೇಕಾಗಿದೆ. ಈ ಹಿನ್ನೆಲೆಯಲ್ಲಿ ಸ್ತ್ರೀಪರ ಚಿಂತನೆ, ಸಂಘಟನೆ ಮತ್ತು ಆಂದೋಲನಗಳಲ್ಲಿ ಸ್ತ್ರೀಯರಷ್ಟೇ ಪ್ರಮಾಣದಲ್ಲಿ ಪುರುಷರು ಪಾಲ್ಗೊಳ್ಳಬೇಕು. ಸ್ತ್ರೀ ಪುರುಷರೆಂಬ ಭೇದವಿಲ್ಲದೆ ಒಟ್ಟು ಮಾನವ ಸಂಪನ್ಮೂಲನದ ಅಭಿವೃದ್ಧಿಯ ಕೆಲಸವೆಂದು ಭಾವಿಸಿ ಒಟ್ಟಾರೆಯಾಗಿ ಶ್ರಮಿಸಬೇಕಾಗಿದೆ. ಮಹಿಳಾ ಸಬಲೀಕರಣದಲ್ಲಿ ರಾಜಕೀಯ ಪಾಲುಗಾರಿಕೆ ಅವಶ್ಯಕವಾದ ಅಂಶ. ೧೯೯೨ರಲ್ಲಿಯೇ ಕೇಂದ್ರ ಸರ್ಕಾರ ಸ್ಥಳೀಯ ಸಂಸ್ಥೆಗಳಲ್ಲಿ ಶೇ.೩೩%ರಷ್ಟನ್ನು ಮಹಿಳೆಯರಿಗೆ ಮೀಸಲಿಡಬೇಕೆಂದು ನಿಯಮ ರೂಪಿಸಿತು. ಈ ಮೀಸಲಾತಿ ಪಶ್ಚಿಮ ಬಂಗಾಳ, ಕರ್ನಾಟಕ, ಆಂಧ್ರಪ್ರದೇಶ ಮುಂತಾದ ರಾಜ್ಯಗಳಲ್ಲಿ ಯಶಸ್ವಿಯಾಗಿ ಜಾರಿಯಾಯಿತು.

ಈ ಎಲ್ಲದರ ಪರಿಣಾಮವಾಗಿ ೨೦ನೇ ಶತಮಾನದ ಆರಂಭದ ವೇಳೆಗೆ ಹೆಣ್ಣು ವಿದ್ಯಾವಂತೆಯಾಗಿ, ಸಂಶೋಧಕಿಯಾಗಿ, ಗಗನಯಾತ್ರಿಯಾಗಿ, ವೈದ್ಯೆಯಾಗಿ, ಪರ್ವತಾರೋಹಿಯಾಗಿ, ವಿಮಾನ ಚಾಲಕಿಯಾಗಿ, ಸೈನಿಕಳಾಗಿ, ಶಿಕ್ಷಕಿಯಾಗಿ, ಮಾತ್ರವಲ್ಲ ಎಲ್ಲೆಲ್ಲಿ ಪುರುಷನ ಆಧಿಪತ್ಯ ಮಾತ್ರವೇ ಇತ್ತೋ ಅಲ್ಲೆಲ್ಲಾ ಸ್ತ್ರೀಯರು ಪ್ರವೇಶಿಸಿದರು. ಅಷ್ಟೇ ಅಲ್ಲ, ಚಳುವಳಿಗಳಲ್ಲಿಯೂ ಧುಮಿಕಿದರು. ಎಲ್ಲಾ ಬಗೆಯ ಅಸಮಾನತೆಯ ವಿರುದ್ಧದ ಹೋರಾಟಗಳಲ್ಲಿ ತಮ್ಮ ಪ್ರವೇಶದ ಅನಿವಾರ್ಯತೆಯನ್ನು ಮನಗಂಡರು. ಈ ಸ್ತ್ರೀಯರಿಗೆಂದೇ ಮೀಸಲಾದ ಕ್ಷೇತ್ರಗಳಲಿಲ್ಲ. ಎಲ್ಲಾ ಕ್ಷೇತ್ರಗಳಲ್ಲೂ ಸ್ತ್ರೀಯರಿಗೆ ಪ್ರವೇಶ ಕೊಡಿ, ಮೀಸಲಿಡಿ ಎಂದು ಕೇಳುವ ಸ್ಥಿತಿ ನಿರ್ಮಾಣವಾಗಿದೆ. ಇದರಿಂದಾಗಿ ಸ್ತ್ರೀಯರ ಸಾಮಾಜಿಕ ಬದಲಾವಣೆಗೆ ಅವಕಾಶವಾಯಿತು.

೧೯ನೇ ಶತಮಾನದ ವೇಳೆಗೆ ಸ್ತ್ರೀಯರ ಸ್ಥಾನಮಾನದಲ್ಲಿ ಗಣನೀಯವಾದ ಪರಿವರ್ತನೆ ಆರಂಭವಾಯಿತು. ಈ ಪರಿವರ್ತನೆಗೆ ತಾಂತ್ರಿಕ, ಸಾಮಾಜಿಕ ಮತ್ತು ಆರ್ಥಿಕ ಕಾರಣಗಳು

ಕಾರಣವೆನಿಸಿದರೂ ಬ್ರಿಟಿಷರ ಆಳ್ವಿಕೆಯೂ ಒಂದು ಪ್ರಧಾನ ಕಾರಣವಾಯಿತು. ಸ್ತ್ರೀಯರಿಗೆ ಶಿಕ್ಷಣ ನೀಡುವುದು ಭವಿಷ್ಯವನ್ನು ರೂಪಿಸಿಕೊಳ್ಳಲು ನೆರವಾಗುತ್ತದೆ ಎಂಬುದನ್ನು ಮನಗಂಡು ಶಿಕ್ಷಣಕ್ಕೆ ಅವಕಾಶ ಕಲ್ಪಿಸಲಾಯಿತು. ಸ್ತ್ರೀಯರು ಶಿಕ್ಷಣ ಪಡೆದು ಉದ್ಯೋಗಿಗಳಾದರು.

ಸ್ತ್ರೀಯು ಪುರುಷನಿಗೆ ಸರಿಸಮನಾಗಿ ದುಡಿದು ತನ್ನ ಕೌಟುಂಬಿಕ ಜವಾಬ್ದಾರಿಯ ಪರಿಶ್ರಮವನ್ನು ಏಕಕಾಲಕ್ಕೆ ನಿರ್ವಹಿಸಿ ಯಶಸ್ವಿಯಾದಳು. ಇದರಿಂದಾಗಿ ಆರ್ಥಿಕ ಶಕ್ತಿ ಬಲಗೊಂಡು ಆರೋಗ್ಯಕರವಾಗಿ ಬದುಕಲು ಬೇಕಾದ ಪೋಷಕಾಂಶಗಳ ಕೊರತೆಯನ್ನು ನೀಗಿಸಲಾಯಿತು. ಯಾರ ಅಡಿದಾವರೆಯಲ್ಲಿಯೂ ಮುಡಿಯಿಟ್ಟು, ಜೀವನವೆಲ್ಲಾ ಕರಗುವುದು ಬೇಡ, ನಮ್ಮ ಭಾವನೆಯಂತೆ ನಾವು ಬದುಕಿ ತೋರಿಸೋಣ ಎಂಬ ಛಲವನ್ನು ಹೆಣ್ಣಿನಲ್ಲಿ ಉಂಟುಮಾಡಿದ್ದು ೧೮ ಮತ್ತು ೧೯ನೇ ಶತಮಾನದ ದೊಡ್ಡ ಸಾಧನೆ.

ಈ ಎಲ್ಲದರ ಪರಿಣಾಮದಿಂದಾಗಿ ೨೦ನೇ ಶತಮಾನದ ಆರಂಭದ ವೇಳೆಗೆ ಹೆಣ್ಣು ವಿದ್ಯಾವಂತೆಯಾಗಿ, ಸಂಶೋಧಕಿಯಾಗಿ, ಗಗನಯಾತ್ರಿಯಾಗಿ, ವೈದ್ಯೆಯಾಗಿ, ಪರ್ವತಾರೋಹಿಯಾಗಿ, ವಿಮಾನ ಚಾಲಕಿಯಾಗಿ, ಸೈನಿಕಳಾಗಿ, ಶಿಕ್ಷಕಿಯಾಗಿ, ಮಾತ್ರವಲ್ಲ ಎಲ್ಲೆಲ್ಲಿ ಪುರುಷನ ಆಧಿಪತ್ಯ ಮಾತ್ರವೇ ಇತ್ತೋ ಅಲ್ಲೆಲ್ಲಾ ಸ್ತ್ರೀಯರು ಪ್ರವೇಶಿಸಿದ್ದಾರೆ. ಅಷ್ಟೇ ಅಲ್ಲದೆ ಚಳುವಳಿಗಳಲ್ಲಿಯೂ ಧುಮುಕಿದ್ದಾರೆ. ಅಲ್ಲದೆ ಸ್ತ್ರೀಯರು ಉನ್ನತ ವ್ಯಾಸಂಗವನ್ನು ಪಡೆದುಕೊಳ್ಳುತ್ತಿದ್ದಾರೆ.

## ಸ್ತ್ರೀ ವಿಮೋಚನೆಯ ಪುರುಷ ರಾಜಾರಾಮ್ ಮೋಹನ್ ರಾಯ್

ಹತ್ತೊಂಬತ್ತನೆಯ ಶತಮಾನದ ಭಾರತೀಯ ಮಹಿಳೆ ತನ್ನ ಪತಿಯು ಸತ್ತರೆ, ಸತ್ತವನ ಚಿತೆಯ ಪ್ರಜ್ವಲಿಸುವ ಜ್ವಾಲೆಯಲ್ಲಿ ತಾನೂ ಧುಮುಕಿ ಆತ್ಮಾರ್ಪಣೆ ಮಾಡಿಕೊಳ್ಳಬೇಕಾಗಿತ್ತು. ಇದನ್ನ ಸತಿಸಹಗಮನ ಪದ್ಧತಿ ಎಂದು ಕರೆಯುತ್ತೇವೆ. ಬಾಲ್ಯವಿವಾಹ, ಸತಿಸಹಗಮನ ಪದ್ಧತಿಗಳು ಆಚರಣೆಯಲ್ಲಿದ್ದಾಗ ಇವುಗಳನ್ನು ತೊಡೆದು ಹಾಕಲು ಮತ್ತು ಹೆಣ್ಣಿನ ಮೇಲೆ ನಡೆಸುತ್ತಿದ್ದ ದೌರ್ಜನ್ಯವನ್ನು ತೊಡೆದು ಹಾಕಲು ರಾಜಾರಾಂ ಮೋಹನ್‌ರಾಯರು ಬ್ರಹ್ಮ ಸಮಾಜವನ್ನು ಸ್ಥಾಪಿಸಿ ಸಮಾಜದಲ್ಲಿ ರೂಢಿಯಲ್ಲಿದ್ದ ಸತಿಸಹಗಮನ ಪದ್ಧತಿ ಮತ್ತು ಬಾಲ್ಯವಿವಾಹವನ್ನು ತೊಡೆದು ಹಾಕಿದರು. ರಾಜಾರಾಮ್ ಮೋಹನ್‌ರಾಯರ ಚಾರಿತ್ರಿಕ ಸಾಧನೆಯಿಂದ ಸ್ತ್ರೀಯರಿಗೆ ವಿಮೋಚನೆಯ ಹಾದಿಗಳು ಗೋಚರಿಸಿದವು. ಅವರ ಹೋರಾಟದ ಫಲವಾಗಿ ಶತ-ಶತಮಾನಗಳಿಂದಲೂ ಸ್ತ್ರೀಯರಿಗಾಗುತ್ತಿದ್ದ ಅನ್ಯಾಯ ತಪ್ಪಿಸಿದರು. ಬಾಲ್ಯವಿವಾಹ ಕಡಿಮೆಯಾಗಿ, ವಿಧವಾವಿವಾಹಕ್ಕೆ ಪ್ರೋತ್ಸಾಹ ದೊರೆಯಿತು. ತಾವು ಹೊಂದಿದಂತಹ ಸ್ತ್ರೀ ವಿಮೋಚನೆಯ ಪರಮಗುರಿಯನ್ನು ಕೊನೆಗೂ ರಾಜಾರಾಮರು ಸಾಧಿಸಿದರು. ಆದ್ದರಿಂದಲೇ ರಾಜಾರಾಮ್ ಮೋಹನ್‌ರಾಯರನ್ನು ಸ್ತ್ರೀ ವಿಮೋಚನೆಯ ಮಹಾಪುರುಷ ಎಂತಲೇ ಕರೆಯಲಾಗುತ್ತದೆ.

## ವಿಧವಾ ವಿವಾಹಕ್ಕೆ ಪ್ರೋತ್ಸಾಹ ನೀಡಿದ ಹರಿಕಾರ ಈಶ್ವರಚಂದ್ರ ವಿದ್ಯಾಸಾಗರ್

ಹತ್ತೊಂಬತ್ತನೆಯ ಶತಮಾನದ ಆರಂಭದಿಂದ ಕಾಣಿಸಿಕೊಂಡ ಈ ಬಗೆಯ ವೈಚಾರಿಕತೆ ಬಾಲ್ಯವಿವಾಹ, ಸತಿಸಹಗಮನ ಪದ್ದತಿ, ಶಿಶುಹತ್ಯೆಗಳಂಥ ದುಷ್ಟ ಪದ್ದತಿಗಳನ್ನು ಬದಿಗೊತ್ತಿ ವಿಧವಾ ವಿವಾಹ, ಸ್ತ್ರೀ ಶಿಕ್ಷಣ ಮುಂತಾದ ಪ್ರಗತಿಪರ ಆಲೋಚನೆಗಳನ್ನು ಹುಟ್ಟು ಹಾಕುವಲ್ಲಿ ಪರಿಶ್ರಮಿಸಿದರು. ಅವರಲ್ಲಿ ಪ್ರಮುಖರೆಂದರೆ ವಿದ್ಯಾಸಾಗರವರು. ರಾಜಾರಾಮ್ ಮೋಹನ್‌ರಾಯರು ಸ್ತ್ರೀಪರ ಹೋರಾಟವನ್ನು ಮುಂದುವರೆಸುತ್ತಾ ಸ್ತ್ರೀ ಶೋಷಣೆಯನ್ನು ತಪ್ಪಿಸಿ, ಆಕೆಯ ಬದುಕನ್ನು ಹಸನುಗೊಳಿಸಲು ವಿಧವಾ ವಿವಾಹಕ್ಕೆ ಉತ್ತೇಜನ ನೀಡಿ ವಿಧವಾ ವಿವಾಹದ ಹರಿಕಾರೆನಿಸಿಕೊಂಡವರು ವಿದ್ಯಾಸಾಗರವರು.

ಸ್ತ್ರೀಯರ ಉದ್ದಾರ, ವಿದ್ಯಾಭ್ಯಾಸ, ಸುಧಾರಣೆಗಳಿಗಾಗಿ ಈಶ್ವರಚಂದ್ರ ವಿದ್ಯಾಸಾಗರರು ೧೮೫೭-೧೮೫೮ರ ಅವಧಿಯಲ್ಲಿ **೩೫** ಹೆಣ್ಣು ಮಕ್ಕಳ ಶಾಲೆಗಳನ್ನು ಸ್ಥಾಪಿಸಿದರು. ಸ್ತ್ರೀ ವಿದ್ಯಾಭ್ಯಾಸಕ್ಕಾಗಿ ಆ ಕಾಲದಲ್ಲಿ ಚಳವಳಿ ನಡೆಸುತ್ತಿದ್ದ ಡ್ರಿಂಕ್ ವಾಟರ್ ಟಿಥೋನ್ ಎಂಬುವರೊಂದಿಗೆ ಜೊತೆಯಾಗಿ ಬಾಲಕಿಯರ ಶಾಲೆಯನ್ನು ಸುವ್ಯವಸ್ಥಿತವಾಗಿ ರೂಪಿಸಿದರು. ಹೆಣ್ಣು ಮಕ್ಕಳ ಶಿಕ್ಷಣಕ್ಕೆ ಇದರಿಂದ ಉತ್ತೇಜನ ದೊರೆಯಿತು.

ಈಶ್ವರಚಂದ್ರ ವಿದ್ಯಾಸಾಗರರು ಆಧುನಿಕ ಯುಗದ ಮಹಾಪುರುಷ, ಸಾವಿರಾರು ವರ್ಷಗಳಿಂದ ಭಾರತೀಯ ಮಹಿಳೆಯರು ಅನುಭವಿಸುತ್ತಿದ್ದ ಉಸಿರುಗಟ್ಟಿಸುವ ಸ್ಥಿತಿಯಲ್ಲಿದ್ದ ಬಾಲ್ಯವಿವಾಹ, ಬಹುಪತ್ನಿತ್ವ ಮತ್ತು ವಿಧವಾ ಬವಣೆಗಳನ್ನು ನೋಡಿ ಅವುಗಳ ವಿರುದ್ಧ ಹೋರಾಟ ನಡೆಸಿದರು. ಸನಾತನ ಸಂಸ್ಕೃತ ಶಿಕ್ಷಣಕ್ಕೆ ಸೀಮಿತವಾಗಿದ್ದ ಭಾರತೀಯ ಶಿಕ್ಷಣ ಪದ್ದತಿಗೆ ಬದಲಾಗಿ ಆಧುನಿಕ, ವೈಜ್ಞಾನಿಕ ನಿರಪೇಕ್ಷ ಶಿಕ್ಷಣವನ್ನು ಜಾರಿಗೊಳಿಸಲು ಹೋರಾಡಿದರು. ಈಶ್ವರಚಂದ್ರ ವಿದ್ಯಾಸಾಗರರು ಅಪಾರ ಮನುಷ್ಯ ಪ್ರೀತಿಯ ಸತ್ಯಶೋಧಕರು. ತಮ್ಮ ಪಾಂಡಿತ್ಯ, ಕಾರ್ಯದಕ್ಷತೆ ಮತ್ತು ಎದೆಗಾರಿಕೆಗಳಿಂದ ಭಾರತೀಯ ಸ್ತ್ರೀ ಸಮಾಜಕ್ಕಂಟಿದ ಅಮಾನವೀಯ ಪಿಡುಗುಗಳನ್ನು ದಿಟ್ಟನೆಯಿಂದ ಹೋಗಲಾಡಿಸಿದರು. ಇಂದಿನ ಸ್ತ್ರೀವಾದದ ಹೆಜ್ಜೆ ಗುರುತುಗಳನ್ನು ವಿದ್ಯಾಸಾಗರರ ಪ್ರಾಮಾಣಿಕ ಹೋರಾಟದಲ್ಲಿ ಕಾಣಬಹುದಾಗಿದೆ.

## ಸ್ತ್ರೀ ಸುಧಾರಣೆಯ ಸಂತ ಜ್ಯೋತಿರಾವ್‌ಪುಲೆ

ಎರಡು ಶತಮಾನಗಳ ಹಿಂದೆ ಹೆಣ್ಣಿನ ಸ್ಥಿತಿ ಹೇಗಿತ್ತೆಂದರೆ–ಹೆಣ್ಣು ಮಗುವಾಗಿದ್ದಾಗಲೇ ಮದುವೆ ಮಾಡಿಸುತ್ತಿದ್ದರು. ಮದುವೆಯಾದ ದಿನದಿಂದಲೇ ಆಕೆಯ ಜೀತದ ದಿನಗಳು ಆರಂಭವಾಗುತ್ತಿದ್ದವು. ಈ ಜೀತ ಮುಪ್ಪಿನವರೆಗೂ ಮುಂದುವರೆಯುತ್ತಿತ್ತು. ಹೆಣ್ಣಿಗೆ ಮದುವೆಯ ವಿಷಯದಲ್ಲಿ ಆಯ್ಕೆಯ ಸ್ವಾತಂತ್ರ್ಯವಿರಲಿಲ್ಲ. ಗಂಡ ಸಾವನ್ನಪ್ಪಿದರೆ ಕೂಡಲೇ ಅವನ ಶವಕ್ಕೆ ಹಾಕಿದ ಬೆಂಕಿಯಲ್ಲಿಯೇ ಆ

ಬಾಲೆಯನ್ನು ಅಲಂಕರಿಸಿ ಶೃಂಗಾರ ಮಾಡಿ ಬೆಂಕಿಗೆ ನೂಕುತ್ತಿದ್ದರು. ಇಂಥ ಸಂದರ್ಭದಲ್ಲಿ ಮಹಾ ಸಾಮಾಜಿಕ ಕ್ರಾಂತಿಕಾರವಾಗಿ ಜ್ಯೋತಿರಾವ್ ಪುಲೆ (೧೮೨೭-೧೮೯೦) ಜನ್ಮವೆತ್ತಿದ್ದರು. ಸ್ತ್ರಿ ಸಮಾಜದ ಸುಧಾರಣೆಗಾಗಿ ಜೀವನವಿಡೀ ದುಡಿದ ಸಂತರಾಗಿ ಸ್ತ್ರೀಯರ ಬದುಕಿನಲ್ಲಿ ಅರಿವಿನ ಬೆಳಕುಂಟುಮಾಡಿದವರು ಪುಲೆ.

ಜ್ಯೋತಿರಾವ್ ಪುಲೆ ಮಾನವ ಧರ್ಮದ ಪ್ರತಿಪಾದಕರು. ಸ್ತ್ರೀ ವಿಮೋಚನೆಯ ಬಹುದೊಡ್ಡ ಹೋರಾಟಗಾರರು ಸ್ತ್ರೀಯರ ಮೇಲೆ ನಡೆಯುತ್ತಿದ್ದ ಹಿಂಸೆ, ದಬ್ಬಾಳಿಕೆ, ಶೋಷಣೆ, ವಿನಾಶಗಳನ್ನು ಹತ್ತಿಕ್ಕುವ, ನೊಂದವರ ಕಣ್ಣೀರು ಒರೆಸುವ, ಸ್ತ್ರೀಯರಲ್ಲಿ ಸ್ವಾಭಿಮಾನ ಸ್ವಾವಲಂಬನೆಯ ಜಾಗೃತಿ ಮೂಡಿಸಿ ಸತ್ಯಶೋಧಕ ಸಮಾಜಾಂದೋಲನದ ಭ್ರಷ್ಟರಾಗಿ ಪುಲೆ ಸ್ತ್ರೀಸಮಾಜಕ್ಕೆ ಶಿಕ್ಷಣದ ಮೂಲಕ ಜ್ಞಾನ ಜ್ಯೋತಿಯ ಬೆಳಕನ್ನು ನೀಡಿದರು ಅವರು ಸ್ತ್ರೀಪರ ಕಾರ್ಯ ವೈಖರಿ ಹೀಗಿತ್ತು:

- ರಾಜ್‌ರಾಮ್ ಮೋಹನರಾಯರಿಂದ ಆರಂಭವಾದ ಸಾಮಾಜಿಕ ಪುನರುಜೀವನ ಸ್ತ್ರೀಯರ ವಿಷಯದಲ್ಲಿ ಸಾಕ್ಷಾತ್ಕಾರವಾಗಿದ್ದು ಜ್ಯೋತಿರಾವ್ ಪುಲೆಯವರಿಂದ ಹೆಣ್ಣು ಮಕ್ಕಳನ್ನು ಶಾಲೆಗೆ ಕಳುಹಿಸುವುದೇ ತಪ್ಪು ಸ್ತ್ರೀ ವಿದ್ಯಾರ್ಜನೆಗೆ ಅನರ್ಹರು ಎಂದು ನಂಬಿದ್ದ ಕಾಲದಲ್ಲಿ ಪುಲೆ ೧೮೪೮ರಲ್ಲಿ ಮೊಟ್ಟಮೊದಲ ಬಾರಿಗೆ ಕನ್ಯಾಶಾಲೆಯನ್ನು ಸ್ಥಾಪಿಸಿ ಹೆಣ್ಣು ಮಕ್ಕಳು ಶಿಕ್ಷಣಕ್ಕೆ ಆಸರೆಯಾಗುತ್ತಾರೆ.



- ೧೯೬೩ ವಿಧವೆಯರು ಹೆತ್ತ ಮಕ್ಕಳನ್ನು ಪೋಷಿಸಲು ಅನಾಥಲಯ ಆರಂಭಿಸಿದ ಪುಲೆ ತಮ್ಮ ಅನಾಥಯದಿಂದಲೇ ದತ್ತು ತಂದು ಮಗುವನ್ನು ಸಾಕಿದರು ವಿಧವಿಯವರು ಲೋಕದಲ್ಲಿರುವಂತೆಯೇ ಇಲ್ಲ ಎನ್ನುವ ಕಾಲದಲ್ಲಿ ವಿಧವೆಯರು ಹೆತ್ತ ಮಗುವಿಗೆ ಒಂದು ಆಶ್ರಯ ಸ್ಥಾಪಿಸಿದ್ದು ದೊಡ್ಡ ಕ್ರಾಂತಿಯೇ ಸರಿ. ವಿಧವೆಯನ್ನು ನಿಕೃಷ್ಠವಾಗಿ ಕಾಣುತ್ತಿದ್ದ

- ಸಂದರ್ಭದಲ್ಲಿ ಜ್ಯೋತಿರಾವ್ ಪುಲೆ ಮಾನವೀಯ ಅಂತಃಕರಣ ಮಿಡಿದರು.

- ವಿಧವೆಯರು ಹೆತ್ತ ಮಕ್ಕಳನ್ನು ಪೋಷಿಸಿದರೆ ಸಾಲದು ವಿಧವೆಗೆ ಪುನರುಜ್ಜೀವನ ಕೊಡಬೇಕೆಂದು ಬಯಸಿದ ಪುಲೆ ೧೮೬೪ ರಲ್ಲಿ ವಿಧವಾ ವಿವಾಹ ನೆರವೇರಿಸುವುದು ಸ್ತ್ರೀಗೆ ಸಲ್ಲಬೇಕಾದ ಸಾಮಾಜಿಕ ನ್ಯಾಯ. ಆದ್ದರಿಂದ ವಿಧವೆಯರಿಗೆ ವಿವಾಹ ಮಾಡಿಸುವುದು ಪುಣ್ಯದ ಕಾರ್ಯವೆಂದು ಪ್ರಚಾರ ಆರಂಭಿಸಿದರು ಬಗ್ಗೆ ಸಮಾಜದಲ್ಲದ್ದ ಅನಾಥರ, ಅವಿವೇಕಗಳನ್ನು ನಿರ್ನಾಮ ಮಾಡಲು ಶ್ರಮಿಸಿದರು.

- ವಿಧವೆಯರು ಮರೆಮಾಚಿ ಬಸಿರಾದಾಗ ಅವರಿಗಾಗಿ ಪ್ರಸೂತಿ ಗೃಹವನ್ನು ತೆರೆದರು. ವಿಧವೆಯರು ಬಸಿರಾಗುವುದೆಂದರೆ ಮಹಾಪಾಪ, ಲೋಕಕಂಟಕ ಕಾರ್ಯವೆಸಗಿದಂತೆ ಎಂದು ಭಾವಿಸುತ್ತದ್ದ ಕಾಲದಲ್ಲಿ ಪುಲೆ ವಿಧವೆಯರೂ ಬಸಿರಿಗೆ ಅರ್ಹರು. ಅದೊಂದು ಸಹಜ ಕ್ರಿಯೆ

ಹಲವು ಕಟ್ಟುಪಾಡುಗಳಿಗೆ ಕಟ್ಟುಬಿದ್ದು ಕಟ್ಟಿಕೊಂಡು ವೃದ್ಧ ಗಂಡ ಸೆಗೆದು ಬಿದ್ದರೂ ಇನ್ನೊಬ್ಬ ಪುರುಷನನ್ನು ಕಣ್ಣೆತ್ತಿಯೂ ನೋಡಬಾರದು; ಸತ್ತವನ ನೆಪದಲ್ಲಿ ಇಡೀ ಬದಕನ್ನು ಸವೆಸಬೇಕು ಎಂದು ಬೋಧಿಸುತ್ತಿದ್ದಾಗ. ಇಷ್ಟವಾದವನೊಂದಿಗೆ ಕೂಡಿ ತನ್ನ ಸಹಜ ಅಪೇಕ್ಷೆಗೆ ಅನುಗುಣವಾಗಿ ಮಗು ಹಡೆಯಲು ವಾತಾವರಣ ಕಲ್ಪಿಸಿ ನಿಷೇಧಗಳನ್ನು ಮುರಿದವರು ಪುಲೆ.

- ❖ ಅನಾದಿಕಾಲದಿಂದಲೂ ಬ್ರಾಹ್ಮಣರಲ್ಲಿ ರೂಢಿಯಲ್ಲಿದ್ದ ವಿಧವೆಯರು ಕೇಶಮುಂಡನ ಕಾರ್ಯವನ್ನು ಪುಲೆ ಅತ್ಯಂತ ಅಮಾನವೀಯವೆಂದು ಭಾವಿಸಿದರು. ಹೆಣ್ಣನ್ನು ವಿರೂಪಗೊಳಿಸುವ ವಿಕೃತಗೊಳಿಸುವ ಆಚರಣೆಗಳು ವಿಕೃತ ಮನಸ್ಸಿನ ಪುರುಷ ಸಮಾಜದಲ್ಲಿವಿರುತ್ತವೆ ಎಂಬುದನ್ನು ಮನಗಂಡು ಇಂಥ ಅನಿಷ್ಠ ಆಚರಣೆಯನ್ನು ತಡೆಯಬೇಕೆಂದು ಹಜಾಮರನ್ನು ಸಂಘಟಿಸಿ ವಿಧವೆಯರು ಕೇಶಕರ್ತನವನ್ನು ತಡೆದರು.

- ❖ ೧೮೭೩ ರಲ್ಲಿ ಜ್ಯೋತಿರಾವ್ ಪುಲೆಯವರು ಸ್ಥಾಪಿಸಿದ ಸತ್ಯ ಶೋಧಕ ಸಮಾಜ ಅವರ ಬದುಕಿನ ಮೇರುಘಟ್ಟ ಅನ್ಯರನ್ನು ಶೋಷಿಸದೇ ಎಲ್ಲರನ್ನೂ ತನ್ನಂತೆ ಕಾಣುವ ಸ್ತ್ರೀ ಪುರುಷ ಸಮಾನತೆ ಸಾರುವ ತಮ್ಮ ಸತಿಯರನ್ನು ಬಿಟ್ಟು ಉಳಿದವರನ್ನು ಸೋದರನನ್ನಾಗಿ ಭಾವಿಸುವ ಬೇರೆಯವರ ಅಭಿಪ್ರಾಯಗಳನ್ನು ಕಟ್ಟುವಾಗಿ ನಿಂದಿಸದ ಅನ್ಯಧರ್ಮಗಳ ನಂಬಿಕೆಗಳನ್ನು ಟೀಕಿಸದ ಮಾನವತೆ ಮೆರೆಯುವ ಆದರ್ಶವನ್ನು ಪ್ರತಿಪಾದಿಸುವುದೇ ಸತ್ಯಶೋಧಕ ಸಮಾಜದ ಮುಖ್ಯ ಗುರಿಯಾಗಿತ್ತು. ಇಂಥದ್ದೊಂದು ಸಮಾಜ ಕಟ್ಟಿ ಬೆಳೆಸಿದ ಕೀರ್ತಿ ಪುಲೆಯವರದು.

- ❖ ಬಾಲಕಿಯರ ಮದುವೆಯನ್ನು ವಿರೋಧಿಸಿದ ಪುಲೆ ಹೆಣ್ಣಿಗೆ ಆಯ್ಕೆ ಸ್ವಾತಂತ್ರ್ಯವಿರಬೇಕೆಂದು ಪ್ರತಿಪಾದಿಸಿದರು ಸ್ತ್ರೀ ಪುರುಷರು ಬದುಕಿನ ಗತಿಯನ್ನು ಅರ್ಥಮಾಡಿ ಕೊಳ್ಳುವಷ್ಟು ಪ್ರೌಢಾವಸ್ಥೆಗೆ ಬಂದಾಗ ಮದುವೆ ಮಾಡುವುದು ಯುಕ್ತವೆಂದು ಪುಲೆ ಪ್ರಚಾರ ಮಾಡಿದರು.

- ❖ ಮದುವೆ ಮುಂಜಿ ಮುಂತಾದ ಶುಭ ಸಮಾರಂಭಗಳಲ್ಲಿ ಪಠಿಸುತ್ತಿದ್ದ ಸಂಸ್ಕೃತ ಮಂತ್ರಪಟನೆ ಅದನ್ನು ಮಾಡುವವನಿಗೆ; ಅದನ್ನು ಕೇಳುವವನಿಗೆ ತಿಳಿಯದ ಸಂಗತಿಯಾಗಿತ್ತು. ಆದ್ದರಿಂದ ಪುಲೆ ಜನರಾಡುವ ಮರಾಠಿ ಭಾಷೆಗೆ ಅಂಥ ಮಂತ್ರಗಳನ್ನೆಲ್ಲ ಅನುವಾದ ಮಾಡಿದರು. ಇದರಿಂದ ಜನರಿಗೆ ತಾವು ಅದುವರಗೆ ಉಚ್ಚರುಸಿದ ಅನಿಷ್ಠ ಮಂತ್ರಗಳ ಪರಿಚಯುವಾಯಿತು.

ಏಳು ವರ್ಷದ ಬಾಲೆಯನ್ನು ಮದುವೆಯಾಗಿದ್ದ ಜ್ಯೋತಿರಾವ್ ಪುಲೆ ತನ್ನ ಹೆಂಡತಿಗೆ ವಿದ್ಯೆ ಕಲಿಸಲು ಆರಂಭಿಸಿದರು. ಅಷ್ಟೆ ಏಕೆ ಸಮಾಜಕ್ಕೆ ಕಾಣಿಕೆಯಾಗುವಂತೆ ಆಕೆಗೆ ತರಬೇತಿ ನೀಡಿದರು. ಆಕೆ ಕಲಿತ ವಿದ್ಯೆ ಹೆಣ್ಣು ಮಕ್ಕಳ ಅನನ್ಯತೆಯನ್ನು ಸೂಚಿಸುತ್ತದೆ.

ಸ್ತ್ರೀ ಪುರುಷರ ಆಸ್ತಿ ಹಕ್ಕನ್ನು ಅಭಿವ್ಯಕ್ತಿ ಸ್ವಾತಂತ್ರವನ್ನು ರಕ್ಷಿಸುವವನೇ ಸತ್ಯಸಂದ ಎಂದು ನಂಬಿದ್ದ ಪುಲೆಯವರು **'ಸ್ತ್ರೀ ವಿಚಾರವಾದಿ ಸಭಾದ'** ಮೂಲಕ ಬಾಲ್ಯ ವಿವಾಹ ನಿರಾಕರಣೆ ಮತ್ತು ವಿಧವ ವಿವಾಹ ಆಚರಣೆಗಳನ್ನು ಉತ್ತೇಜಿಸುತ್ತಾರೆ, ಸ್ತ್ರೀ ಶಿಕ್ಷಣದ ಮೂಲಕ ವೈಚಾರಿಕ ಜಾಗೃತಿಯನ್ನು ಮೂಡಿಸಿದ ಕೀರ್ತಿ ಪುಲೆಯವರಿಗೆ ಸಲ್ಲುತ್ತದೆ.

ದಿನವೆಲ್ಲ ಹೊಲದಲ್ಲಿ ದುಡಿಯುವ ರೈತನ ಮಡದಿಯರಿಗೆ ಶಿಕ್ಷಣ ನೀಡುವ ಉದ್ದೇಶದಿಂದ ಜ್ಯೋತಿರಾವ್ ತನ್ನ ಮನೆಯಲ್ಲಿಯೇ ವಯಸ್ಕರಿಗಾಗಿ ರಾತ್ರಿ ಶಾಲೆಯನ್ನು ತೆರೆಯುತ್ತಾರೆ. ರಾಜಾರಾಂ ಮೋಹನ್ರಾಯರಿಂದ ಆರಂಭಗೊಂಡು ಸ್ತ್ರೀ ಸಮಾಜಾಂದೋಲನದ ಪರಿಣಾಮದಿಂದ ಸತಿಪದ್ದತಿ ನಿಷೇಧಾಜ್ಞೇ ಹೊರಡಿಸಿ ಸತಿಪದ್ದತಿಯನ್ನು ತೊಲಗಿಸುವಲ್ಲಿ ಪರಿಣಾಮಕಾರಿ ಪ್ರಯತ್ನ ಮಾಡುತ್ತಾರೆ.

ಗಾಂಧೀಜಿ ಮತ್ತು ಅಂಬೇಡ್ಕರವರು ಹುಟ್ಟುವ ಮೊದಲೇ ದಲಿತರು ಮತ್ತು ಮಹಿಳೆಯರ ಏಳಿಗೆಗಾಗಿ ಶ್ರಮಿಸಿದವರು ಜ್ಯೋತಿರಾವ್ ಪುಲೆ.

**ಜ್ಯೋತಿರಾವ್ ಪುಲೆಯವರು ತಿಳಿಸುವ ತಿಳಿಸುವ ಸತ್ಯಾಚಾರಣೆಯ ನಿಯಮಗಳಲ್ಲಾಗಲಿ ಸ್ತ್ರೀಪರ ವಿವೇಚನೆ ಕಂಡು ಬರುತ್ತವೆ ಅವುಗಳು ಹೀಗಿವೆ.**

೧) ಮಾನವದನ್ನು ಸೃಷ್ಟಿಸಿರುವನು ಸೃಷ್ಟಿಕರ್ತ, ಸ್ತ್ರೀ ಪುರುಷರೆಲ್ಲರಿಗೂ ತಮ್ಮ ತಮ್ಮ ಅಧಿಕಾರವನ್ನು ಚಲಾಯಿಸುವ ಸ್ವಾತಂತ್ರ್ಯ ಉಂಟು.

೨) ಸೃಷ್ಟಿಕರ್ತನಲ್ಲದೇ ಸ್ತ್ರೀ ಪುರುಷರನ್ನು ಬೇರಾರನ್ನು ನಂಬಕೂಡದು. ಅಂದರೆ ಗೃಹ ಉಪಗ್ರಹ, ಸೂರ್ಯಮಂಡಲ ಕಲ್ಲು ಪ್ರತಿಮೆಗಳು ಇತ್ಯಾದಿ.

೩) ಸೃಷ್ಟಿಕರ್ತನಿಂದ ನಿರ್ಮಿಸಿರುವ ಎಲ್ಲಾ ವಸ್ತುಗಳನ್ನು ನೀವೂ ಅನುಭವಿಸಿ ಇತರರಿಗೂ ಅನುಭೋಗಿಸುವ ಅವಕಾಶ ನೀಡಿ.

೪) ಸೃಷ್ಟಿಕರ್ತನಿಂದ ನಿರ್ಮಿತವಾದ ಸ್ತ್ರೀ ಪುರುಷರೆಲ್ಲರಿಗು ಮಾನವ ಅಧಿಕಾರವಿದೆ. ಯಾವ ಮನುಷ್ಯನ ಮೇಲಾಗಲೀ ಬೇರೊಬ್ಬ ಮನುಷ್ಯ ಅಥವಾ ಮನುಷ್ಯ ಸಮೂಹದವರು ದಬ್ಬಾಳಿಕೆ ನಡೆಸದಿರಲಿ.

೫) ಸ್ತ್ರೀ ಪುರುಷರೆಲ್ಲರಿಗೂ ಸೃಷ್ಟಿಕರ್ತನಾ ಧರ್ಮ, ಮತ್ತು ರಾಜಕೀಯ ಸ್ವಾತಂತ್ರ ಹಾಗೂ ಸಮಾನ ಅಧಿಕಾರ ನೀಡಿದ್ದಾನೆ. ಪ್ರತಿಯೊಬ್ಬನಿಗೂ ಈ ಅಧಿಕಾರವನ್ನು ಇತರರು ಕಸಿದುಕೊಳ್ಳದಂತೆ ಎಚ್ಚರವಹಿಸಿ. ನೀವು ಇತರರ ಅಧಿಕಾರವನ್ನು ಕಸಿದುಕೊಳ್ಳದಿರಿ.

೬) ಬಬ್ಬ ಹೆಂಡತಿಗೆ ಬಬ್ಬ ಗಂಡನನ್ನು ಬಬ್ಬ ಗಂಡನಿಗೆ ಬಬ್ಬ ಹೆಂಡತಿಯನ್ನು ಆರಿಸಿಕೊಳ್ಳುವ ಅಧಿಕಾರವಿದೆ ಉಳಿದವರೊಂದಿಗೆ ಸೋದರ ಸೋದರಿಯರಂತೆ ನಡೆದುಕೊಳ್ಳುವುದು ವ್ಯಭಿಚಾರಿ ನಿಷೇಧಿಸಲಾಗಿದೆ.

ಮಹಿಳೆಯರನ್ನು ಕರುಣೆಯಿಂದ ನೋಡುವ ಅಗತ್ಯವಿಲ್ಲ ಆಕೆಗೆ ಸಲ್ಲಬೇಕಾಗಿರುವುದು ಸಾಮಾಜಿಕ ನ್ಯಾಯ ಹೆಣ್ಣಿನ ಅಸ್ತಿತ್ವವನ್ನು ಗುರುತಿಸುವ ಆಕೆಯ ಪ್ರತಿಭೆಯ ಪ್ರಕಾಶ ನಕ್ಷೆ ಅವಕಾಶ ನೀಡುವ, ಗಂಡಿಗಿರುವ ಸಾಧ್ಯತೆಗಳನ್ನೆಲ್ಲಾ ಹೆಣ್ಣಿಗೂ ದೊರಕಿಸುವ ಕೆಲಸ ಎಂದಿಗೂ ಆಗಬೇಕಾಗಿರಾವಂತದ್ದು, ಲಿಂಗ ಅಸಮಾನತೆ ಮನುಷ್ಯ ಮನುಷ್ಯರ ನಡುವಿನ ಸಾಮಾಜಿಕ ವ್ಯತ್ಯಾಸವಾಗಿ ಮೇಲು ಕೀಳೆಂಬ ಅನಿಷ್ಠ ಸ್ಥಿತಿ ನಿರ್ಮಾಣವಾಗಲು ಕಾರಣವಾಗುತ್ತದೆ. ಇದನ್ನು ಸಂಪೂರ್ಣವಾಗಿ ತೊಲಗಿಸಬೇಕು. ಹೆಣ್ಣಿಗೆ ಸಮಾನ ಸ್ಥಾನಮಾನ ದೂರೆಯಬೇಕು. ಮಹಿಳೆಯರು ವಿದ್ಯಾವಂತರಾದರೆ ವೈಚಾರಿಕ ಪ್ರಜ್ಞೆ ಬೆಳೆಸಿಕೊಂಡರೆ ಸಮಾಜದಲ್ಲಿಯೂ ಅವರು ತಮ್ಮ ಹಕ್ಕನ್ನು ಅಧಿಕಾರವನ್ನು ಗಳಿಸಿಕೊಳ್ಳಬಲ್ಲ ಸಾಮರ್ಥ್ಯ ಹೊಂದುತ್ತಾರೆ. ಈ ಮರ್ಮ ಪುಲೆಯವರಿಗೆ ೧೯ ನೇಯ ಶತಮಾನದಲ್ಲಯೇ ಗೊತ್ತಿತ್ತು. ಆದ್ದರಿಂದಲೇಅವರು ಶಿಕ್ಷಣವನ್ನು ಮಹಿಳಾ ವಿಮೋಚನೆಯ ಅಸ್ತ್ರವೆಂದು ಎಲ್ಲಾ ಬಗೆಯ ಸಾಮಾಜಿಕ ಶಿಕ್ಷಣ ಪ್ರಸಾರ ಮಾಡಿದರು ಪುಲೆಯವರ ಸ್ತ್ರೀಪರ ನಿಲುವುಗಳು ಇಂದಿಗೂ ಪ್ರಸ್ತುತವೆನಿಸುತ್ತವೆ.

## <u>ಸ್ತ್ರೀ ಸ್ವಾಭಿಮಾನ ಚಳುವಳಿಯ ಹಮ್ಮೀರ ಪೆರಿಯಾರ್</u>

ಪೆರಿಯಾರ್‌ರವರು ಬಾಲ್ಯವಿವಾಹವನ್ನು ಕಟ್ಟುವಾಗಿ ಟೀಕಿಸಿದರು ಸ್ತ್ರೀಯರ ತರ್ಕಶೀಲತೆ, ವೈಚಾರಿಕತೆ ಮಾಯವಾಗಿ ಪರಾಧೀನತೆ ಪ್ರಾಪ್ತವಾಯಿತು. ಎಲ್ಲಿಯವರೆಗೆ ಸ್ತ್ರೀಯರಿಗೆ ಸರಿಯಾದ ಗೌರವ ದೊರಕುವುದಿಲ್ಲವೋ ಅಲ್ಲಿಯವರೆಗೆ ಆ ಸಮಾಜ ಏಳಿಗೆಯಾಗುವುದಿಲ್ಲ, ಈ ಹಿನ್ನೆಲೆಯಲ್ಲಿ ಸ್ತ್ರೀಯರಲ್ಲಿ ಸ್ವಾಭಿಮಾನದ ಬದುಕನ್ನು ಕಟ್ಟಿಕೊಳ್ಳಲು ನೆರವಾದ ಸ್ತ್ರೀಸಮಾಜದ ಹಿತಾಶಕ್ತಿಗಾಗಿ ಜೀವನ ಪರ್ಯಂತ ಹೋರಾಡಿದ ಈ ಹೋರಾಟದ ಜೊತೆ ಜೊತೆ ಮತ ಮೌಢ್ಯ ಮತ್ತು ಮನುಧರ್ಮ ಶಾಸ್ತ್ರಗಳ ದೌರ್ಜನ್ಯ, ದಬ್ಬಾಳಿಕೆಯ ವಿರುದ್ದ ವೈಜಾರಿಕ ಕಹಳೆಯನ್ನು ಮೊಳಗಿಸಿದ ಪೆರಿಯಾರ್ ಇ.ವಿ ರಾಮಸ್ವಾಮಿ ನಾಯಕರ ಸ್ತ್ರೀಪರ ಚಿಂತನೆಗಳು ಜೀವ ಪರತತ್ವವನ್ನು ಸಾರುವುದರಿಂದ ಉಲ್ಲೇಖನೀಯವೆನಿಸಿದೆ.

ಪೆರಿಯಾರರು ಆತ್ಮಗೌರವದ ಆಂದೋಲನ, ಅವರು ಆಶಯ ಪ್ರತಿಯೊಬ್ಬ ಮನುಷ್ಯ ಸಮಾನತೆಯನ್ನು ಪ್ರತಿಪಾದಿಸಬೇಕು. ಸ್ತ್ರೀಯರ ಉನ್ನತಿಯನ್ನು ತಮ್ಮ ಆಂದೋಲನದ ಪ್ರಮುಖ ಕಾರ್ಯವಾಗಿ ಪರಿಗಣಿಸಿದರು. ಬ್ರಾಹ್ಮಣೋತ್ತರರಲ್ಲಿ ಆತ್ಮ ಗೌರವ ಬೆಳೆಸಿ ಸಂಘಟಿಸಿದವರು. ಬಾಲ್ಯ ವಿವಾಹಗಳನ್ನು ತಡೆಗಟ್ಟಿ ಮಕ್ಕಳು ಶಿಕ್ಷಣಕ್ಕೆ ಬತ್ತಾಸೆಯಾಗಿ ನಿಂತರು.

ಪೆರಿಯಾರರು ೧೯೨೯ ರಲ್ಲಿ ಸಂಘಟಿಸಿದ ಮಹಿಳೆಯರು ಸಮಾವೇಶದಲ್ಲಿ ತೆಗೆದುಕೊಂಡ ನಿರ್ಣಯಗಳು ಸ್ತ್ರೀಯರಲ್ಲಿ ಸ್ವಾಭಿಮಾನವನ್ನುಂಟು ಮಾಡುವಲ್ಲಿ ಪ್ರಮುಖವಾದವು. ಅವುಗಳೆಂದರೆ.

೧) ಸಂಸಾರದ ಆಸ್ತಿಯ ವಿಚಾರದಲ್ಲಿ ಗಂಡಸರು ಹಾಗೆಯೇ ಹೆಂಗಸರಿಗೂ ಸಮಾನವಾಗಿ ಆಸ್ತಿಯನ್ನು ನೀಡಬೇಕು.

೨) ಅರ್ಹ ಮಹಿಳೆಗೆ ಅರ್ಹವಾದ ಉದ್ಯೋಗ ನೀಡುವಲ್ಲಿ ಯಾವುದೇ ತಕರಾರಿರಬಾರದು ವೇತನ ಸ್ತ್ರೀ ಪುರುಷರಿಗೆ ಸಮಾನವಾಗಿರಬೇಕು.

೩) ಪ್ರಾಥಮಿಕ ಶಾಲೆಗಳಿಗೆ ಪುರುಷರನ್ನು ಸೇರಿಸಬಾರದು. ಶಿಕ್ಷಕಿಯರನ್ನೇ ನೇಮಿಸಬೇಕು.

ಪೆರಿಯಾರ್ರು 'ಮಹಿಳಾ ಆತ್ಮ ಗೌರವದ ಸಮಾವೇಶ ಮೂಲಕ ಸ್ತ್ರೀಯರಲ್ಲಿ ಜಾಗೃತಿ ಉಂಟುಮಾಡಿದರು. ಜೀವನ ಸಂಗಾತಿಯನ್ನು ಆರಿಸುವ ವಿಷಯ ಬಂದಾಗ, ಮಹಿಳೆಯರಿಗೆ ಅವರದೇ ಆದ ತಿರ್ಮಾನವಿರಬೇಕು. ಇದು ಜಾತಿ ಧರ್ಮಗಳಿಂದ ಹೊರತಾಗಿರಬೇಕು. ಮತ್ತು ಈ ತರಹದ ಮದುವೆ ದುಂದುವೆಚ್ಚ ಹಾಗೂ ಶಾಸ್ತ್ರ ವಿಧಿ ಆಚರಣೆಗಳಿಂದ ಕೂಡಿರಬಾರದು. ದೇವದಾಸಿ ಪದ್ಧತಿ ನಿಷೇಧದ ಕಾನೂನನ್ನು ಜಾರಿಗೆ ತಂದ ಕೀರ್ತಿ ಪೆರಿಯಾರ್ ಮತ್ತು ಡಾಕ್ಟರ್ ಮುತ್ತುಲಕ್ಷ್ಮಿಯವರಿಗೆ ಸಲ್ಲುತ್ತದೆ.

ಮಹಿಳಾ ಸಾಮಾಜಿಕತೆ ಪೆರಿಯಾರರ ಮಹತ್ವದ ಕೊಡುಗೆಯೆಂದರೆ, ಮಹಿಳೆಯರಲ್ಲಿ ಆತ್ಮಗೌರವದ ಚಳುವಳಿಯನ್ನು ಹುಟ್ಟು ಹಾಕಿದ್ದು, ಮಹಿಳೆಗೆ ಪುರುಷರ ಹಂಗಿಲ್ಲದೇ ಬದುಕುವ ಸಾಧ್ಯತೆಗಳನ್ನು; ಸ್ವಾಭಿಮಾನದ ಜೀವನ ವಿಧಾನವನ್ನು ತೋರಿಸಿಕೊಟ್ಟಿದ್ದು; ಹೆಣ್ಣಿನ ಏಳಿಗೆಗೆ ಕಡಿವಾಣವಾಗಿರುವ ಪುರುಷ ದಬ್ಬಾಳಿಕೆಗಳನ್ನ ತೋರಿಸಿಕೊಟ್ಟ ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೆ; ವೈಚಾರಿಕ ಬದುಕಿಗೆ ಹೊತ್ತು ನೀಡಿದ್ದು ಇನ್ನು ಮುಂದುವರೆದು ನಾಗರೀಕ ಸಮಾಜದಲ್ಲಿ ಹೆಣ್ಣಿಗೊಂದು, ಕಾನೂನು. ಗಂಡಿಗೊಂದು ಕಾನೂನುಗಳಿರಬೇಕೆಂದು ಯೋಚಿಸುವುದು ಸರಿಯಲ್ಲವೆಂದು ಪ್ರತಿಪಾದಿಸಿದ್ದು; ಹೆಣ್ಣಿಗೆ ಪ್ರಸೂತಿ ತಾಯಿತನದ ತೊಂದರೆಗಳಿಂದ ಇನ್ನೊಬ್ಬರ ಸಹಾಯಕೋಸ್ಕರ ಹಂಬಲಿಸುವುದನ್ನೇ ದೌರ್ಜನ್ಯವೆಂದು ಭಾವಿಸಿ ಹೆಣ್ಣನ್ನು ಅಧೀನದಲ್ಲಿಟ್ಟುಕೊಳ್ಳುವುದನ್ನು ವಿರೋಧಿಸಿದ್ದು ಪೆರಿಯಾರರ ಮಹತ್ವದ ಸಂಗತಿಗಳು.

ಸ್ತ್ರೀಯರಲ್ಲಿ ಸ್ವಾಭಿಮಾನ ಬೆಳೆಸುವಲ್ಲಿ ರಾಮ ಸ್ವಾಮಿನಾಯಕರು ೧೯೩೧ ರಲ್ಲಿ ವಿಧುರ ನಗರದಲ್ಲಿ ನಡೆಸಿದ **'ಸ್ತ್ರೀ ಸ್ವಾಭಿಮಾನ ಚಳುವಳಿಯ ಸಮ್ಮೇಳನ'** ಮತ್ತು ಆ ಸಮ್ಮೇಳನವಾದವು. ಅವರು ಮನು ಧರ್ಮಶಾಸ್ತ್ರವನ್ನು ಸುಡಲು ಹೇಳಿದರು ಪೆರಿಯಾರರ ಸ್ತ್ರೀವಾದ ಮಾನವೀಯ ಅಂತಃಕರಣದ ದ್ಯೋತಕವಾಗಿತ್ತು ಅವರು ನಿರ್ಣಯಗಳು ಹೀಗಿವೆ.

೧) ಮಹಿಳೆಯರಿಗೆ ಆಸ್ತಿಯ ಹಕ್ಕು ದೊರೆಯಬೇಕು.

೨) ಸ್ತ್ರೀಯರಂತೆ ಪುರುಷರೂ ಕೂಡ ಸನ್ಮಾರ್ಗಿಗಳಾಬೇಕು, ಶೀಲಸಂಪನ್ನರಾಗಬೇಕು

೩.) ಹದಿನಾರು ವರ್ಷಕ್ಕಿಂತ ಮುಂಚೆ ಹೆಣ್ಣು ಮಕ್ಕಳಿಗೆ ಮದುವೆ ಮಾಡಬಾರದು.

೪) ಕುಟುಂಬ ಯೋಜನೆ ಕಾರ್ಯಗತವಾಗಬೇಕು.

೫) ಮದುವೆಯೊಂದು ಸೈದ್ಧಾಂತಿಕ ಒಪ್ಪಂದ, ಅದು ಬಲತ್ಕಾರವಾಗಬಾರದು.

೬) ವರದಕ್ಷಣೆ ಸ್ವೀಕಾರವು ಬರ್ಬರ ಪದ್ಧತಿ

೭) ಮಹಿಳೆಯರೂ ಪುರುಷರಂತೆಯೇ ಎಲ್ಲಾ ಕ್ಷೇತ್ರಗಳಲ್ಲಿ ಪ್ರಗತಿಪರವಾಗಿರಬೇಕು.

ಹೀಗೆ ಪೆರಿಯಾರರೆ ಸ್ತ್ರೀಪರ ನಿರ್ಣಯಗಳು ಪ್ರಗತಿದಾಯಕವಾಗಿದ್ದವು. ಅವರು ಶಿಕ್ಷಣವು ಸರ್ವೋನ್ನತಿಗೆ ಕಾರಣವಾಗಬೇಕೆಂದು ಪ್ರತಿಪಾದಿಸಿದರು. ಹೆಣ್ಣು ಮಕ್ಕಳ ವಿದ್ಯಾಭ್ಯಾಸಕ್ಕೆ ಹೆಚ್ಚು ಹೊತ್ತು ಕೊಡಬೇಕು. ಅವರಿಗೆ ಬೇಕಾದ ಸರಿಹೊಂದುವ ಹುದ್ದೆಗಳನ್ನು ಆರಿಸಿಕೊಳ್ಳುವ ಅವಕಾಶ ಸ್ತ್ರೀಯರಿಗಿರಬೇಕು. ಅವರ ಜೀವನ ಸಂಗಾತಿಯನ್ನು ಅವರೇ ನಿರ್ಧರಿಸಬೇಕೆಂಬ ಅಭಿಪ್ರಾಯಗಳು ವಿಪ್ರವಾಗಿವೆ.

## ಮೊಟ್ಟ ಮೊದಲ ಮಹಿಳಾ ವಿಶ್ವವಿದ್ಯಾನಿಲಯ ಮಹಾಶಿರ ಕರ್ವೆ

ಇವರು ವಿಧವಾ ವಿವಾಹಕ್ಕೆ ಪ್ರೋತ್ಸಾಹ ನೀಡಿದರು. ಇವರ ಮೊದಲ ಹೆಂಡತಿ ತೀರಿಹೋದ ಮೇಲೆ ಇವರು ಕೂಡ ವಿಧವೆಯನ್ನು ಮದುವೆಯಾಗಿ ಅವಳಿಗೆ ಬದುಕನ್ನು ನೀಡಿ ಅಲ್ಲದೇ ಅವಳನ್ನು ವಿದ್ಯಾವಂತೆಯಾಗಿ ಮಾಡಿ ಸಮಾಜ ಸೇವೆಯನ್ನು ಮಾಡಲು ಅನುವು ಮಾಡಿಕೊಟ್ಟರು. ಇವರು ಏಳು ವರ್ಷಗಳ ಅವಧಿಯಲ್ಲಿ ೫ ವಿಧವಾ ವಿವಾಹಗಳನ್ನು ನೆರವೇರಿಸಿದರು. ವಿಧವೆಯರಿಂದ ಸರಿಯಾದ ಪ್ರೋತ್ಸಾಹ ದೊರೆಯದೇ ಇದ್ದರಿಂದ ನಿರಾಶರಾಗುತ್ತಿದ್ದರು. ಆದ್ದರಿಂದ ವಿಧವೆಯರಿಗೆ ಜೀವನ ಸುಧಾರಣೆಗೆ ಮತ್ತೇನಾದರೂ ಮಾಡಲೇಬೇಕೆಂದು ಆಲೋಚಿಸಿದರು ಅದರ ಪರಿಣಾಮವೇ ವಿಧವಾಶ್ರಮ ಸ್ಥಾಪನೆಯಾಯಿತು. ಆಶ್ರಮದಲ್ಲಿ ವಿಧವೆಯರಿಗೆ ಊಟ, ವಸತಿಯ ಜೊತೆಗೆ ಶಿಕ್ಷಣದ ವ್ಯವಸ್ಥೆ ಕೂಡ ದೊರೆಯುವಂತೆ ಮಾಡಿದರು. ಅವಿವಾಹಿತ ತರುಣಿಯರನ್ನು ಆಶ್ರಮದಲ್ಲಿ ಸೇರಿಸಿಕೊಳ್ಳಬೇಕಾಯಿತು. ಆಶ್ರಮದಲ್ಲಿ ಅವಿವಾಹಿತ ಮಹಿಳೆಯರ ಸಂಖ್ಯೆ ಹೆಚ್ಚಾದಾಗ ಎಷ್ಟೋ ಜನ ವಿದ್ಯಾರ್ಥಿನಿಯರನ್ನು ವಾಪಸ್ಸು ಕಳಿಸುವಂತಾಯಿತು. ಇದರ ಪರಿಣಾಮವಾಗಿ ೧೯೧೧ರಲ್ಲಿ ಹಿಂಗಣೆಯಲ್ಲಿ ಅವಿವಾಹಿತ ತರುಣಯರಿಗೆಂದೇ ಪ್ರತ್ಯೇಕ ಬಾಲಿಕಾಶ್ರಮ ಮತ್ತು ಅವರು ವಿದ್ಯಾಭ್ಯಾಸಕ್ಕೆಂದೇ ಮಹಿಳಾ ವಿಶ್ವವಿದ್ಯಾನಿಲಯವನ್ನು ಪ್ರಾರಂಭಿಸಿದರು. ಡೆಕನ್ ಎಜುಕೇಷನ್ ಸೊಸೈಟಿ ಕರ್ವೆಯವರು ಸ್ಥಾಪಿಸಿದ ವಿಶ್ವವಿದ್ಯಾನಿಲಯಕ್ಕೆ ಒಂದು ದೊಡ್ಡ ಕಟ್ಟಡವನ್ನು ನೀಡಿ ಉಪಕರಿಸಿತು.

ಅನಾಥ ಬಾಲಕಾಶ್ರಮ ಇಂದು ವಿಡೋಸ್ ಹೋಮ್ ಮತ್ತು ಮಹಿಳಾ ವಿಶ್ವವಿದ್ಯಾನಿಲಯ ಸ್ಥಾಪಿಸಿದ ಕರ್ವೆಯವರು ಅಷ್ಟಕ್ಕೆ ತೃಪ್ತರಾಗಲಿಲ್ಲ. ಇವೆಲ್ಲವೂಗಳನ್ನು ಕಟ್ಟಿ ಬೆಳೆಸಿದ್ದು ಮಹಿಳೆಯರಿಗಾಗಿ ಕರ್ವೆಯವರ ಇನ್ನೊಂದು ಮಹಾದಾಶೆಯೆಂದರೆ ಮಹಿಳಾ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಬೇಕೆಂಬ ಮಹಾದಾಶೆಯಾಯಿತು. ಜಪಾನಿನ ಮಹಿಳಾ ವಿಶ್ವವಿದ್ಯಾನಿಲಯದ ಬಗ್ಗೆ ಲೇಖನ ಓದಿ ತಿಳಿದಿದ್ದ

ಕರ್ವೆಯವರು ಅದರಿಂದ ಪ್ರಭಾವಿತರಾದರು, ಮೆಟ್ರಿಕ್ ನಂತರ ಕಾಲೇಜು ಶಿಕ್ಷಣ ಮುಗಿಸಿದ ವಿದ್ಯಾರ್ಥಿನಿಯರು ಮುಂದೆಯು ಓದುವಂತಹ ಅವಕಾಶ ಬೇಕೆಂಬು ಬಯಸಿದರು. ಅದನ್ನು ಮಾತೃ ಭಾಷೆಯಲ್ಲಿಯೇ ನೀಡಬೇಕೆಂದು ಆಲೋಚಿಸಿದರು. ಆ ವೇಳೆಗೆ ರಾನಡೆಯವರಿಂದ ರಾಷ್ಟ್ರೀಯ ಮಹಿಳಾ ಸಮಾಜ ಸೇವಾ ಸಮ್ಮೇಳನ ಕೂಡಾ ನಡೆಯುತ್ತಿತ್ತು. ಈ ಸಮ್ಮೇಳನದಲ್ಲಿ ಕರ್ವೆಯವರು ಪ್ರಸ್ತಾಪಿಸಿದ ವಿಷಯವೇನೆಂದರೆ ಜಪಾನಿನ ಮಹಿಳಾ ವಿಶ್ವವಿದ್ಯಾನಿಲಯದ ಕಾರ್ಯವೈಖರಿಯನ್ನು ಕುರಿತಾಗಿತ್ತು. ಅದೇಂದರೆ ಜಪಾನಿನ ಮಹಿಳಾ ವಿಶ್ವವಿದ್ಯಾನಿಲಯದ ಧ್ಯೇಯವೆಂದರೆ ಜಪಾನಿ ಮಹಿಳೆಯರು ಪುರುಷರ ಸರಿಸಮಾನರಾಗಿ ಬರಬೇಕೆಂಬುವುದಾಗಿತ್ತು. ಮದುವೆಯಾಗುತ್ತೇನೆ ಎನ್ನುವ ಮಹಿಳೆ ತನ್ನ ಮನೆ ಕಟ್ಟಿ ಮಕ್ಕಳ ಪೋಷಣೆಗೆ ಸರಿಯಾದ ಜ್ಞಾನ ಹೇಳಿ ಕೊಡುವುದು. ಮದುವೆಯಾಗುವುದಿಲ್ಲ ಎಂದು ನಿರ್ಧರಿಸುವ ಇನ್ನು ಹೆಚ್ಚಿನ ತರಬೇತಿ ಕೊಟ್ಟು ಅವರನ್ನು ರಾಷ್ಟ್ರ ನಿರ್ಮಾಣ ಕಾರ್ಯದಲ್ಲಿ ತೊಡಗಿಸಿ ಕೊಡುವುದು ಪುರುಷನಿಗೆ ದೊರೆಯುವಷ್ಟೆ ಮಹಿಳೆಯರಿಗೆ ಅವಕಾಶಗಳನ್ನು ಕಲ್ಪಿಸಿಕೊಡುವುದಾಗಿತ್ತು. ಈ ಬಗೆಯ ಜಪಾನಿಯರ ವಿಚಾರಧಾರೆಯನ್ನು ಕರ್ವೆಯವರು ತಮ್ಮ ಭಾಷಣದಲ್ಲಿ ಪ್ರಸ್ತಾಪಿಸಿದ್ದಲ್ಲದೇ ತಮ್ಮ ದೇಶದಲ್ಲಿಯೂ ಇದೇ ಆದರ್ಶವನ್ನು ಇಟ್ಟುಕೊಂಡು ಮಹಿಳಾ ವಿಶ್ವವಿದ್ಯಾನಿಲಯ ಸ್ಥಾಪಿಸಬೇಕೆಂಬ ದೃಢ ಸಂಕಲ್ಪ ಮಾಡಿದರು.

ಕರ್ವೆಯವರ ಆಲೋಚನೆ ಡಾ॥ಅನಿಬೆಸೆಂಟ್‌ರಿಂದ, ರವೀಂದ್ರನಾಥ್ ಟ್ಯಾಗೂರ್ ಮತ್ತು ಗಾಂಧೀಜಿಯವರಿಂದ ಪ್ರೋತ್ಸಾಹ ದೊರೆಯಿತು. ಪರಿಣಾಮವಾಗಿ ಡಾ॥ಆರ್.ಜಿ.ಭಂಡಾರ್‌ಕರ್ ರವರನ್ನು ಕುಲಪತಿಯನ್ನಾಗಿಯೂ, ಪರಾಂಜಪೆಯವರನ್ನು ಉಪಕುಲಪತಿಯ ಸ್ಥಾನಕ್ಕೆ ನೇಮಿಸಿ ೧೯೧೬ರಂದು ಹೊಸ ಮಹಿಳಾ ವಿಶ್ವವಿದ್ಯಾನಿಲಯವನ್ನು ಪುಣೆಯಲ್ಲಿ ಸ್ಥಾಪಿಸಲಾಯಿತು.

ಭಾರತೀಯ ಮಹಿಳೆಯರ ಸಾಮಾಜಿಕ ಮತ್ತು ಶೈಕ್ಷಣಿಕ ಕ್ಷೇತ್ರದಲ್ಲಿ ಅದ್ಭುತ ಸುಧಾರಣೆ ತಂದ ಕರ್ವೆಯವರು ಮಹಿಳೆಯರ ಜೀವನಕ್ಕೆ ಹೊಸ ಭವಿಷ್ಯತ್ವ ಕಲ್ಪಿಸಿದರು. ಅಲ್ಲದೇ ಮಹಿಳೆಯರಿಗಾಗಿ ಬದುಕಿ ಬದುಕು ನೀಡಿದರು. ೧೦೦೪ ವರ್ಷಗಳ ತಮ್ಮ ಧೀರ್ಘ ಆಯಸ್ಸಿನಲ್ಲಿ ಸ್ತ್ರೀ ಕಲ್ಯಾಣಕ್ಕಾಗಿಯೇ ಹೆಚ್ಚಾಗಿ ಶ್ರಮಿಸಿದರು.

ಹೆಣ್ಣಿನ ಗುಲಾಮಗಿರಿಯು ತಮ್ಮ ಸಾಮಾಜಿಕ ವ್ಯವಸ್ಥೆ ಮತ್ತು ರಚನೆಗಳಲ್ಲಿ ಸೇರಿ ಹೋಗಿವೆ. ಆದ್ದರಿಂದ ಸ್ತ್ರೀ ವಿಮೋಚನೆ ಎಂಬುದು ಸಾಮಾಜಿಕ ಪುನರ್ ರಚನೆ ಮತ್ತು ಪರಿವರ್ತನೆಯಿಂದ ಮಾತ್ರ ಸಾಧ್ಯವಾಗುವುದು. ಮಹಿಳೆಯರ ಪುನಶ್ಚೇತನಕ್ಕಾಗಿ ಅಭ್ಯುದ್ಯಯಕ್ಕಾಗಿ ಜೀವನಪರ್ಯಂತ ಹೋರಾಡಿದ ಮಹತ್ವ ಕರ್ವೆಯವರದು.

## [illegible] ಮಹಿಳೆಯರು

ರಾಷ್ಟ್ರದ ಪುನರುಜ್ಜೀವನ ಹಾಗೂ ನವೋದಯದ ಸುಧಾರಣಾ ನೆಲೆಯಿಂದ ಮಹಿಳೆಯರನ್ನು ಸಂಘಟಿಸಿ ಅವರ ಹಕ್ಕುಗಳ ಸಾಧನೆ ಮತ್ತು ಸ್ವಾತಂತ್ರ್ಯದ ಸಾಧನೆಗಳನ್ನು ಒಟ್ಟೊಟ್ಟಿಗೆ ಸಾಧಿಸುವ ಮಹತ್ ಕಾರ್ಯ ಮಾಡಿದವರು ಮಹಾತ್ಮ ಗಾಂಧೀಜಿಯವರು. ಸ್ತ್ರೀ ಪರ ಹೋರಾಟದಲ್ಲಿಯೂ ಅಗ್ರಮಾನ್ಯರಾಗಿ ಕಾಣುತ್ತಾರೆ.

ಭಾರತ ಸ್ವಾತಂತ್ರ್ಯ ಹೋರಾಟದಲ್ಲಿ ಸ್ತ್ರೀ ಶಕ್ತಿಯನ್ನು ಸಂಘಟಿಸಿದಲ್ಲದೇ, ತಮ್ಮ ಹಿತರಕ್ಷಣೆಯ ಹೋರಾಟಕ್ಕೆ ಮಹಿಳೆಯವರನು ಸಂಘಟಿಸಿದ ಕೀರ್ತಿ ಗಾಂಧೀಜಿಯವರದು. ದಕ್ಷಿಣ ಆಫ್ರಿಕೆಯಲ್ಲಿ ಪ್ರಯೋಗ ಮಾಡಿ ಅಹಿಂಸಾತ್ಮಕ ಹೋರಾಟಕ್ಕೆ ಸಂಘಟಿಸಿದ್ದ ಗಾಂಧೀಜಿ ಭಾರತೀಯರ ಮನಸ್ಸು – ಮನಸ್ಸುಗಳನ್ನು ಅರ್ಥ ಮಾಡಿಕೊಂಡರು. ಗಾಂಧೀಜಿಯವರ ಮೊದಲ ಆಸೆ ದೇಶವನ್ನು ಸ್ವತಂತ್ರಗೊಳಿಸುವುದಾಗಿತ್ತು. ಗಾಂಧೀಜಿಯವರಿಗೆ ಸ್ತ್ರೀಯರ ಸಮಸ್ಯೆಗಳ ಪರ ಹೋರಾಟವು ಎರಡನೇ ಆದ್ಯತೆಯಾಯಿತು. ಏಕೆಂದರೆ ಸಮಸ್ತರನ್ನು ಗಮನದಲ್ಲಿಟ್ಟುಕೊಂಡು ತಾವೇ ಸಂತಾನತೆ, ಸರ್ವೋದಯದ ನೆಲೆಯಲ್ಲಿ ಮಹಿಳೆಯರನ್ನು ಅಹಿಂಸಾತ್ಮಕ ಹೋರಾಟಕ್ಕೆ ಸಿದ್ದಗೊಳಿಸಿದರು. ದಮನಕ್ಕೊಳಗಾದ ಭಾರತೀಯ ಮಹಿಳೆಯರಿಗೆ ಸೀತೆ, ದಮಯಂತಿ ಹಾಗೂ ದ್ರೌಪದಿಯರು ಆದರ್ಶ ಹಾಗೂ ಸ್ಫೂರ್ತಿಯಾಗಬೇಕೆಂದು ಗಾಂಧೀಜಿಯವರು ಹೇಳುತ್ತಿದ್ದರು.

ಗಾಂಧೀಜಿಯವರು ಮಹಿಳೆಯರ ವಿಷಯದಲ್ಲಿ ಒಂದು ರೀತಿಯ ಸಮನ್ವಯ ಸಿದ್ಧಾಂತ, ಸಾಮಾಜಿಕ ನೀತಿ ನಿಯಮಗಳನ್ನು ಮಹಿಳೆಯರ ಮೇಲೆ ಬಲತ್ಕಾರವಾಗಿ ಏರದೇ ಪರಸ್ಪರ ಸಮಾಲೋಚನೆ ಮತ್ತು ಸಹಕಾರದಿಂದ ಪ್ರೀತಿಸಬೇಕೆಂದು ಹೇಳುವ ಗಾಂಧೀಜಿ ಸ್ತ್ರೀಯರಿಗೆ ನ್ಯಾಯ ದೊರಕಬೇಕಾದರೆ ಶಾಸ್ತ್ರ ಗ್ರಂಥಗಳನ್ನು ಪುನರ್ ಪರಿಷ್ಕರಿಸಬೇಕು. ಮಹಿಳೆಯರ ಘನತೆ, ಗೌರವ, ಹಕ್ಕು ಭಾದ್ಯತೆಗಳಿಗೆ ವಿರುದ್ಧವಾಗಿರುವ ಎಲ್ಲಾ ಧರ್ಮಗಳನ್ನು ನಿಷೇಧಿಸಬೇಕೆಂದು ಕರೆ ಇಟ್ಟರು. "ಗಂಡಸು ಹೆಂಗಸರನ್ನು ತನ್ನ ಸಾಧನವೆಂದು ಬಗೆದಿದ್ದಾನೆ. ಹೆಂಗಸು ಕೂಡಾ ಗಂಡಸಿನ ಸಾಧನವಾಗಲು ಕಲಿತ್ತಿದ್ದಾಳೆ. ಹೀಗೆ ಆಗುವುದೇ ಸುಲಭ ಮತ್ತು ಆನಂದದಾಯಕವೆಂದು ಕಂಡು ಕೊಂಡಿದ್ದಾರೆ". ಸ್ತ್ರೀಯರು ಸಹ ಪುರುಷರ ಗೊಂಬೆಗಳಂತೆ ರೂಪುಗೊಳ್ಳುತ್ತಿರುವ ಬಗ್ಗೆ ವಿಷಾಧಿಸುತ್ತಾರೆ. ಗಂಡಸರಿಗೆ ತಾಯಂದಿರಾದ ಇವರು ತಮ್ಮ ಏಳಿಗೆಗೆ ತಾವೇ ಹೋರಾಟ ಮಾಡಿ ಜಯಶೀಲರಾಗಬೇಕೆಂದು ಗಾಂಧೀಜಿಯವರ ಅಭಿಪ್ರಾಯವಾಗಿದೆ. ಸ್ತ್ರೀಯರು ತಾವು ಮದುವೆಯಾಗುವ ಪುರುಷರನ್ನು ತಾವೇ ಆಯ್ಕೆ ಮಾಡಿಕೊಳ್ಳಬೇಕು. ತಂದೆ ತಾಯಿ ತೋರಿಸುವ ಹುಡುಗನಿಂದ ತಾಳಿ ಕಟ್ಟಿಸಿಕೊಳ್ಳಬಾರದು ಎಂಬುವುದು ಅವರ ನಿಲುವಾಗಿತ್ತು. ಹೆಣ್ಣು ಹುಟ್ಟಿದ್ದೇ ಗಂಡಿನ ಆಟಿಕೆ ಎಂದು ತನ್ನ ಹಕ್ಕು

ಚಲಾಯಿಸುವ ಗಂಡಸಿನ ವಿರುದ್ಧ ಸಿಡಿದೇಳಬೇಕು. ಮಹಿಳೆಯರು ತಮ್ಮ ವೈಯುಕ್ತಿಕ ಸ್ವಾತಂತ್ರ್ಯ ಮತ್ತು ಗೌರವಗಳನ್ನು ಯಾವ ಗಂಡಸಿಗೂ ಕಡಿಮೆಯಿಲ್ಲದೆ ಅನುಭವಿಸಬೇಕು.

ವರದಕ್ಷಿಣೆ ಆಧಾರಿತ ವಿವಾಹವನ್ನು ಗಾಂಧೀಜಿಯವರು ಹೃದಯಹೀನವೆಂದು ಕರೆದುದ್ದಲ್ಲದೇ ಈ ವ್ಯವಸ್ಥೆ ತೊಲಗಬೇಕೆನ್ನುತ್ತಾರೆ. ಸ್ತ್ರೀಯರು ಕೇವಲ ತಮ್ಮ ಸಮಸ್ಯೆಗಳ ಬಗ್ಗೆ ಆಸಕ್ತಿ ಬಗ್ಗೆ ಒಟ್ಟು ಸಮಾಜದ ಪುನರ್ ನಿರ್ಮಾಣ ಕುರಿತು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಬೇಕು. ಇದಕ್ಕಾಗಿ ದೇಶದಲ್ಲಿರುವ ಕೇಲವೆ ಕೆಲವು ಸುಶಿಕ್ಷಿತ ಮಹಿಳೆಯರು ಬಯಲಿಗೆ ಬರಬೇಕು. ಆಗ ಮಹಿಳೆಯರ ಬಿಡುಗಡೆ, ಭಾರತದ ಸ್ವಾತಂತ್ರ್ಯ, ಅಸ್ಪೃಶ್ಯತೆ ನಿವಾರಣೆ ಜನಸಮೂಹದ ಆರ್ಥಿಕ ಅಭಿವೃದ್ಧಿ ಮುಂತಾದ ಸಮಸ್ಯೆಗಳು ನಿವಾರಿಸುತ್ತವೆ. ದರಿದ್ರರ ಹಾಗು ನತದೃಷ್ಟರ ಸೇವೆ ಮಾಡುವುದರ ಮೂಲಕ ಮಹಿಳೆಯರು 'ಕರುಣೆಯ ಸೋದರಿ' ಯಾಗಬೇಕೆಂದು ಕರೆ ಇಟ್ಟರು.

"ಹೊಸ ಸಮಾಜ ಶೋಷಣೆರಹಿತವಾದ ಅಹಿಂಸಾತ್ಮಕ ಸಮಾಜವಾಗಿರಬೇಕು, ಅಹಿಂಸಾತ್ಮಕ ಸಮಾಜದ ವ್ಯವಸ್ಥೆಯಲ್ಲಿ ಮಹಿಳೆಯರೇ ಭವಿಷ್ಯದ ನಿರ್ಮಾಪಕರಾಗಬೇಕೆಂಬುದು ಗಾಂಧೀಜಿಯವರ ಆಶಯವಾಗಿತ್ತು. ಭಾರತದ ಮಹಿಳೆಯರು ರಾಜಕೀಯ ಅಧಿಕಾರದಲ್ಲಿ ಸಮಾನವಾಗಿ ಪಾಲ್ಗೊಳ್ಳಬೇಕೆಂದು ಬಯಸಿದ್ದ ಗಾಂಧೀಜಿ ಸ್ವತಂತ್ರ ಭಾರತ ರಾಷ್ಟ್ರಪತಿ ಸ್ಥಾನಕ್ಕೆ ಹರಿಜನ ಮಹಿಳೆಯ ಆಯ್ಕೆಯಾಗಬೇಕೆಂದು ಒತ್ತಾಯಿಸಿದರು. ಸ್ವತಂತ್ರ ಕಳೆದು ೬೦ ವರ್ಷ ಕಳೆದರೂ ಈವರೆಗೆ ಗಾಂಧೀಜಿಯವರ ಬಯಕೆ ಈಡೇರಿಲ್ಲ.

ನೂಲುವುದು ಮತ್ತು ನೇಯುವುದರ ಮೂಲಕ ಆರ್ಥಿಕ ಸ್ವಾವಲಂಬನೆ ರಾಷ್ಟ್ರೀಯ ಮನೋಭಾವನೆ ಸಾಧ್ಯವಾಗುತ್ತದೆ. ಆದ್ದರಿಂದ ಮಧ್ಯಮ ವರ್ಗದ ಮಹಿಳೆಯರಿಗೆ ಚರಕವೂ ಕುಟುಂಬದ ಆದಾಯಕ್ಕೆ ಪೂರಕವಾದರೆ ಬಡ ಮಹಿಳೆಯರಿಗೆ ಅದು ಜೀವನೋಪಾಯ. ನೂಲುವ ಚಕ್ರವು ವಿಧವೆಯ ಪ್ರೀತಿಪೂರ್ವ ಸಂಗಾತಿ ಸುಶಿಕ್ಷಿತ ಮಹಿಳೆಯರಿಗೆ ನೂಲು ತೆಗೆಯುವುದು ಒಂದು ಧಾರ್ಮಿಕ ಕರ್ತವ್ಯವೆಂದು ಗಾಂಧೀಜಿಯವರು ಕರ್ತವ್ಯವೆಂದು ಕರೆಕೊಟ್ಟರು. ಇದು ಭಾರತದ ಅಹಿಂಸಾತ್ಮಕ ಸ್ವಾತಂತ್ರ್ಯದ ಆಂದೋಲನಕ್ಕೆ ಮಹಿಳೆಯರನ್ನು ಸಂಘಟಿಸಲು ಇದು ಸಹಕಾರಿಯಾಯಿತು.

೧೯೩೩ರಲ್ಲಿ ಗಾಂಧೀಜಿಯವರು ಮಹಿಳಾ ಸಭೆಗಳನ್ನು ಉದ್ದೇಶಿಸಿ ನೀವು ತೊಡುವ ಎಲ್ಲಾ ಆಭರಣವನ್ನು ಕೊಡಿ ಎಂದು ಮನವಿ ಮಾಡಿಕೊಳ್ಳುತ್ತಿದ್ದರು, ಹೆಣ್ಣು ಮಕ್ಕಳು, ಯುವತಿಯರು ಮತ್ತು ಮುದುಕಿಯರಿಂದ ಪಡೆದ ಚಿನ್ನ ಮತ್ತು ಬೆಳ್ಳಿ ಆಭರಣಗಳನ್ನು ಹರಿಜನೋದ್ಧಾರ ಮತ್ತು ಸ್ವದೇಶಿ ಆಂದೋಲನಕ್ಕಾಗಿ ವಿನಿಯೋಗಿಸುತ್ತಿದ್ದರು.

ಬ್ರಿಟಿಷ್ ಉಕ್ಕಿನ ಮೇಲೆ ಏರಿದ್ದ ಕರವನ್ನು ವಿರೋದಿಸಿ, ಕಸ್ತೂರಿ ಬಾ ಸಬರಮತಿ ಆಶ್ರಮದ ೩೩ ಮಹಿಳಾ ಸ್ವಯಂ ಸೇವಕರೊಂದಿಗೆ ಸತ್ಯಾಗ್ರಹ ಹೂಡಿದರು. ಸರೋಜಿನಿನಾಯ್ಡು ತಮ್ಮ ಮಣಿಲಾಲ್ ಗಾಂಧೀಜಿಯವರೊಂದಿಗೆ ಸೇರಿಕೊಂಡರು. ಉಪ್ಪಿನ ಕಾಯ್ದೆಗಳನ್ನು ಮುರಿಯುವಲ್ಲಿ ಮಹಿಳಾ ಸಂಘಟನೆಗಳು ಸಕ್ರಿಯ ಪಾತ್ರ ವಹಿಸಿದವು. ಮಹಿಳಾ ಸ್ವಯಂ ಉಪ್ಪು ತಯಾರಿಸಲೆಂದು ಔಪಾಟಿ ಕಡಲ ಕಿನಾರೆಯಿಂದ ಲೋಟಗಳಲ್ಲಿ ಸಮುದ್ರದ ನೀರು ಕೊಂಡೊಯ್ಯುತ್ತಿದ್ದರು. ಹೀಗೆ ದಂಡು ಉಪ್ಪಿನ ಸತ್ಯಾಗ್ರಹ ಹಾಗೂ ಅಸಹಕಾರ ಆಂದೋಲನಗಳು ಹೆಚ್ಚು ಹೆಚ್ಚು ಮಹಿಳೆಯರ ತೊಡಗುವಿಕೆಯನ್ನು ಉತ್ತೇಜಿಸಿದವು.

ಸ್ವತಂತ್ರಕ್ಕಾಗಿ ಗಂಡಸರಷ್ಟೇ ಸರಿಸಮನಾಗಿ ಹೆಂಗಸರು ಹೋರಾಟ ಮಾಡಬಲ್ಲರೆಂದು ಗಾಂಧೀಜಿ ಹೆಂಗಸರನ್ನು ಸ್ವತಂತ್ರ ಆಂದೋಲನಗಳಲ್ಲಿ ಪಾಲ್ಗೋಳ್ಳುವಂತೆ ಉತ್ತೇಜಿಸಿದರು. ಮಧ್ಯ ಮತ್ತು ವಿದೇಶಿ ವಸ್ತುಗಳ ಬಹಿಷ್ಕಾರದಲ್ಲಿ ಹೆಚ್ಚು ಜನ ಮಹಿಳೆಯರು ಪಾಲ್ಗೊಂಡರು. ಅಲ್ಲದೇ ಮುಸ್ಲಿಂ ಸೋದರರು ತಮ್ಮ ಬುರ್ಕಾ ಸರಿಸಿ ಪುರುಷರೊಂದಿಗೆ ಮಾತಾಡುವಂತಾಯಿತು. ಸ್ತ್ರೀಪುರುಷರ ನಡುವೆ ಇದ್ದ ಅಸಮಾನತೆ ಕಡಿಮೆಯಾಗುತ್ತಾ ಬಂದು ಮಹಿಳೆಯರು ಸಾಮಾಜಿಕ ಕಾರ್ಯಕರ್ತರಾಗಿ ರಾಷ್ಟ್ರ ಸ್ವಾತಂತ್ರಕ್ಕಾಗಿ ಹೋರಾಡುವ ಪರಿಸರ ನಿರ್ಮಾಣವಾಯಿತು. ಕಮಲಾದೇವಿ, ಮೀರಾಬೆನ್, ವಿಜಯಲಕ್ಷ್ಮಿ ಪಂಡಿತ್, ಸರೋಜಿನಿನಾಯ್ಡು ಮುಂತಾದ ಮಹಿಳೆಯರು ಸ್ವತಂತ್ರ ಆಂದೋಲನದ ಮುಂಚೂಣಿ ನಾಯಕರಾದರು.

## ಸ್ತ್ರಿ ಸಮಾನತೆಯ ಶಾಸನಕಾರ

## ಡಾ॥ ಬಾಬಾ ಸಾಹೇಬ್ ಅಂಬೇಡ್ಕರ್

ಮಹಿಳೆಯರನ್ನು ಪುರುಷನ ಸಮಾನ ಸ್ಥಾನದಲ್ಲಿ ಸ್ಥಾಪಿಸುವ ಕೆಲಸವನ್ನು ಅನೇಕ ಸಮಾಜ ಸುಧಾರಕರು ಮಾಡಿದ್ದಾರೆ. ಅವರಲ್ಲಿ ಸ್ತ್ರೀ ಸಮಾನತೆಗಾಗಿ ಕಾನೂನು ರಚಿಸಿ ಸಂವಿಧಾನಾತ್ಮಕ ನೆಲಡಗಟ್ಟಿನಲ್ಲಿ ಸ್ವತಂತ್ರ ಭಾರತದ ಸ್ತ್ರೀ ಸ್ವಾತಂತ್ರ್ಯವನ್ನು ಎತ್ತಿ ಹಿಡಿದು ಮನುಷ್ಯನ ಸಮಾನತೆ ಮೆರೆದ ಕೀರ್ತಿ ಡಾ॥ಬಾಬಾ ಸಾಹೇಬ್ ಅಂಬೇಡ್ಕರ್‌ರವರಿಗೆ ಸಲ್ಲುತ್ತದೆ. ಮನುಷ್ಯನ ಹಕ್ಕುಗಳನ್ನು ಲಿಂಗಭೇದ ರಹಿತ ನೆಲೆಯಲ್ಲಿ ಶೋಧಿಸಿ ಅವರಿಗೆ ಸ್ತ್ರೀಯರ ಬಗೆಗಿದ್ದ ಮನುವಾದಿ ಚಿಂತಕರ ಧೋರಣೆಗಳನ್ನು ಕಾನೂನು ರಚನೆಯ ಮೂಲಕ ವಿರೋಧಿಸಿದವರು ಅಂಬೇಡ್ಕರ್‌ರವರು. ಅಂಬೇಡ್ಕರ್‌ರವರು ಭಾರತದಂತಹ ಜಾತಿ ಆಧಾರಿತ ಸಮಾಜದಲ್ಲಿ ಸ್ತ್ರೀ ವಿಮೋಚನೆಗೆ ಮಹಿಳಾ ಹಕ್ಕನ್ನು ಸ್ಥಾಪಿಸಲು ಲಿಂಗಬೇಧರಹಿತ ಸಮಾಜ ನಿರ್ಮಾಣದ ಕನಸ್ಸನ್ನು ಕಂಡರು. ಶತಶತಮಾನಗಳಿಂದಲೂ ಸ್ತ್ರೀಯರಿಗೆ ಆಗಿರುವ ಅನ್ಯಾಯಗಳನ್ನು ಸರಿಪಡಿಸಲು ಶಾಸನಾತ್ಮಕವಾಗಿ ಕಾನೂನನ್ನು ರಚಿಸುವ ಅವಶ್ಯಕತೆಯನ್ನು ಮನಗಂಡರು. ಅದರ ಪರಿಣಾಮವಾಗಿ ಸ್ವತಂತ್ರ ಭಾರತದಲ್ಲಿ ಸ್ತ್ರೀಯರ ರಕ್ಷಣೆ ಮತ್ತು ಸಮಾನತೆಗಾಗಿ

ಸಂವಿಧಾನಾತ್ಮಕ ನಿಯಮಗಳನ್ನು ರಚಿಸಿದರು. ಸ್ತ್ರೀ ಸಶಸ್ತ್ರೀಕರಣ ಮತ್ತು ಸಹಭಾಗಿತ್ವಕ್ಕೆ ಅನುವು ಮಾಡಿಕೊಡಲು ಮತ್ತು ಸಮಾನತೆ ಸಾಧಿಸಲು ಅಂಬೇಡ್ಕರರು ರಚಿಸಿದ ಕಾನೂನುಗಳೆಂದರೆ

೧) ಭಾರತದ ಸಂವಿಧಾನದ ಅನುಚ್ಛೇದ ೧೪ರಲ್ಲಿ ಭಾರತದ ಭೌಗೋಳಿಕ ಪ್ರದೇಶದಲ್ಲಿ ವಾಸವಿರುವ ಪ್ರತಿಯೊಬ್ಬ ಪ್ರಜೆಯು ಕಾನೂನಿನ ಮುಂದೆ ಸಮಾನ ಎಂದು ಘೋಷಿಸಿದೆ.

೨) ಅನುಚ್ಛೇದ ೧೫ರಲ್ಲಿ ಸರ್ಕಾರವು ಯಾವುದೆ ಪ್ರಜೆಯ ವಿರುದ್ಧ ಜಾತಿ, ಮತ. ಕುಲ, ಲಿಂಗ ಮತ್ತು ಹುಟ್ಟಿನ ಆಧಾರದ ಮೇಲೆ ತಾರತಮ್ಯ ನಡೆಯುವಂತಿಲ್ಲ ಎಂದಿದೆ.

೩) ಅನುಚ್ಛೇದ ೧೬ರಲ್ಲಿ ಲಿಂಗಭೇದ ಮತ್ತು ಲೈಂಗಿಕ ಶೋಷಣೆಯ ನಿಷೇಧವನ್ನು ಹೇಳಿದೆ ಮತ್ತು ಸರ್ಕಾರದ ಯಾವುದೇ ಕಛೇರಿಯ ಉದ್ಯೋಗಾವಕಾಶದ ವಿಷಯದಲ್ಲಿ ಸರ್ವರಿಗೂ ಸಮಾನ ಅವಕಾಶಗಳಿರಬೇಕೆಂದು ಹೇಳಿದೆ.

೪) ಅನುಚ್ಛೇದ ೪೨ರಲ್ಲಿ ಮಹಿಳೆಯರ ಸೇವೆಗೆ ಅಗತ್ಯವಾದ ನ್ಯಾಯೋಚಿತವಾದ ಮಾನವೀಯ ವಾತಾವರಣವನ್ನು ಕಲ್ಪಿಸಬೇಕು, ಮಹಿಳೆಗೆ ಪ್ರಸೂತಿ ಅಥವಾ ಹೆರಿಗೆ ಪರಿಹಾರಗಳನ್ನು ಒದಗಿಸಬೇಕಾದುದು ಸರ್ಕಾರದ ಕರ್ತವ್ಯವಾಗಿದೆ ಎಂದಿದೆ.

ಮೂಲಭೂತ ಹಕ್ಕುಗಳಾದ ಸಮಾನತೆ, ಸ್ವಾತಂತ್ರ್ಯ ಶೋಷಣೆ ವಿರುದ್ಧ ಧಾರ್ಮಿಕ ಸ್ವಾತಂತ್ರ್ಯ, ಸಾಂಸ್ಕೃತಿಕ ಹಾಗೂ ಶೈಕ್ಷಣಿಕ ಹಕ್ಕುಗಳನ್ನು ಸ್ತ್ರೀ ಪುರುಷರಿಬ್ಬರಿಗೂ ಸಮಾನವಾಗಿ ಸಂವಿಧಾನದಲ್ಲಿ ಅಂಬೇಡ್ಕರವರು ಕಲ್ಪಿಸಿಕೊಟ್ಟಿದ್ದಾರೆ.

ಹೀಗೆ ಅಂಬೇಡ್ಕರವರು ಮಹಿಳಾ ಸಮಾನತೆ ಮತ್ತು ಪ್ರಗತಿಗೆ ಕಲ್ಪಿಸಿಕೊಟ್ಟ ಆಧುನಿಕ ಕಾನೂನುಗಳು ಸನಾತನ ಮೂಲಭೂತವಾದಿಗಳು ಸ್ತ್ರೀಯರ ವಿಷಯದಲ್ಲಿ ಹೊಂದಿದ್ದ ಪ್ರತಿಗಾಮಿ ಧೋರಣೆಗಳಿಗೆ ತಡೆಗೋಡೆಯಾದವು ಇದರಿಂದ ಮಹಿಳೆ ತನ್ನ ಶಕ್ತಿ ಸಾಧ್ಯತೆಗಳನ್ನು ಎಲ್ಲಾ ಕ್ಷೇತ್ರಗಳಲ್ಲೂ ತೋರಿಸಲು ಸಾಧ್ಯವಾಯಿತು ಮಹಿಳಾ ಸಬಲೀಕರಣಕ್ಕೆ ಇಂಬು ದೊರೆಯಿತು.

ಪ್ರತಿಯೊಬ್ಬ ಸ್ತ್ರೀ-ಪುರುಷನನ್ನು ಶಾಸ್ತ್ರಗಳ ಗುಲಾಮಗಿರಿಯಿಂದ ಮುಕ್ತಗೊಳಿಸಿ ಶಾಸ್ತ್ರಾಧಾರಿತ ವಿನಾಶಕಾರಿ ಭಾವನೆಗಳನ್ನು ಅವರ ಮನಸ್ಸುಗಳಿಂದ ತೆಗೆದುಹಾಕಿ ಅವರ ಮನಸ್ಸುಗಳನ್ನು ಶುದ್ಧಗೊಳಿಸಿದಾಗ ಅವನಾಗಲಿ, ಅವಳಾಗಲಿ ಸಹ ಪಂಕ್ತಿ ಭೋಜನ & ಅಂತರಜಾತಿ ವಿವಾಹಕ್ಕೆ ಮುಂದಾಗುತ್ತಾರೆ ಎಂದು ಜಾತಿ ನಿರ್ಮೂಲನೇಯ ಎಲ್ಲಾ ಬಗೆಯ ಅಸಮಾನತೆಯ ಪರಿಹಾರವೆಂದು ಮಹಾನ್ ಮಾನವತಾವಾದಿ ದಾರ್ಶನಿಕ ಅಂಬೇಡ್ಕರವರು ಸೈದ್ಧಾಂತಿಕವಾಗಿ ನಿರೂಪಿಸಿದರು ಅಂಬೇಡ್ಕರವರ ಸ್ತ್ರೀವಾದಿ ಚಿಂತನೇಗಳು ಭಾರತೀಯ ಸ್ತ್ರೀವಾದಕ್ಕೆ ಒಂದು ಕೊಡುಗೆಯೇ ಸರಿ.

## ಮಹಿಳೆಯರನ್ನು ಕುರಿತ ಲೋಹಿಯ ಚಿಂತನೆ

ಡಾ॥ ರಮಾ ಮನೋಹರ ಲೋಹಿಯ ೧೯೧೦-೧೯೬೭ರ ಅವರ ಸ್ತ್ರೀ ಪರ ಚಿಂತನೆಗಳು ಅರ್ಥಪೂರ್ಣವು ಮನುಮುಖಿಯು ಆಗಿರುವುದರಿಂದ, ಲೋಹಿಯಾರರು ಸ್ತ್ರೀಯರನ್ನು ಪರಿಭಾವಿಸಿದ ಬಗೆಯನ್ನು ಇಲ್ಲಿ ಚರ್ಚಿಸಲಾಗಿದೆ.

"ಜಾತಿ ಮತ್ತು ಸ್ತ್ರೀಯರ ಪ್ರತ್ಯೇಕಗಳು ತಮ್ಮ ಚೇತನದ ಅದೋಗತಿಗೆ ಮೂಲ ಕಾರಣವೆಂದು ಸಂಪೂರ್ಣವಾಗಿ ಮನವರಿಕೆಯಾಗಿದೆ. ಈ ಎರಡು ಪ್ರತ್ಯೇಕತೆಗಳು ಎಲ್ಲಾ ಸಾಹಸ ಹಾಗೂ ಉತ್ಸಾಹಗಳನ್ನು ಕೊಲೆ ಮಾಡುವಷ್ಟು ಭಯಂಕರವಾಗಿದೆ ಎಂದು ಲೋಹಿ ಅಭಿಪ್ರಾಯಪಡುತ್ತಾರೆ." ಪ್ರತ್ಯೇಕತೆಯ ವಿರುದ್ಧ ಹೋರಾಡುವುದು ನಮ್ಮ ಜರೂರಿನ ಕೆಲಸವಾಗಿದೆ. ಶತಶತಮಾನಗಳ ಅನ್ಯಾಯವನ್ನು ತನ್ನ ಅಸಮಾನತೆಯನ್ನು ಜಾತಿಯ ಪ್ರತ್ಯೇಕತೆ, ಸ್ತ್ರೀಯರ ಪ್ರತ್ಯೇಕತೆಯನ್ನು ಶತಚ್ಛಿತ್ರಗೊಳಿಸಿ ಬಲಿ ಹಾಕುವುದಕ್ಕಿಂತ ಪವಿತ್ರ ಕಾರ್ಯ ಬೇರೊಂದಿಲ್ಲ ಎಂಬುದು ಲೋಹಿಯಾರವರ ಸದಾಭಿಪ್ರಾಯ. ಸ್ತ್ರೀ ಪುರುಷರ ಸಂಬಂಧಗಳು ಅತ್ಯಂತ ಸೂಕ್ಷ್ಮ ತರವಾಗಿದ್ದು ಯಾವ ಜನರು ಸಮಷ್ಠ ಪ್ರಶ್ನೆಯಲ್ಲಿ ಕಾರ್ಯಶೀಲವಾಗುವುದು ಅಗತ್ಯವಾಗಿದೆ.

ಶೂದ್ರ ಮತ್ತು ಬ್ರಾಹ್ಮಣರ ನಡುವಿನ ಅಂತರ್ಜಾತಿಯ ವಿವಾಹಗಳು ಇತರ ಯೋಗ್ಯತೆಗಳ ಜೊತೆಗೆ ಒಂದು ಮುಖ್ಯ ಯೋಗ್ಯತೆಯಾಗಿ ಮಿಲಿಟರಿ ಹಾಗೂ ಸರ್ಕಾರಿ ಹುದ್ದೆಗಳ ಆಯ್ಕೆಯಲ್ಲಿ ಪರಿಗಣಿಸಲ್ಪಡಬೇಕು. ಸ್ತ್ರೀ ಪುರುಷರ ಸಂಬಂಧಗಳಲ್ಲಿ ಸ್ವಪ್ರೇರಿತ ಪ್ರಾಮಾಣಿಕತೆಯು ಸರಿಯಾದ ಆದರ್ಶವೆಂದು ನಾನು ಬಗೆಯುತ್ತೇನೆ. ಮದುವೆಗೆ ಸಂಬಂಧಿಸಿದ ಮತ್ತು ಮದುವೆಯ ಅನಂತರದ ವಾತಾವರಣವು ಅತ್ಯಂತ ಪಾಪಮಯವಾದುದು. ವರದಕ್ಷಿಣೆ ಇಲ್ಲದ ವಧು ಇಂದು ಲೆಕ್ಕಕ್ಕಿಲ್ಲ ಅವುಗಳು ಹಸುವಿನಂತೆ ಲೈಂಗಿಕ ವಿಷಯಗಳಲ್ಲಿನ ಕೊಳಕುತನದಿಂದ ಅಸಹ್ಯವಾಗಿಬಿಟ್ಟಿದೆ ಎಂದು ಲೋಹಿಯ ಹೇಳುತ್ತಾರೆ. ಸ್ತ್ರೀ ವಿಮೋಚನೆ, ವಿಷಯದಲ್ಲಿ ಉದ್ಯೋಗ ಮತ್ತು ಅಂತರ್ ಜಾತಿಯ ವಿವಾಹಗಳ ಮೂಲಕ ಅಸಮಾನತೆ ನಿವಾರಣೆಯನ್ನು ಸೂಚಿಸುತ್ತಾರೆ. ಲೂಹಿಯವರ ಸಪ್ತಕ್ರಾಂತಿ ಸಾಮಾಜಿಕ ಹೋರಾಟಗಳು ಹೀಗಿವೆ.

೧) ಸ್ತ್ರೀ ಪುರುಷರ ಸಮಾನತೆ ಸಾಧಿಸುವುದು.

೨) ವರ್ಣಬೇಧವನ್ನು ಅನುಸರಿಸಿದ ಅಸಮಾನತೆಯ ನಾಶ.

೩) ಹಿಟ್ಟಿನ ಆಧಾರವನ್ನು ಅನುಸರಿಸುವ ಅಸಮಾನತೆಯ ನಿವಾರಣೆ.

೪) ವಿದೇಶಿ ದಬ್ಬಾಳಿಕೆಯ ಅಂತ್ಯ. ಹಾಗೂ ವಿಶ್ವ ಸರ್ಕಾರದ ಸ್ಥಾಪನೆ.

೫) ವ್ಯಕ್ತಿಗತ ಸಂಪತ್ತಿನಿಂದ ಉದ್ಭವಿಸುವ ಆರ್ಥಿಕ ಅಸಮಾನತೆಯ ನಾಶ ಹಾಗೂ ಸಮಾನತೆಯ ಸಾಧನೆ.

೬) ಶಸ್ತ್ರಾಸ್ತ್ರಗಳ ಬಯಕೆಯ ಮೇಲಿನ ಹತೋಟಿ.

೭) ವ್ಯಯಕ್ತಿಕ ಸ್ವಾತಂತ್ರ್ಯದ ಮೇಲೆ ಹಾಕುವ ಅತಿಕ್ರಮಣದ ವಿರುದ್ಧ ಹೋರಾಟ.

ಮುಂತಾದ ಸಂಗತಿಗಳ ಬಗ್ಗೆ ಲೋಹಿಯಾರವರಿಗೆ ಹೆಚ್ಚಿನ ಒಲವಿತ್ತು. ಅದರಲ್ಲೂ ಮುಖ್ಯವಾಗಿ ವರ್ಗ ವರ್ಣ, ಜಾತಿ, ಲಿಂಗಭೇದ ಅಸ್ಪೃಶ್ಯತೆ ಮತ್ತು ಎಲ್ಲಾ ಬಗೆಯ ಕೀಳರಿಮೆಗಳ ವಿರುದ್ಧ ಲೋಹಿಯ ತಾತ್ವಿಕ ಹೋರಾಟ ನಡೆಸಿದರು. ಈ ಎಲ್ಲದರ ಹಿಂದೆ ಸ್ತ್ರೀ ಪರುಷ ಸಮಾನತೆಯ ಆಶ್ರಯ ಲೋಹಿಯವರಿಗೆ ಇರುವುದು ಹೆಚ್ಚು ಸ್ಪಷ್ಟವಾಗುತ್ತದೆ. ಸ್ತ್ರೀ ಪುರುಷರ ಅಸಮಾನತೆ ನೈಸರ್ಗಿಕವಲ್ಲ, ಅದು ಮನುಷ್ಯ ನಿರ್ಮಿತ, ಅದನ್ನು ಹೋಗಲಾಡಿಸಲು ಬೇಕಾದವರು ಮನುಷ್ಯರು. ಸಾಂಸ್ಕೃತಿಕ ಹಿನ್ನಲೆಯಲ್ಲಿ ರೂಪುಗೊಂಡಿರುವ ಪುರಷ ಲಾಭಕ್ಕಾಗಿ ಸ್ತ್ರೀಯರ ಮೇಲೆ ಹೇರಿರುವ ಇಂತಹ ಅವೈಜ್ಞಾನಿಕ ಮನೋಭಾವವನ್ನು ಪರಿಷ್ಕರಿಸಿ ಹೆಣ್ಣು ಗಂಡಿನ ಸ್ವಾಮ್ಯವನ್ನು ಸಾಧಿಸಬೇಕಿದೆ. ಹಾಗೆಂದು ಮಹಿಳೆಯರು ಸುಮ್ಮನೆ ಇರಬೇಕಿಲ್ಲ. ಧೈರ್ಯ, ಸಾಹಸ, ಆಕ್ರಮಣಶೀಲತೆ, ಪೂಜ್ಯತೆಗಳೆಲ್ಲಾ ಪುರುಷನಿಗೆ ಶಾಂತಿ ಸಂಯಮ, ವಿಧೇಯತೆ, ಪೋಷಕ ಭಾವನೆ, ಅಚಲತೆಗಳೆಲ್ಲಾ ಹೆಣ್ಣುಗಳ ಗುಣಗಳೆಂದು ಸ್ವಂತ ಹೆಂಗಸರೇ ನಂಬಿ ಕುಳಿತರೇ ಅಸಮಾನತೆ ಸಮಾಜದಲ್ಲಿ ಶಾಶ್ವತವಾಗಿ ಬೇರೂರಲು ಸ್ತ್ರೀಯರು ಕಾಣಿಕೆ ಸಲ್ಲಿಸಿದಂತಾಗುತ್ತದೆ. ಸ್ತ್ರೀ ಪುರುಷರ ನಡುವೆ ಜೈವಿಕ ವ್ಯತ್ಯಾಸಗಳಿವೆ ನಿಜ.ಆದರೆ ಯಾವುದೇ ಹೆಚ್ಚುಗಾರಿಕೆಗಳಲ್ಲಿ, ಹೆಣ್ಣು ಗಂಡಿನ ದೈಹಿಕ ಭಿನ್ನತೆಯನ್ನು ಅಪೌರುಷೆಯ ಎಂದು ಭಾವಿಸಬಾರದು.ಅಸಮಾನತೆ ವ್ಯವಸ್ಥೆಯ ವಿರುದ್ಧ ಪರಸ್ಪರ ಕೂಡಿಯೆ ಪ್ರತಿಭಟಿಸಬೇಕು.

೧) ದಿನಾಂಕ ೨೧-೦೩-೧೯೬೧ರಿಂದ ೨-೦೪-೧೯೬೧ರವರೆಗೆ ಪಾಟ್ನಾದಲ್ಲಿ ನಡೆದ ಅಖಿಲ ಭಾರತ ಜಾತಿ ವಿನಾಶ ಸಮ್ಮೇಳನದಲ್ಲಿ ಮಂಡಿಡಸಿದ ಗೊತ್ತುವಳಿಗಳೆನಿಸುತ್ತವೆ. ಲೋಹಿಯ ಜಾತಿ ವಿನಾಶದ ಮೂಲಕವೇ ಸ್ತ್ರೀ ವಿಮೋಚನೆಯನ್ನು ಹೇಳುತ್ತಾರೆ. ಅಂತರ್‌ಜಾತಿಯ ಮದುವೆಗಳು ಸಾಮಾನ್ಯವಾದ ನಂತರವೇ ಜಾತಿ ಪದ್ದತಿಯ ನಿರ್ಮೂಲನೆ ಸಾಧ್ಯವೆಂದು ಸಮ್ಮೇಳನ ಅಭಿಪ್ರಾಯ ಪಡುತ್ತವೆ. ಎಲ್ಲಿಯೇ ಅಂತರ್‌ಜಾತಿಯ ವಿವಾಹಗಳು ನಡೆದರೂ ಅವುಗಳಿಗೆ ಸಂಪೂರ್ಣ ಬೆಂಬಲ ನೀಡಲು ಸಮ್ಮೇಳನ ಮನವಿ ಮಾಡಿಕೊಳ್ಳುತ್ತದೆ.

೨) ಸರ್ಕಾರಿ ನೌಕರರಿಗೆ ಅಂತರ್‌ಜಾತಿ ವಿವಾಹ ಕಾನೂನುಗಳನ್ನು ಅನ್ವಯಿಸುವ ಹಕ್ಕು ಸರ್ಕಾರಕ್ಕಿದೆ ಎನ್ನುವುದು ಸಮ್ಮೇಳನದ ಅಭಿಪ್ರಾಯ. ತಮ್ಮ ಜಾತಿಯ ಹೊರಗಡೆ ಮದುವೆ ಮಾಡಿಕೊಳ್ಳುವವರಿಗೆ ಮಾತ್ರ ಸರ್ಕಾರಿ ನೌಕರಿಗಳನ್ನು ನೀಡಬೇಕೆಂದು ಸಮ್ಮೇಳನ ಬೇಡಿಕೆ ಮಂಡಿಸುತ್ತದೆ. ಇಲ್ಲಿ ಜಾತಿಯ ಹೊರಗಿನ ಮದುವೆ ಎಂದರೆ ಶೂದ್ರ ಮತ್ತು ದ್ವಿಜ ಅಥವಾ ಸಯಾದ್ ಮತ್ತು ಜುಲಹಗಳ ನಡುವಿನ ಮದುವೆಗಳು. ಮೇಲು ಜಾತಿಯೊಳಗಿನ ಬೇರೆ ಬೇರೆ ಬಿಳಿ ಜಾತಿಗಳ ನಡುವಿನ ಮದುವೆಗಳಲ್ಲ.

೩) ಸ್ತ್ರೀಯರ ಹಕ್ಕುಗಳಿಗಾಗಿ ಹೋರಾಡಲು ಗಂಡು ಹೆಣ್ಣಿನ ಮಧ್ಯೆ ಹೆಚ್ಚಿನ ಸಮಾನತೆ ತರಲು ಅನುಗುಣವಾಗುವಂತೆ ಮದುವೆ, ಆಸ್ತಿಯ ಪಾಲಿಗೆ ಸಂಬಂಧಿಸಿದಂತೆ ಸಮಸ್ಯೆಗಳ ಮೇಲೆ ಗೊತ್ತುವಳಿಗಳನ್ನು ಸಮರ್ಪಿಸುತ್ತಾ ಸಮ್ಮೇಳನ ಕುಡಿಯಲು ಸ್ವಚ್ಛ ನೀರಿನ ಪೂರೈಕೆ ಮತ್ತು ಮಹಿಳೆಯರಿಗೆ ಪಾಯಖಾನೆ ಕಟ್ಟಿಸುವ ವಿಷಯವನ್ನು ಮಂಡಿಸುತ್ತವೆ.

೪) ಸಮರ್ಥರಿರಲಿ ಬಿಡಲಿ ಸ್ತ್ರೀಯರು ಶೂದ್ರರು, ಹರಿಜನರು, ಹಿಂದುಳಿದ ಜಾತಿಗಳು, ಆದಿವಾಸಿಗಳು, ಮುಸಲ್ಮಾನರಿಗೆ ಶೇ ೬೦% ಮೀಸಲಾತಿ ನೀಡಬೇಕು.

ನಿಜವಾದ ಸಮಾನತೆ ಸಾಧಿಸಬೇಕಾದರೆ ಸ್ತ್ರೀಯರಿಗೆ ಹೆಚ್ಚಿನ ಹಕ್ಕುಗಳನ್ನು ನೀಡಬೇಕೆಂದು ಪ್ರತಿಪಾದಿಸಿದರು. ಹೆಣ್ಣನ್ನು ಕುರಿತು ಸಮಗ್ರವಾದ ತಿಳುವಳಿಕೆ ಲೋಹಿಯವರಿಗಿತ್ತು. ಆದ್ದರಿಂದಲೇ ಹೆಣ್ಣಿನ ವಿಮೋಚನೆಯ ಸಾಧ್ಯತೆಗಳನ್ನು ತನ್ನ ಚಿಂತನೆಗಳಲ್ಲಿ ಕಾಣಿಸಿದರು.

ಸ್ತ್ರೀಯರ ಸಮಸ್ಯೆ ಜಾಗತಿಕವಾದುದು. ಹೆಣ್ಣೆಂಬ ಕಾರಣಕ್ಕೆ ಹುಟ್ಟಿಕೊಳ್ಳುವ ಅನ್ಯಾಯ ಅನಾಚಾರಗಳು, ಕೊನೆಗಾಣದ ಹೊರತು ಸಮಾಜ ಶುದ್ಧವಾಗುವುದಿಲ್ಲ. ಒಬ್ಬ ಸಮಾಜವಾದಿಯಾದವನಿಗೆ ಹೆಣ್ಣು ಹೇಗೆಲ್ಲಾ ಕಾಣುತ್ತಾಳೆ ಎಂಬುದು ಅವರ ಬರಹದಿಂದ ಕಾಣುತ್ತದೆ. ಸ್ತ್ರೀ ನಿಷ್ಠ ಸಾಂಸ್ಕೃತಿಕ ಚಿಂತನೆಯಾಗಿ ಮಹಿಳಾ ಚಳುವಳಿ.

ಭಾರತೀಯ ಬ್ರಿಟಿಷರಿಂದ ಬಿಡುಗಡೆ ಪಡೆಯಬೇಕೆಂಬ ಹೋರಾಟದ ಜೊತೆಗೆ ಸ್ತ್ರೀ ವಿಮೋಚನಾ ಚಳುವಳಿಗಳು ಚುರುಕಾದವು. ಈವರೆಗೆ ರಾಜರಾಮ್ ಮೋಹನ್‌ರಾಯ್ ಜ್ಯೋತಿರಾವ್ ಪುಲೆ, ಈಶ್ವರ್ ಚಂದ್ರ ವಿದ್ಯಾಸಾಗರ್ ಮುಂತಾದ ಸುಧಾರಕರೆಂದರೆ ಸ್ತ್ರೀಯರ ಸಾಮಾಜಿಕ ಸುಧಾರಣೆಯಲ್ಲಿ ಪುರುಷರೇ ಪ್ರಧಾನವಾಗಿದ್ದರು. ಆದರೆ 20ನೇ ಶತಮಾನದ ಆರಂಭದ ವೇಳೆಗೆ ಮಹಿಳೆಯರು ವಿದೇಶದಲ್ಲಿ ಶಿಕ್ಷಣ ಪಡೆದು ಒಂದು ಪಿತೃ ಪ್ರಧಾನ ಸಮಾಜದ ಸಾಂಸ್ಕೃತಿಕ ಕೌಟುಂಬಿಕ ಕಟ್ಟಳೆಗಳಿಂದ ಹೊರನಿಂತು ಮಹಿಳಾ ಚಳುವಳಿಯ ನೇತೃತ್ವ ವಹಿಸಿದರು. ಅವರಲ್ಲಿ ಮುಖ್ಯವಾದವರೆಂದರೆ, ಪಂಡಿತ ರಮಾಬಾಯಿ, ರಮಾಬಾಯಿ ರಾನಡೆ, ಆನಂದಿಬಾಯಿ, ಪ್ರೆನಾನಾ ಸೊರಬ್‌ಜೀ, ರುಕ್ಮಾಬಾಯಿ, ಮುಂತಾದವರ ಸಮಸ್ಯೆಗಳನ್ನು ಚರ್ಚಿಸಲು ವೇದಿಕೆಗಳನ್ನು ನಿರ್ಮಿಸಿದರು. ಸಂಘ ಸಂಸ್ಥೆಗಳನ್ನು ಕಟ್ಟಿದರು, ಪತ್ರಿಕೆಗಳನ್ನು ಹುಟ್ಟು ಹಾಕಿದರು. ಕುಮಾರಿ ದೇವಿ, ೧೮೮೬ರಲ್ಲಿ ಲೇಡಿಸ್ ಅಸೋಸಿಯೇಷನ್‌ನನ್ನು ಸ್ಥಾಪಿಸಿದರೆ ಮಹಿಳೆಯರಿಗೆ ಉದ್ಯೋಗ ಮತ್ತು ಶಿಕ್ಷಣ ನೀಡುವ ಸಲುವಾಗಿ ಪಂಡಿತರಾಮ ಬಾಯಿಯವರು ೧೮೮೨ರಲ್ಲಿ ಪುಣೆಯಲ್ಲಿ ಶಾರದ ಸದನವನ್ನು ತೆರೆದರು. ೧೯೧೨ರಲ್ಲಿ ಹಿಂದುಗಳ ನಡುವಿನ ಹಿಂದೂ ಲೇಡಿಸ್ ಸೋಸಿಯಲ್ ಅಂಡ್ ಲಿಟರರೀ ಕಬ್ಲನ್ನು ಪುಣೆಯಲ್ಲಿ ಆರಂಭಿಸಿದ ಕೀರ್ತಿ ರಾನಡೆಯವರದು ೧೯೦೧ರಲ್ಲಿ 'ಸ್ತ್ರೀ ಬೋದ್' ಎಂಬ ಮಹಿಳಾ

ಪತ್ರಿಕೆಯನ್ನು ಹಿಂದಿಯ ಭಾಷೆಯಲ್ಲಿ ಪ್ರಕಟವಾಗಿದ್ದ ಈ ಪತ್ರಿಕೆ ಸ್ತ್ರೀ ಜಾಗೃತಿಯನ್ನು ಮೂಡಿಸಲು ಅನುವು ಮಾಡಿಕೊಟ್ಟಿತು.

೧೯೦೫ರಲ್ಲಿ ಸುಮತಿ ಮಹಿಳಾ ಸಮಿತಿ ಆರಂಭಿಸಿ ಮಹಿಳಾ ಪರ ಹೋರಾಟಕ್ಕೆ ನಾಂದಿ ಹಾಡಿದರು. ೧೯೦೮ರಲ್ಲಿ ಅಹಮದಾಬಾದಿನಲ್ಲಿ ಗುಜರಾತಿ ಸ್ತ್ರೀ ಮಂಡಲ ಸ್ಥಾಪನೆಯಾಯಿತು. ೧೯೧೩ರಲ್ಲಿ ಪುಣೆಯಲ್ಲಿ ಆರಂಭವಾದ ಬಗ್ನಿ ಸೇವಾ ಸಮಾಜ ಭಾರತೀಯ ಸ್ತ್ರೀ ಚಳುವಳಿಯಲ್ಲಿ ಮುಖ್ಯ ಪಾತ್ರ ವಹಿಸಿತು. ೧೯೧೮ರ ವೇಳೆಗೆ ಅನಿಬೆಸೆಂಟ್ ರಾಷ್ಟ್ರೀಯ ಚಳುವಳಿಯ ಮುಖ್ಯಸ್ಥೆಯಾಗಿ ಮಹಿಳಾ ಚಳುವಳಿಗೆ ಶಕ್ತಿ ತುಂಬಿ ಮುನ್ನೆಡೆಸುವಲ್ಲಿ ಪ್ರಮುಖ ಪಾತ್ರ ವಹಿಸಿದ್ದಳು. ೧೯೧೭ರಲ್ಲಿ ಆರಂಭವಾದ ವಿಮೆನ್ಸ್ ಇಂಡಿಯಾ ಆಸೋಸಿಯಸನ್ ರಾಷ್ಟ್ರೀಯ ಚಳುವಳಿಯಲ್ಲಿ ಭಾಗವಹಿಸುವ ಮಹಿಳೆಯರು ಮಹಿಳೆಯರ ಹಕ್ಕುಗಳಾಗಿ ಹೋರಾಡುವುದನ್ನು ಮುಖ್ಯ ಆಂದೋಲನವನ್ನಾಗಿ ರೂಪಿಸಿದರು. ಇದರ ಸಂಚಾಲಕಿ ಮಾರ್ಗರೇಟ್ ಸಿನ್ಸ್ ಸ್ತ್ರೀ ಚಳುವಳಿಯನ್ನು ರೂಪಿಸುವಲ್ಲಿ ಶ್ರಮಿಸಿದರು.

೧೯೨೫ರಲ್ಲಿ "The National Council of Women in India" ಎಂಬ ಸಂಸ್ಥೆಯನ್ನು ಸ್ಥಾಪಿಸಲಾಯಿತು. ಈ ಸಂಸ್ಥೆ ಅಖಿಲ ಭಾರತ ಮಟ್ಟದಲ್ಲಿ ಮಹಿಳಾ ಆಂದೋಲನವನ್ನು ರೂಪಿಸಲು ಸಹಕಾರಿಯಾಯಿತು. ಅಲ್ಲದೇ ಚದುರಿ ಹೋಗಿದ್ದ ಸಂಘಟನೆಗಳನ್ನು ಒಂದು ನೆಲೆಗೆ ತರುವಲ್ಲಿ ಸಂಸ್ಥೆಯಾಯಿತು. ಹೀಗಾಗಿ Womens India Association ಬೃಹತ್ತಾದ ರಾಷ್ಟ್ರೀಯ ಮಹಿಳಾ ಶಕ್ತಿಯಾಗಿ ಬೆಳೆಯಿತು.

ಹೀಗೆ ಮಹಿಳಾ ಸಂಘಟನೆಗಳು ಸ್ತ್ರೀಯರಿಂದ ಸ್ಥಾಪನೆಗೊಂಡು ಸ್ತ್ರೀ ಕಲ್ಯಾಣಕ್ಕಾಗಿ ಶ್ರಮಿಸುತ್ತಿದ್ದ ಹೊತ್ತಿನಲ್ಲಿಯೇ ಮಹಿಳಾ ವಿಚಾರಗಳನ್ನು ಜನಸಾಮಾನ್ಯರಿಗೆ ತಿಳಿಸುವ ಉದ್ದೇಶದಿಂದ ಸ್ತ್ರೀದರ್ಪಣ (೧೯೦೯), ಕುಮಾರಿ ದರ್ಪಣ, ಗೃಹಲಕ್ಷ್ಮಿ, ಆರ್ಯ ಮಹಿಳಾ ಮುಂತಾದ ಪತ್ರಿಕೆಗಳು ಹುಟ್ಟಿಕೊಂಡವು. ಗ್ರಾಮೀಣ ಪ್ರದೇಶಗಳಲ್ಲಿಯೂ, ಸ್ತ್ರೀ ಪರ ಧೋರಣೆಗಳನ್ನು ಹುಟ್ಟು ಆಕುವಲ್ಲಿ ಈ ಪತ್ರಿಕೆಗಳು ಅಪಾರವಾಗಿ ಶ್ರಮಿಸಿದರು.

೨೦ನೇ ಶತಮಾನದ ಆರಂಭಕ್ಕೆ ಭಾರತೀಯ ಸ್ತ್ರೀವಾದಿಗಳನ್ನು ಕಾಡಿದ ಪ್ರಶ್ನೆ ಎಂದರೆ ವಿದುರರು ಮಾತ್ರ ಮರು ಮದುವೆ ಮಾಡಿಕೊಳ್ಳುತ್ತಿರುವುದು. ವಿಧವೆಯರಿಗೆ ಈ ಅವಕಾಶ ಇಲ್ಲದಿರುವುದು ಅಲ್ಲದೇ ವಿಧವೆಯನ್ನು ಅತ್ಯಂತ ತುಚ್ಚವಾಗಿ ಕಾಣುತ್ತಿರುವ ಸಮಾಜದ ಬಗ್ಗೆ ಸ್ತ್ರೀಯರಿಗೆ ಹೇಗೆ ಗೌರವ ಮೂಡುತ್ತದೆ ಎಂಬುವುದು ಪ್ರಬಲವಾಗಿತ್ತು. ಸ್ತ್ರೀ ಶಿಕ್ಷಣ, ಉದ್ಯೋಗ, ಸ್ವಾವಲಂಬನೆ, ತಮ್ಮ ಸ್ತ್ರೀಯರಿಗೆ ತಮ್ಮ ದೇಹದ ಮೇಲಿನ ಸ್ವಾಮ್ಯ ಮುಂತಾದ ಆಧುನಿಕ ಚಿಂತನೆಗಳಿಗಿಂತ ಹೆಚ್ಚಾಗಿ

ಅಂದಿನ ಸಾಮಾಜಿಕ ಪಿಡುಗಾಗಿದ್ದ ಸತಿಪದ್ಧತಿ, ವಿದುರರ ಮರು ವಿವಾಹಗಳು ಒಬ್ಬಗೆಯ ೨ ನೀತಿಯಾಗಿ ಕಾಡಿದವು. ೧೯೧೭ರ ಆಗಸ್ಟ್‌ನಲ್ಲಿ ಹುಕ್ಮಾದೇವಿಯವರು ಸ್ತ್ರೀ'ದರ್ಪಣ'ದಲ್ಲಿ ಈ ವಿಚಾರಗಳು ಪ್ರಕಟವಾದವು.

ಭಾರತೀಯರಲ್ಲಿ ರಷ್ಯಾದ ಮಾರ್ಕ್ಸ್‌ವಾದಿ ಮತ್ತು ಸಮಾಜವಾದಿ ಧೋರಣೆಗಳ ಪ್ರಭಾವ ಬಹಳ ಪರಿಣಾಮಕಾರಿಯಾಗಿ ಆಯಿತು. ಕ್ರಿ.ಶ.೧೯೧೭ರ ಮಾರ್ಚ್ ೮ರಂದು ಝಾರ್ನಾ ದಬ್ಬಾಳಿಕೆ ವಿರುದ್ಧ ಪ್ರತಿಭಟನೆ ಮೆರವಣಿಗೆ ಮತ್ತು ಸಭೆಗಳು ನಡೆದವು. ೧೯೩೬ರ ಮಾರ್ಚ್ ೯ರಂದು ಪ್ಯಾಸಿಸ್ಟ್ ಪ್ರಾನ್‌ಕೋಲ್ ವಿರುದ್ಧ ೮೦ ಸಾವಿರ ಉದ್ಯೋಗಸ್ಥ ಮಹಿಳೆಯರು ಪ್ರತಿಭಟನಾ ಮೆರವಣಿಗೆಯನ್ನು ಮಾಡಿದರು. ತಮಗೆ ಶಾಂತಿ ಬೇಕೆಂದು ೧೯೫೦ರಲ್ಲಿ ಪಶ್ಚಿಮ ಜರ್ಮನಿಯ ಚಾನ್ಸರ್ ಅಡಿನಾಯರನಿಗೆ ೩ಲಕ್ಷ ಮಹಿಳೆಯರು ಅಂಚೆ ಕಾರ್ಡ್‌ನ್ನು ಕಳುಹಿಸಿದರು. ಇದೇ ಅವಧಿಯಲ್ಲಿ ಇರಾನಿನಲ್ಲಿ ೫೦ ಸಾವಿರ ಮಹಿಳೆಯರು ನೂಲಿನ ಗಿರಿಣಿ ಮತ್ತು ಎಣ್ಣೆ ಉದ್ದಿಮೆಯ ರಾಷ್ಟ್ರೀಕರಣಕ್ಕಾಗಿ ಒತ್ತಾಯಿಸಿದರು. ಅವರೆಲ್ಲಾ ಆ ಕಾರ್ಖಾನೆಯ ಕಾರ್ಮಿಕರಾಗಿದ್ದರು.

ಹೀಗೆ ಜಾಗತೀಕ ಮಟ್ಟದಲ್ಲಿ ಮಹಿಳಾ ಚಳುವಳಿಗಳು ನಡೆಯುತ್ತಿದ್ದಾಗ ಭಾರತದಲ್ಲಿ ರಾಷ್ಟ್ರೀಯ ಚಳುವಳಿ ನಡೆಯುತ್ತಿತ್ತು. ವಸಾಹತು ಆಳ್ವಿಕೆಯ ವಿರುದ್ದದ ಹೋರಾಟವನ್ನು ಗಾಂಧೀ ನೇತೃತ್ವದಲ್ಲಿ ನಡೆಸುತ್ತಿದ್ದಾಗ ಮಹಿಳೆಯರು ಬೃಹತ್ ಸಂಖ್ಯೆಯಲ್ಲಿ ಸ್ವರಾಜ್ ಆಂದೋಲನದಲ್ಲಿ ಭಾಗವಹಿಸಿದರು. ೧೯೨೧ರಲ್ಲಿ ಅಸಹಕಾರ ಚಳುವಳಿಯಲ್ಲಿ ಗಾಂಧೀಜಿ ಭಾಗವಹಿಸುವಂತೆ ಕರೆ ನೀಡಿದರು. "ನಾನು ಹೆಂಗಸಾಗಿ ಹುಟ್ಟಿದ್ದರೆ ಹೆಣ್ಣನ್ನು ಅಡಿಕೆಯೆಂದು ತಿಳಿಯುವ ಗಂಡಸ್ಸಿನ ಎಲ್ಲಾ ವರ್ತನೆಗಳ ವಿರುದ್ದವೂ ಸಿಡಿದ್ದೇಳುತ್ತಿದ್ದೆ ಎಂದು ಗಾಂಧೀಜಿ ತಮ್ಮ ಸ್ತ್ರೀ ಕೊರತೆಯನ್ನು ಪ್ರಕಟಿಸಿದರು. ಬ್ರಿಟಿಷರ ವಸ್ತುಗಳ ಬಹಿಷ್ಕಾರ ನೂಲುವುದು, ನೇಯುವುದು, ಖಾದಿ ಬಟ್ಟೆ ಧರಿಸುವುದು ... ಇತ್ಯಾದಿ. ಅಹಿಂಸಾ ಹೋರಾಟದಲ್ಲಿ ಗಾಂಧೀಜಿಯವರೊಂದಿಗೆ ಅಪಾರ ಸಂಖ್ಯೆಯ ಮಹಿಳೆಯರು ಪಾಲ್ಗೊಂಡರು. ೧೯೩೦ರ ಏಪ್ರಿಲ್ ೬ರಂದು ನಡೆದ ಉಪ್ಪಿನ ಸತ್ಯಾಗ್ರಹದಲ್ಲಿ ಸಹಸ್ರಾರು ಮಹಿಳೆಯರು ಭಾಗವಹಿಸಿದ್ದರು. ಹೀಗಾಗಿ ಭಾರತೀಯ ಮಹಿಳೆಯರ ಸಂಘಟಿಸಿ, ರಾಷ್ಟ್ರೀಯ ಚಳುವಳಿ ಅನುವು ಮಾಡಿಕೊಟ್ಟಿತು.

೧೯೨೭ರಲ್ಲಿ ಪುಣೆಯಲ್ಲಿ ನಡೆದ ಅಖಿಲಾ ಭಾರತ ಮಹಿಳಾ ಸಮ್ಮೇಳನದ ಅಧಿವೇಶನದಲ್ಲಿ ಬರೋಡಾದ ಮಹಿಳಾ, ಚಿಯಾಣಾಬಾಯಿ ಗಾಯಕವಾಡರು ಅಧ್ಯಕ್ಷರಾಗಿದ್ರು. ಮಾರ್ಗರೇಟ್ ಕಸಿನ್ಸ್, ಸರೋಜಿನಿನಾಯ್ಡು, ಕಮಲಾದೇವಿ ಚಟ್ಟೋಪಾದ್ಯಾಯ, ರೇಣುಕಾರಾಯಿ, ರಾಜ್‌ಕುಮಾರ್, ಅಮೃತಕಾರ್ ರಾಮೇಶ್ವರಿ, ನೆಹರು ಬೇಗಂ ಹಮ್ಮೀದ್ ಆಲಿ, ಡಾ||ಮುತ್ತುಲಕ್ಷ್ಮಿರೆಡ್ಡಿ ಮುಂತಾದವರು ಭಾಗವಹಿಸಿ ಮಹಿಳಾ ಹಕ್ಕುಗಳಿಗಾಗಿ ಒತ್ತಾಯಿಸಿದರು. ೧೯೨೬ರಲ್ಲಿ ಲಂಡನ್‌ನಲ್ಲಿ ನಡೆದ ೨೬ರಲ್ಲಿ

ದುಂಡುಮೇಜಿನ ಪರಿಷತ್ತಿನ ಸಭೆಗೆ ಮಹಿಳಾ ಪ್ರತಿನಿಧಿಗಳನ್ನು ನೇಮಿಸಬೇಕೆಂದು ಭಾರತೀಯ ಮಹಿಳೆಯರು ಒತ್ತಾಯಿಸಿದರು. ಅದರ ಪರಿಣಾಮವಾಗಿ ಸರೋಜಿನಿನಾಯ್ಡು, ಡಾ॥ಮುತ್ತುಲಕ್ಷ್ಮಿ ರಾಮೇಶ್ವರಿ ನೆಹರೂರವರು ಭಾಗವಹಿಸುವ ಅವಕಾಶ ದೊರೆಯಿತು.

ಇದೇ ಸಂದರ್ಭದಲ್ಲಿ ಸುಭಾಸ್‌ಚಂದ್ರ ಬೋಸರಿಂದ ಸ್ಥಾಪನೆಯಾದ ರಾಣಿ ಝಾನ್ಸಿ ಬ್ರಿಗೇಡ್ ಮಹಿಳಾ ಚಳುವಳಿಯಲ್ಲಿ ಪ್ರಮುಖ ಪಾತ್ರ ವಹಿಸಿತು. ಕ್ಯಾಪ್ಟನ್ ಲಕ್ಷ್ಮಿ ಸ್ವಾಮಿನಾಥನ್ ಅದರ ಮುಖ್ಯಸ್ಥರಾಗಿದ್ದರು. ಅವರು ಬದುಕಿನ್ನುದ್ದಕ್ಕೂ ಸ್ತ್ರೀಪರ ಹೋರಾಟವನ್ನು ಮಾಡುತ್ತಲೇ ಬಂದರು. ೧೯೯೬ರಲ್ಲಿ ಬೆಂಗಳೂರಿನಲ್ಲಿ ವಿಶ್ವಸುಂದರಿ ಸ್ಪರ್ಧೆಯ ಪ್ರತಿಭಟನಾ ಮೆರವಣಿಗೆಯ ಉದ್ಘಾಟನೆಯನ್ನು ನೆರವೇರಿಸಲು ಅವರು ಕಾನ್ಪೂರದಿಂದ ಬೆಂಗಳೂರಿಗೆ ಬಂದಿದ್ದರು.

೧೯೪೦ರಲ್ಲಿ ನಡೆದ ಅಖಿಲ ಭಾರತ ವಿದ್ಯಾರ್ಥಿನಿಯರ ಸಮ್ಮೇಳನ ಕೂಡ ಮಹಿಳಾ ಚಳುವಳಿಯನ್ನು ರೂಪಿಸುವಲ್ಲಿ ಪರಿಣಾಮಕಾರಿಯಾಗಿ ಕೆಲಸ ಮಾಡಿತು. ೧೯೩೧ರಲ್ಲಿ ಕೇರಳದ ನಂಬೂದರಿ ಮಹಿಳೆಯರು ಏಳು ಮಂದಿ ಪರದಾ ತೊರೆದು ಸಾರ್ವಜನಿಕವಾಗಿ ಹೊರಗೆ ಬಂದರು. ನಂತರದ ದಿನಗಳಲ್ಲಿ ಹಲವಾರು ಮಹಿಳೆಯರು ಅದನ್ನೇ ಅನುಸರಿಸಿದ್ದರು. ವಿಧವಾ ವಿವಾಹ, ಅಂತರ್‌ಜಾತಿ ವಿವಾಹ, ಮತ್ತು ಮಹಿಳಾ ವಿದ್ಯಾಭ್ಯಾಸಕ್ಕೆ ಇದರಿಂದ ಒತ್ತಾಸೆ ಸಿಕ್ಕಿತು. ಪರದಾದಿಂದ ಬಿಡುಗಡೆಯಾದ ಮಹಿಳೆ ಪ್ರಗತಿಪರ ಹೆಜ್ಜೆ ಇಟ್ಟಳು.

೧೯೩೭-೩೮ರಲ್ಲಿ ಕಮ್ಯೂನಿಷ್ಟ್ ತತ್ವದ ಸಿದ್ಧಾಂತಕ್ಕೆ ಆಕರ್ಷಿತರಾಗಿ ಮಹಿಳೆಯರು ಆಂಧ್ರಪ್ರದೇಶದ ಕೃಷ್ಣ ಜಿಲ್ಲೆಯಲ್ಲಿ ಬೃಹತ್ ಸಮಾವೇಶ ನಡೆಸಿದರು. ಸುಮಾರು ೮೦೦ ಸದಸ್ಯರ ಕೃಷ್ಣ ಜಿಲ್ಲಾ ಮಹಿಳಾ ಸಂಘ, ಬಡಮಕ್ಕಳಿಗೆ ರೇಷನ್ ಕಾರ್ಡ್, ಅನಕ್ಷರಸ್ಥರಿಗೆ ಅಕ್ಷರಜ್ಞಾನ, ಮಹಿಳೆಯರಿಗೆ ಪ್ರತ್ಯೇಕ ಶೌಚಾಲಯ ನಿರ್ಮಾಣ, ಕುಡಿಯುವ ನೀರಿನ ಸೌಲಭ್ಯ, ಹೆರಿಗೆ ಆಸ್ಪತ್ರೆಗಳು ಮುಂತಾದ ಸವಲತ್ತುಗಳನ್ನು ದೊರಕಿಸಿಕೊಳ್ಳಲು ಆಂಧ್ರ ಮಹಿಳಾ ಸಂಘ ಶ್ರಮಿಸಿತು.

ತೀವ್ರಗಾಮಿ ಸ್ತ್ರೀವಾದಿಗಳು ಪುರುಷಾಧಿಪತ್ಯದ ಹೊರಗೆ ಸ್ತ್ರೀ ತನ್ನ ನಿಜವಾದ ಸ್ತ್ರೀತ್ವದ ಲೈಂಗಿಕ ನೆಲೆಯಲ್ಲಿ ತನ್ನ ಸಂತಾನೋತ್ಪಾದಕ ಶಕ್ತಿಯಲ್ಲಿ ಸ್ತ್ರೀ ತನ್ನನ್ನು ತಾನು ಕಂಡುಕೊಳ್ಳುವುದು ಸಾಧ್ಯ. ಈ ಕಂಡುಕೊಳ್ಳುವಿಕೆಯ ಅಭಿವ್ಯಕ್ತಿಯೇ ಆಕೆ ಬಿಡುಗಡೆಗೆ ದಾರಿ; ಇದೇ ಮಹಿಳಾ ವಿಮೋಚನೆಯ ಪ್ರಕ್ರಿಯೆ ಕೂಡ ಎನ್ನುವುದು ಅವರವಾದ.

ಆಧುನಿಕ ಸಮಾಜವನ್ನು ಸೈದ್ಧಾಂತಿಕ ನೆಲೆಯಲ್ಲಿ ವಿಶ್ಲೇಷಿಸಿದ ಸಿದ್ಧಾಂತವೆಂದರೆ ಮಾರ್ಕ್ಸ್‌ವಾದ. ಅರ್ಥಾತ್ ಸಮಾಜವಾದ. ವರ್ಗ ಸಂಘರ್ಷ ಮತ್ತು ಉತ್ಪಾದನೆ, ಹಂಚಿಕೆ ವಿಷಯಗಳಲ್ಲಿ ಮಾನವೀಯತೆಯನ್ನು ಮೆರೆಯುವ ಈ ಸಿದ್ಧಾಂತ ಸ್ತ್ರೀಯರ ವಿಷಯದಲ್ಲೂ ಅತ್ಯಂತ ಆಸಕ್ತಿಯನ್ನು

ತೋರಿದೆ. ಮಾರ್ಕ್ಸ್ ತ್ತು ಏಂಗಲ್ಸ್‌ರು ಸ್ತ್ರೀಯರ ಅಧೀನ ಸ್ಥಿತಿಗೆ ಅವರು ಆರ್ಥಿಕ ಉತ್ಪಾದನೆಯಿಂದ ದೂರ ಉಳಿದಿರುವುದೇ ಕಾರಣವಾಗಿದೆ ಎಂಬುದನ್ನು ಪ್ರತಿಪಾದಿಸಿದರು. ಈ ಸಮಾಜವಾದಿಗಳು ಮಹಿಳೆಯರು ಉತ್ಪಾದನಾ ವ್ಯವಸ್ಥೆಯಲ್ಲಿ ತೊಡಗಿಕೊಳ್ಳುವುದೇ ಎಲ್ಲಾ ಬಗೆಯ ಶೋಷಣೆಯಿಂದ ವಿಮೋಚನೆ ಎಂದು ಸಾರಿದರು.

ತೀವ್ರಗಾಮಿ ಸ್ತ್ರೀವಾದದ ಪ್ರತಿಪಾದಕಿಯಾದ ಮೇರಿಡಾಲಿ ೧೯೭೮ರಲ್ಲಿ ಗೈನ್ ಎಕಾಲಜಿ ಎಂಬ ಪುಸ್ತಕದಲ್ಲಿ ಭಿನ್ನ ಲಿಂಗಿಯ ಅಧಿಕಾರವನ್ನು ಪ್ರಶ್ನಿಸುತ್ತಾಳೆ. ಪುರುಷ ಪ್ರಧಾನತೆ ಇತಿಹಾಸದುದ್ದಕ್ಕೂ ಎಲ್ಲಾ ಸಂಸ್ಕೃತಿಗಳಲ್ಲೂ ಲೈಂಗಿಕ ಹಿಂಸೆಯ ಮೇಲೆ ಆಧಾರಿತವಾಗಿದ್ದು ಪಿತೃ ಪ್ರಧಾನತೆಯ ಸಮಾಜದ ಎಲ್ಲಾ ರಂಗಗಳಲ್ಲೂ ಆಳಿಕೊಂಡು ಬಂದಿದೆ. ಈ 'ಪುರುಷಾಧಿಕಾರ ಸಂಸ್ಕೃತಿಗೆ ಸವಾಲೆಸೆಯಲು ಮಹಿಳೆಯರು ಸಮನಾಗಿ ದುಡಿಯಬೇಕು.

ಕಪ್ಪು ಸ್ತ್ರೀವಾದದ ಮೂಲಪ್ರೇರಣೆ ವರ್ಣ ತಾರತಮ್ಯ. ಇದು ಲಿಂಗ ತಾರತಮ್ಯದಷ್ಟು ಅಪಾಯಕಾರಿಯಾದ, ಅಮಾನವೀಯವಾದ ದೌರ್ಜನ್ಯ, ಬಿಳಿಯರು, ಕರಿಯರ ಮೇಲೆ ನಡೆಸುವ ದಬ್ಬಾಳಿಕೆಯಿಂದ ಕರಿಯ ಮಹಿಳೆಯರು ನೊಂದು ಪ್ರತಿಭಟನೆಗೆ ಇಳಿದುದು ಇಂಥದೊಂದು ವಾದ ಬೆಳೆಯಲು ಕಾರಣವಾಯಿತು. ಸ್ತ್ರೀಯಾದವಳು ಒಂದೇ ಸಮಸ್ಯೆಯನ್ನು ಎದುರಿಸುತ್ತಿದ್ದರೂ ಸಹ ಕಪ್ಪು ಸ್ತ್ರೀ ಎದುರಿಸುವ ಸಮಸ್ಯೆ ಬಿಳಿಯ ಸ್ತ್ರೀ ಎದುರಿಸುವ ಸಮಸ್ಯೆಗಿಂತ ಭಿನ್ನವಾಗಿಯೇ ಇದೆ. ಯಾವುದೇ ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣು ಅಧೀನ ಸ್ಥಿತಿಯಲ್ಲಿರುತ್ತಾಳೆ. ಇಲ್ಲಿ ಕಪ್ಪು-ಬಿಳಿಪು ಎಂಬ ಭೇದವೇ ಇಲ್ಲ. ಆದರೆ ತಪ್ಪು ಸ್ತ್ರೀಯರ ವಿಷಯದಲ್ಲಿ ಬಿಳಿಯ ಸ್ತ್ರೀ ಆದ್ದರಿಂದ ಕಳೆದ ಎಪ್ಪತರ ದಶಕದಲ್ಲಿ ಆರಂಭವಾದ ಸ್ತ್ರೀವಾದಿ ಚಳುವಳಿ ಎದುರಿಸಬೇಕಾಗಿ ಬಂದ ಸವಾಲುಗಳಲ್ಲಿ ಕಪ್ಪು ಸ್ತ್ರೀಯರ ಸಮಸ್ಯೆಗಳು ಒಂದು. ಹೀಗಾಗಿ ಕಪ್ಪು ಸ್ತ್ರೀಯರು ಬಿಡುಗಡೆಯ ಹಾದಿಯಲ್ಲಿ ಹುಡುಕುತ್ತಾ ಸಾಗಿದ ಮಹಿಳೆಯರು ಸ್ತ್ರೀಯರ ಹಕ್ಕು ಸ್ಥಾಪಿಸಿ, ವರ್ಣ ತಾರತಮ್ಯ ಮತ್ತು ಗುಲಾಮಗಿರಿಯನ್ನು ನಿರ್ನಾಮ ಮಾಡಲು ಬೀದಿಗಿಳಿದರು. ಬಹುಶಃ ಕಪ್ಪು ಸ್ತ್ರೀವಾದ ಬೆಳೆಯಲು ಕಾರಣವಾಯಿತು.

ಅಮೇರಿಕಾದ ಸ್ತ್ರೀವಾದಿಗಳಾದ ಎಲೆನ್ ಮೋಯರ್ಸ್‌ಳ Literary Women (೧೯೭೭) ಎಲೈನ್ ಸೋವಾಲ್ಟಳ A Literature of their Own (೧೯೭೭) ಮತ್ತು ಸಾಂಡ್ರಾ ಗಿಲ್ಬರ್ಟ್ ಹಾಗು ಸೂಸನ್ ಗುಬರ್ ಅವರ The made Women in the Attic (೧೯೭೯) ಕೃತಿಗಳು ಆಧುನಿಕ ಸ್ತ್ರೀವಾದಿ ಚರಿತ್ರೆಯನ್ನು ರೂಪಿಸುವಲ್ಲಿ ನೆರವಾದವು.

ಅಮೇರಿಕಾದ ಸ್ತ್ರೀವಾದಿ ವಿಮರ್ಶಕಿಯರಲ್ಲಿ ಮುಖ್ಯಳೆನಿಸಿರುವ ಎಲೈನ್ ಶೋವಾಲ್ಟರ್ ಮಹಿಳಾ ಸಾಹಿತ್ಯವನ್ನು ವಿಶ್ಲೇಷಿಸಲು ಮೂರು ಹಂತಗಳನ್ನು ಹೇಳುತ್ತಾಳೆ :

೧) ಪ್ರಧಾನ ಪರಂಪರೆಯ ಪ್ರಚಲಿತ ಧೋರಣೆಗಳ ಅನುಕರಣೆಯ ಹಂತ ಈ ಹಂತದಲ್ಲಿ ಪ್ರಧಾನ ಪರಂಪರೆಯ ಕಲಾ ಮಾನದಂಡಗಳನ್ನು, ಸಾಮಾಜಿಕ ಪಾತ್ರ ಕುರಿತ ದೃಷ್ಟಿಕೋನಗಳನ್ನು, ಮೌಲ್ಯಗಳನ್ನು ಲೇಖಕಿಯರೂ ಅಂತಸ್ಥವಾಗಿಸಿಕೊಂಡಿರುತ್ತಾರೆ. ಇದನ್ನು ಸ್ತ್ರೀಯಾತ್ಮಕ ಹಂತವೆನ್ನುತ್ತಾರೆ.

೨) ಎರಡನೇಯ ಹಂತವೆಂದರೆ ಪಿತೃಪ್ರಧಾನ ವ್ಯವಸ್ಥೆಯ ಮಾನದಂಡಗಳು ಮೌಲ್ಯಗಳು ವಿರುದ್ಧ ಪ್ರತಿಭಟಿಸುವ, ಅಲ್ಪಸಂಖ್ಯಾತರ ಹಕ್ಕುಗಳನ್ನು; ಮೌಲ್ಯಗಳನ್ನು ಎತ್ತಿ ಹಿಡಿದು ಸ್ವಾಯತ್ತತೆಗಾಗಿ ಹಕ್ಕೊತ್ತಾಯಿಸುವ ಸ್ತ್ರೀವಾದಿ ಹಂತ.

೩) ಮೂರನೆಯದು ಆತ್ಮ ಶೋಧನೆಯ ವಿರೋಧದಿಂದ ಮುಕ್ತವಾದ ತನ್ನೊಳಕ್ಕೆ ತಿರುಗಿದ ಸ್ವಾಂತಿಕೆಯ ಹುಡುಕಾಟದ ಹಂತ.

ಹೀಗೆ ಸಾಹಿತ್ಯವನ್ನು ಈ ಮಾನದಂಡಗಳ ಮೂಲಕ ಬೆಲೆ ಕಟ್ಟುವ ಕೆಲಸವನ್ನು ಶೋವಾಲ್ಟರ್ ಮಾಡುತ್ತಾಳೆ. ಇದು ಮಹಿಳಾ ಬರಹಗಾರ್ತಿಯರಿಗೆ ನಿರ್ಧಿಷ್ಟ ಗುರಿಯನ್ನು ಸೂಚಿಸುತ್ತದೆ.

ಫ್ರೆಂಚ್ ಕ್ರಿಸ್ತೇವ್ ಸಮಕಾಲೀನ ಸ್ತ್ರೀವಾದಿ ಹೋರಾಟಗಳನ್ನು ಮೂರು ಹಂತಗಳಲ್ಲಿ ಗುರುತಿಸುತ್ತಾಳೆ.

೧) ಸಾಂಕೇತಿಕ ವ್ಯವಸ್ಥೆಯೊಳಗೆ ಸ್ತ್ರೀ ಪುರುಷರಿಬ್ಬರಿಗೂ ಸಮಾನ ಪ್ರವೇಶವಿರಬೇಕೆಂಬ ಹಕ್ಕೋತ್ತಾಯದ ಹಂತ (ಸಮಾನತಾವಾದ).

೨) ಲಿಂಗ ವ್ಯತ್ಯಾಸಗಳಿಗೆ ಒತ್ತು ಕೊಡುವ ಮೂಲಕ ಪುರುಷ ಸಾಂಕೇತಿಕ ವ್ಯವಸ್ಥೆಯನ್ನು ನಿರಾಕರಿಸುವ ಹಂತ (ತೀವ್ರಗಾಮಿ ವಾದ) ಮತ್ತು

೩) ಸ್ತ್ರೀಯಾತ್ಮಕ ಮತ್ತು ಪುರುಷಾತ್ಮಕಗಳ ನಡುವಿನ ದ್ವಿತ್ವ ವೈರುದ್ಯಗಳನ್ನು ನಿರಾಕರಿಸುವ ಆಧ್ಯಾತ್ಮಿಕ ಹಂತ (ಕ್ರಿಸ್ತೇಲ್ ವಾದ).

ಪುರುಷ ಹೇಗೆ ತನ್ನ ಪುರುಷತ್ವದಿಂದಲೇ ಸಮಾಜವನ್ನು ಹಿಡಿತಕ್ಕೆ ತೆಗೆದುಕೊಂಡಿದ್ದಾನೇ ಹಾಗೇ ಹೆಣ್ಣು ತನ್ನ ಹೆಣ್ತನದ ಗುಣಲಕ್ಷಣಗಳನ್ನು ಪ್ರಕಟಿಸಿ ಪುರುಷನ ಹಿಡಿತದಿಂದ ಮುಕ್ತಳಾಗಬೇಕು ಎನ್ನುತ್ತಾಳೆ.

ಭಾರತೀಯ ಸ್ತ್ರೀವಾದವೆಂಬ ಪ್ರತ್ಯೇಕ ಸ್ತ್ರೀವಾದವಿಲ್ಲ. ಆದರೆ ಕಳೆದ ನಾಲ್ಕು ದಶಕಗಳಿಂದಲೂ ಭಾರತದಲ್ಲಿ ಸ್ತ್ರೀವಾದಿ ಚಳುವಳಿಗಳು ಅತ್ಯಂತ ಪರಿಣಾಮಕಾರಿಯಾಗಿಯೇ ಜರುಗಿವೆ. ಭಾರತೀಯ ಸ್ತ್ರೀವಾದವನ್ನು ಎರಡು ಆಯಾಮಗಳಲ್ಲಿ ವಿಶ್ಲೇಷಿಸಬಹುದು. ಒಂದು ಸಾಹಿತ್ಯದ ಆಯಾಮ ಮತ್ತೊಂದು ಆಂದೋಲನದ ಆಯಾಮ. ಭಾರತದ ಸ್ತ್ರೀವಾದದ ಪರಿಕಲ್ಪನೆ ಇರುವುದು ದುಡಿಯುವ ಮಹಿಳೆಯರ ಸಬಲತೆಯ ಕಡೆಗೆ, ಬಡ ಹಳ್ಳಿಯ ಹೆಂಗಸರ ಆರ್ಥಿಕ ಶಕ್ತಿಯ ಕಡೆಗೆ, ಸ್ಥಳೀಯ

ನಂಬಿಕೆಗಳನ್ನು ಪ್ರಶ್ನಿಸುವ ವಿಮೋಚನೆಯ ಕಡೆಗೆ, ಹೊಸ ಸಾಮಾಜಿಕ, ಶೈಕ್ಷಣಿಕ ಅರಿವಿನಿಂದ ತಮ್ಮ ಹಕ್ಕುಗಳ ಸ್ಥಾಪನೆಗೆ ಜಾಗೃತಿಯಾಗುವುದರೆಡೆಗೆ ಭಾರತೀಯ ಸ್ತ್ರೀವಾದದಲ್ಲಿ ಕಾಣುವ ಮತ್ತೊಂದು ಸತ್ಯವೆಂದರೆ ಪಿತೃಪ್ರಾಧಾನ್ಯ ಮಾತ್ರವೇ ಸ್ತ್ರೀ ಶೋಷಣೆಯ ಮೂಲ, ಅದನ್ನು ಹೋಗಲಾಡಿಸಿದರೆ ಶೋಷಣೆ ನಿಲ್ಲುತ್ತದೆ.

**<u>ಮಹಿಳಾ ಚಳುವಳಿಯ ಮುಖ್ಯ ಪ್ರವೃತ್ತಿಗಳಲ್ಲಿ ಸಂಘಟನೆಗಳು</u> :**

"ವರದಕ್ಷಿಣೆ ಕಿರುಕುಳಕ್ಕೆ ಬಲಿಯಾದ ಗೃಹಿಣಿ" ಎಂಬ ಶೀರ್ಷಿಕೆಯಡಿ ಆಂದೋಲನದಲ್ಲಿ (೨೦-೮-೨೦೦೫) ಪ್ರಕಟವಾದ ಸುದ್ದಿ ಹೀಗಿತ್ತು – ಮೇಟಗಳ್ಳಿ ವ್ಯಾಪ್ತಿಯ ಹೆಬ್ಬಾಳು ಮುಖ್ಯರಸ್ತೆಯ ನಿವಾಸಿಗಾತಿ ಕೆಲಸ ಮಾಡುತ್ತಿದ್ದ ಮಹದೇವನಿಗೆ ಮಾಲತಿಯನ್ನು ಕೊಟ್ಟು ವಿವಾಹ ಮಾಡಲಾಗಿತ್ತು. ಅಂದಿನಿಂದಲೂ ಈತ ತನ್ನ ತಾಯಿ ಹಾಗೂ ತಂಗಿಯ ಜೊತೆ ಸೇರಿಕೊಂಡು ತವರಿನಿಂದ ಇನ್ನೂ ಹೆಚ್ಚಿನ ವರದಕ್ಷಿಣೆ ತರುವಂತೆ ಪತ್ನಿ ಮಾಲತಿಗೆ ಮಾನಸಿಕ ಹಾಗೂ ದೈಹಿಕ ಹಿಂಸೆ ನೀಡುತ್ತಿದ್ದನು ಎನ್ನಲಾಗಿದೆ.

ಇದರಿಂದ ಬೇಸತ್ತ ಮಾಲತಿ ಬೆಳಿಗ್ಗೆ ೧೦-೩೦ರ ಸಮಯದಲ್ಲಿ ಮನೆಯಲ್ಲೇ ನೇಣು ಬಿಗಿದು ಆತ್ಮಹತ್ಯೆ ಮಾಡಿಕೊಂಡಳು ಎನ್ನಲಾಗಿದೆ.

ವಿಜಯ ಕರ್ನಾಟಕ (೧೪.೮.೨೦೦೪) ದಿನಪತ್ರಿಕೆಯಲ್ಲಿ 'ಮತ್ತೇ ಸಾಮೂಹಿಕ ಅತ್ಯಾಚಾರ' ಎಂಬ ಶೀರ್ಷಿಕೆಯಡಿ "ರಾಷ್ಟ್ರದ ರಾಜಧಾನಿಯಲ್ಲಿ ಸಾಮೂಹಿಕ ಅತ್ಯಾಚಾರಗಳ ಸರಣಿ ಮುಂದುವರಿದಿದೆ. ವಾಯುವ್ಯ ದಿಲ್ಲಿಯಲ್ಲಿ ಮಹಿಳೆಯೊಬ್ಬಳ ಮೇಲೆ ಆಕೆಯ ಪತಿಯ ನಾಲ್ವರು ಸ್ನೇಹಿತರು ಅತ್ಯಾಚಾರವೆಸಗಿದ್ದಾರೆ"...

"ಇಬ್ಬರು ಯುವತಿಯರು ಕಾಣೆ" ಎಂಬ ಶೀರ್ಷಿಕೆಯಡಿ ಪ್ರಜಾವಾಣಿ (೧೭-೮-೨೦೦೫) ದಿನಪತ್ರಿಕೆಯಲ್ಲಿ ಪ್ರಕಟವಾಗಿರುವ ಸುದ್ದಿ ಹೀಗಿದೆ – "ಮುದುರಸಿದಬಾನು (೧೭) ಹಾಗೂ ಹೀನಾಕೈಸರ್ (೧೪) ಹೆಸರಿನ ಯುವತಿಯರು ವಿದ್ಯಾರಣ್ಯಪುರಂ ಪೊಲೀಸ್ ಠಾಣಾ ವ್ಯಾಪ್ತಿಯ ನಾಚನಹಳ್ಳಿ ೯ನೇ ಕ್ರಾಸ್‌ನ ಮನೆ ನಂ.೧೪೧ರಿಂದ ಕಾಣೆಯಾಗಿರುತ್ತಾರೆ ಎಂದು ವಿದ್ಯಾರಣ್ಯಪುರಂ ಪೊಲೀಸರು ತಿಳಿಸಿದ್ದಾರೆ.

ಇಂಥ ವರದಿಗಳು ಒಂದಲ್ಲ ಒಂದು ದಿನಪತ್ರಿಕೆಯಲ್ಲಿ ಪ್ರಕಟವಾಗುತ್ತಲೇ ಇರುತ್ತವೆ. ಓದುಗರು ಸಹ ಓದಿ ದಿನನಿತ್ಯ ಇವು ಮಾಮೂಲಿಯಾಗಿ ಓದಿ ಮರೆಯುತ್ತಾರೆ. ಹೆಣ್ಣಿನ ಮೇಲೆ ಇದೆಲ್ಲಾ ನಡೆಯುವಂತಹದು ಸಹಜ ಎಂದುಕೊಳ್ಳುತ್ತಾರೆ. ಆದರೆ ಹೆಣ್ಣು ಒಂದಲ್ಲ ಒಂದು ಕಾರಣಕ್ಕಾಗಿ ಸಾಯುತ್ತಿದ್ದಾಳೆ. ಹೀಗೆ ಸಾಯಲು ಇರುವ ಕಾರಣಗಳು ಹಲವಾರು ಒಂದೆರಡನ್ನು ಹೆಸರಿಸುವುದಾದರೆ

ವೇಶ್ಯೆಯಾಗಿಸುವ ನಡೆಸುವ ಅಪಹರಣ, ಅತ್ಯಾಚಾರ, ವರದಕ್ಷಿಣೆ, ಇತ್ಯಾದಿ. ಹೀಗೆ ಸಾಯುತ್ತಿದ್ದರೆ ಸಂತತಿ ಎಲ್ಲಿಂದ ಬರಬೇಕು ಎಂಬ ಪ್ರಶ್ನೆ ಉದ್ಭವಿಸುತ್ತದೆ. ಇಂತಹ ಪುರುಷಶಾಹಿ ಒಳೊತ್ತಡದಲ್ಲಿ ಹೆಣ್ಣು ಜೀವ ಉಳಿಸಿಕೊಂಡು ಬದುಕುವುದೇ ದೊಡ್ಡ ಸಾಧನೆ ಎಂಬ ಸಾಮಾಜಿಕ ಸ್ಥಿತಿ ನಿರ್ಮಾಣವಾಗಿದೆ.

ಬಾಲ ಕಾರ್ಮಿಕರಾಗಿ ದುಡಿಯುವವರಲ್ಲಿ ಹೆಣ್ಣು ಮಕ್ಕಳೆ ಹೆಚ್ಚಾಗಿದ್ದಾರೆ. ಸಣ್ಣ-ಸಣ್ಣ ಹುಡುಗಿಯರು ಅತಿ ಕಡಿಮೆ ಕೂಲಿಗೆ ಕೆಲಸ ಮಾಡುತ್ತಿದ್ದಾರೆ. ಓದಿ ಮುಂದೆ ಬರಬೇಕಾದ ೮ರಿಂದ ೧೪ಳ ವಯಸ್ಸಿನ ಹುಡುಗಿಯರು ಮನೆಗೆಲಸ, ಮಕ್ಕಳ ಲಾಲನೆ-ಪಾಲನೆ ಬೀಡಿ ಕಟ್ಟುವ, ಅಗರಬತ್ತಿ, ಹಪ್ಪಳ-ಸಂಡಿಗೆ ತಯಾರಿಕೆಯಲ್ಲಿ, ಕರಕುಶಲ ವಸ್ತುಗಳ ತಯಾರಿಕೆಯಲ್ಲಿ, ಹೊಲಿಗೆ, ನೇಯ್ಗೆ ಇತ್ಯಾದಿ ನೂರಾರು ಕಸುಬುಗಳಲ್ಲಿ ಹೆಣ್ಣು ಮಕ್ಕಳು ತೀರಾ ಕಡಿಮೆ ಕೂಲಿಗೆ ದುಡಿಯುತ್ತಾ ದೌರ್ಜನ್ಯಗಳಿಗೂ ಒಳಗಾಗುತ್ತಿದ್ದಾರೆ. ಬಾಲಕಾರ್ಮಿಕ ದುಡಿತದ ನಿಷೇಧ ಕಾಯ್ದೆಯಾಗಲೀ, ಕನಿಷ್ಠ ವೇತನ ಕಾಯ್ದೆಯಾಗಲಿ ಇವರನ್ನು ಸಂರಕ್ಷಿಸುತ್ತಿಲ್ಲ.

ಹೆಣ್ಣು ಮಕ್ಕಳು ಹುಟ್ಟಿದರೆ ಹೊರೆಯಾಗುತ್ತಾರೆ ಎಂಬ ಭಾವನೆಯಿಂದ ಹೆಣ್ಣು ಭ್ರೂಣ ಹತ್ಯೆಗಳನ್ನು ಮಾಡುತ್ತಿದ್ದಾರೆ. ಇದರಿಂದ ಹೆಣ್ಣು ಮಕ್ಕಳ ಸಂಖ್ಯೆ ದಿನೇ ದಿನೇ ಇಳಿಮುಖವಾಗುತ್ತಿದೆ. ಅತ್ಯಾಚಾರಕ್ಕೆ ಬಲಿಯಾಗುವ ಹೆಣ್ಣು ಮಕ್ಕಳ ಸಂಖ್ಯೆ ದಿನೇ ದಿನೇ ಅಧಿಕವಾಗುತ್ತಿದೆ. ಹೆಣ್ಣುಗಳೆಂದರೆ ಬಳಸಿ ಎಸೆಯುವ ಲೈಂಗಿಕ ವಸ್ತುಗಳಾಗಿವೆ. ನಡೆಯುತ್ತಿರುವ ಅತ್ಯಾಚಾರಗಳೆಲ್ಲಾ ದಾಖಲಾಗುತ್ತಿಲ್ಲ. ಅಲ್ಲದೆ ಅತ್ಯಾಚಾರಿಗಳಿಗೆ ಶಿಕ್ಷೆಯಾಗುತ್ತಿಲ್ಲ. ವೇಶ್ಯಾವೃತ್ತಿ ಅತ್ಯಂತ ಲಾಭದಾಯಕ ವೃತ್ತಿಯಾಗಿ ಬೆಳೆಯುತ್ತಿರುವ ದೇಶಗಳಲ್ಲಿ ಭಾರತವು ಒಂದಾಗಿದೆ. ಬಡ ಹೆಣ್ಣು ಮಕ್ಕಳ ನಾಪತ್ತೆ ದಿನೇ-ದಿನೇ ಹೆಚ್ಚಾಗುತ್ತಿದೆ.

ಇಂಥ ದುಷ್ಟ ಪದ್ಧತಿಗಳು ನಮ್ಮ ನಡುವೆಯೇ ನಡೆಯುತ್ತಿದೆ ಎಂದರೆ ಅಶ್ಚರ್ಯ ಪಡಬೇಕಾಗಿಲ್ಲ. ಇವುಗಳನ್ನು ತಡೆಗಟ್ಟಲು ಸರ್ಕಾರ ಮತ್ತು ಸಮಾಜಗಳು ಮುಂದಾಗುತ್ತಿವೆ. ಇಂತಹ ಅನಿಷ್ಠ ಪದ್ಧತಿಗಳನ್ನು ತಡೆಯಲು ಪೊಲೀಸರು ಹಗಲಿರುಳು ಶ್ರಮಿಸುತ್ತಿದ್ದಾರೆ. ಮಹಿಳೆಯರ ಮೇಲಿನ ಹಿಂಸೆಗಳನ್ನು ತಡೆಗಟ್ಟಲು ದೊಡ್ಡ ದೊಡ್ಡ ನಗರಗಳಲ್ಲಿ ಮಹಿಳಾ ಪೊಲೀಸ್ ಠಾಣೆಗಳ ಸ್ಥಾಪನೆಯಾಗಿವೆ.

ಇನ್ನೂ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಮಹಿಳಾ ಆಯೋಗಗಳನ್ನು ರಚಿಸಿ ಮಹಿಳೆಯರ ಮೇಲೆ ನಡೆಯುವ ದೌರ್ಜನ್ಯಗಳನ್ನು ನಿರಂತರವಾಗಿ ಅಧ್ಯಯನ ಮಾಡಿ ಅದಕ್ಕೆ ಬೇಕಾದ ಪರಿಹಾರೋಪಾಯಗಳನ್ನು ಸೂಚಿಸಿ, ಸರ್ಕಾರಕ್ಕೆ ವರದಿ ಮಾಡುವಂತೆ ಮಹಿಳಾ ಆಯೋಗಗಳಿವೆ.

ಅಲ್ಲದೆ ಕೇಂದ್ರ ಸರ್ಕಾರ ಮಹಿಳೆಯರಿಗೆ ಶೇ೩೩% ರಷ್ಟು ಸ್ಥಾನಗಳನ್ನು ಎಲ್ಲಾ ಕ್ಷೇತ್ರಗಳಲ್ಲಿಯೂ ಮೀಸಲಿಡುವ ವಿಧೇಯಕವನ್ನು ಮಂಡಿಸಲು ಕಾಯುತ್ತಿದೆ.

ಎಲ್ಲಾ ಮಹಿಳಾ ಸಂಘಟನೆಗಳು ಮಹಿಳೆಯರ ಕಲ್ಯಾಣಕ್ಕಾಗಿ ದುಡಿಯುತ್ತಿವೆ ಎಂದು ಹೇಳಲಾಗದು. ಈ ಎಲ್ಲವನ್ನು ಮೀರಿ ಕೇವಲ ದಮನಿತ ಮಹಿಳೆಯರಿಗಾಗಿಯೇ ಶ್ರಮಿಸುವ ಕೆಲವಾದರೂ ಸಂಘಟನೆಗಳು ಇಂದಿಗೂ ನಾಲ್ಕಾರು ದಶಕಗಳಿಂದ ಶ್ರಮಿಸುತ್ತಿರುವುದನ್ನು ನಾವು ನೋಡುತ್ತಿದ್ದೇವೆ. ಉದಾಹರಣೆಗೆ ಹೆಸರಿಸಬಹುದೆಂದರೆ ಮೈಸೂರಿನ ಸಮತಾ ವೇದಿಕೆ.

**'ಸಮತಾ ವೇದಿಕೆಯ ಸಾಮಾಜಿಕ ಪ್ರೀತಿ'**

ಮೈಸೂರಿನ 'ಸಮತಾ ವೇದಿಕೆ'ಯೆಂಬ ಸ್ತ್ರೀಪರ ಸಂಘಟನೆಯ ಕಾರ್ಯವೈಖರಿ ಎಂಥವರಿಗೂ ಆಶ್ಚರ್ಯ ಹುಟ್ಟಿಸುವಂತಹ ಕೆಲಸ ಮಾಡಿದೆ. 'ಸಮಾನತೆ ನಮ್ಮ ಜನ್ಮ ಸಿದ್ದ ಹಕ್ಕು' ಅದನ್ನು ಸಾಧಿಸೋಣ ಎಂಬ ಪ್ರಜಾಸತ್ತಾತ್ಮಕ ಆದರ್ಶವನ್ನು ಇಟ್ಟುಕೊಂಡು ಮುನ್ನಡೆಯುತ್ತಿರುವ ಈ ಮಹಿಳಾ ವೇದಿಕೆ, ಬಹಳಷ್ಟು ಮಹಿಳೆಯರ ಕಣ್ಣೀರನ್ನು ಒರೆಸುವ ಕೆಲಸ ಮಾಡಿದೆ.

ಮೈಸೂರಿನ ಕುಕ್ಕರಹಳ್ಳಿಯ ಅನಕ್ಷರಸ್ಥ ಮಕ್ಕಳಿಗೆ ಅಕ್ಷರ ಕಲಿಸುವ ಕಾಯಕದೊಂದಿಗೆ ಆರಂಭವಾದ 'ಸಮತಾ ವೇದಿಕೆ' ಪೋಸ್ಟರ್, ಪ್ರದರ್ಶನ ಹಾಡು, ವಾಡಿಕಗಳ ಮೂಲಕ ಜನ ಜಾಗೃತಿ, ಅಕ್ಷರ ಕಲಿಕೆ, ವಿಚಾರ ಗೋಷ್ಠಿ, ಭಾಷಣ ಧರಣಿ, ಪ್ರತಿಭಟನಾ ಮೆರವಣಿಗೆ ಕಾರ್ಯಕ್ರಮಗಳನ್ನು ಮೊದಲು ಐದು ವರ್ಷಗಳಲ್ಲಿ ಅತ್ಯಂತ ಪರಿಣಾಮಕಾರಿಯಾಗಿಯೇ ಮಾಡಿದೆ. ಅನಂತರದಲ್ಲಿ ಅದು ನಿರ್ವಹಿಸಿದ ಯಶಸ್ವಿ ಪ್ರಕರಣಗಳಲ್ಲಿ ಕೆಲವು ಹೀಗಿವೆ.

- ಅತ್ತೆ-ಮಾವನವರ ಗಮನಕ್ಕೆ ಬಾರದೆ ಮದುವೆಯಾದ ಹೆಣ್ಣೊಬ್ಬಳನ್ನು ಆಕೆಯ ಮಗುವಿನೊಂದಿಗೆ ಅತ್ತೆ ಮನೆಗೆ ಸೇರಿಸುವ ಕೆಲಸವನ್ನು ಯಶಸ್ವಿಯಾಗಿ ಮಾಡಿದ್ದು ಮೊದಲ ಸಾಧನೆ.
- ಕೊಂಗಳ್ಳ ಬೆಟ್ಟವನ್ನು ಹತ್ತಿ ಗರ್ಭಗುಡಿ ಪ್ರವೇಶಿಸಿದ ಹೆಣ್ಣು ಮಕ್ಕಳಿಗೆ ತೊಂದರೆಯಾಗುತ್ತದೆ ಎಂಬ ಪ್ರತೀತಿ ಪ್ರಚಾರದಲ್ಲಿದ್ದ ಹೊತ್ತಿನಲ್ಲಿ ಸಮತಾ ವೇದಿಕೆಯ ಸದಸ್ಯೆಯರು ಬೆಟ್ಟವನ್ನು ಹತ್ತಿ ಗುಡಿಯನ್ನು ಪ್ರವೇಶಿಸಿ ಏನೂ ಆಗಲಿಲ್ಲ ಎಂಬುದಾಗಿ ಸಾಬೀತುಗೊಳಿಸಿ ಗೊಡ್ಡು ನಂಬಿಕೆಯನ್ನು ಬಯಲು ಮಾಡಿದರು.
- ಮೈಸೂರಿನ ಗಣಪತಿ ಸಚ್ಚಿದಾನಂದಸ್ವಾಮಿ ಆಚರಿಸುತ್ತಿದ್ದ ಪರ್ಜನ್ಯ ಯಜ್ಞದ ವಿರುದ್ಧ ಜನಜಾಗೃತಿ ಪ್ರಗತಿಪರ ಸಂಘಟನೆಗಳ ಮೂಲಕ ಹೋಗಿ ಸ್ವಾಮಿಯನ್ನು ಪ್ರಶ್ನಿಸಿದ್ದಾರೆ.
- ತಮ್ಮ ಮಾನ-ಪ್ರಾಣ ರಕ್ಷಣೆ ಬೇಡಿ ಪೊಲೀಸ್ ಠಾಣೆಯ ಮೊರೆಹೊಕ್ಕ ಹೆಂಗಸರನ್ನೇ ಭೋಗಿಸಲು ಮುಂದಾದ ಪೊಲೀಸರ ವಿರುದ್ದ, ಕುದುರೆಮೋತಿಯ ನೀಚ ಸ್ವಾಮೀಜಿಯ

ಅತ್ಯಾಚಾರದ ವಿರುದ್ಧ, ಮಹಿಳಾ ವಿರೋಧಿ ಮಹಿಳಾ ಪೊಲೀಸ್ ಇನ್ಸ್‌ಪೆಕ್ಟರ್ ವಿರುದ್ಧ ಮಹಿಳೆಯರ ಮೇಲೆ ನಡೆಯುತ್ತಿರುವ ನಿರಂತರ ದೌರ್ಜನ್ಯಗಳ ವಿರುದ್ಧ ಧರಣಿ ಮತ್ತು ಪ್ರತಿಭಟನಾ ಮೆರವಣಿಗೆ ಮಾಡಿದ್ದಾರೆ.

- ಮಾಧ್ಯಮಗಳಲ್ಲಿ ಸಿನಿಮಾಗಳಲ್ಲಿ ಜಾಹೀರಾತುಗಳಲ್ಲಿ ಹೆಣ್ಣಿನ ಅಶ್ಲೀಲ ಚಿತ್ರಣದ ವಿರುದ್ಧ ಪ್ರತಿಭಟಿಸಿ ಅಂಥವುಗಳನ್ನು ನಿಷೇಧಿಸುವಲ್ಲಿ ಯಶಸ್ವಿಯಾಗಿದ್ದಾರೆ.
- ಚಂದ್ರಗುತ್ತಿಯಲ್ಲಿ ನಡೆದ ಬೆತ್ತಲೆ ಸೇವೆ ವಿರುದ್ಧ ಪ್ರಗತಿಪರ ಸಂಘಟನೆಯೊಂದಿಗೆ ಅಲ್ಲಿಗೆ ಹೋಗಿ ಪ್ರತಿಭಟನೆ ಮಾಡಿದ್ದಿದೆ.
- ೧೯೮೬ರಲ್ಲಿ ಕೋಮು ಗಲಭೆಗೆ ಸಿಕ್ಕಿದ ಸಂತ್ರಸ್ತರಿಗೆ ಸಹಾಯ ಅಲ್ಲದೆ ೧೯೯೨ರಲ್ಲಿ ನಡೆದ ಬಾಬ್ರಿ ಮಸೀದಿ ಧ್ವಂಸದ ಹಿನ್ನಲೆಯಲ್ಲಿ ಮೈಸೂರಿನಲ್ಲಿ ನಡೆದ ಹಿಂಸಾಚಾರದ ಸಂದರ್ಭದಲ್ಲಿ ಬಲಿಯಾದವರ ಕುಟುಂಬಳಿಗೆ ಸಾಂತ್ವನ ಮತ್ತು ಸಹಾಯ ಮಾಡಿದ್ದಾರೆ.
- ರಂಗಾಯಣದಲ್ಲಿ ನಡೆದ 'ಮಹಿಳೆ ಮತ್ತು ರಂಗಭೂಮಿ ಕುರಿತ ಕಾರ್ಯಗಾರದಲ್ಲಿ ಭಾಗವಹಿಸಿದ್ದಾರೆ'.
- ಮುಂಬೈನ ಕೆಂಪು ದೀಪದಡಿಯಿಂದ ಮೈಸೂರಿಗೆ ಬಂದವರನ್ನು ಅವರವರ ತಾಯಿ ತಂದೆಯವರಿಗೆ ಒಪ್ಪಿಸಿ ಮನೆಗೆ ಸೇರಿಸುವ ಕೆಲಸವನ್ನು ಪೊಲೀಸ್ ಇಲಾಖೆಯ ಜತೆ ಸೇರಿ ನಿರ್ವಹಿಸಿದೆ.
- 'ದ್ವೇಷ ಬಿಟ್ಟು ದೇಶ ಕಟ್ಟು' ಎಂಬ ಪ್ರಗತಿಪರ ಕಾರ್ಯಕ್ರಮದಲ್ಲಿ 'ಸಮತಾ ವೇದಿಕೆ' ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದಲ್ಲದೆ ಹತ್ತು ಸಾವಿರ ರೂ. ದೇಣಿಗೆ ನೀಡಿ ಸಹಕರಿಸಿದೆ.
- ಸತಿ ಪದ್ಧತಿ ವಿರುದ್ಧ ಭ್ರೂಣ ಹತ್ಯೆಯ ವಿರುದ್ಧ ಹೋರಾಟ ಮಾಡಿದೆ.

ಹೀಗೆ ಹೇಳಿಕೊಳ್ಳಲಾಗದ ಅನೇಕ ಪ್ರಸಂಗಗಳು 'ಸಮತಾ ವೇದಿಕೆ'ಗೆ ಬರುತ್ತಿವೆ. ಅಸಹಾಯಕ ಹೆಣ್ಣು ಮಕ್ಕಳ ಕಣ್ಣೀರು ಒರೆಸುವ ಕೆಲಸವನ್ನು 'ಸಮತಾ ವೇದಿಕೆ' ಮೌನವಾಗಿ ಮಾಡುತ್ತಾ ಬಂದಿದೆ.

'ಸಮತಾ ವೇದಿಕೆ' ಒಂದು ಸ್ವಾಯುತ್ತ ಸೇವಾ ಸಂಸ್ಥೆ' ಈ ಸಮಾಜಕ್ಕೆ ಅದರ ನೆರವಿನಿಂದ ಅಗತ್ಯವಿರುವವರೆಗೆ ಅದು ಬದುಕಿರುತ್ತದೆ. ತನ್ನ ಇತಿಮಿತಿಯಲ್ಲಿ ಅನೇಕ ಕಾರ್ಯಗಳನ್ನು ಅದು ಮಾಡಿದೆ.

- ೧೯೯೫ರಲ್ಲಿ ರಾಜ್ಯ ಮಟ್ಟದ ಮಹಿಳಾ ಸಮಾವೇಶವನ್ನು ನಡಸಿದೆ.
- ಸಮತಾ ಸಮಾಚಾರ ಪತ್ರಿಕೆಯನ್ನು ಪ್ರಕಟಿಸಿ ಜನರ ಅರಿವಿಗೆ ಶ್ರಮಿಸಿದೆ.

❖ ೧೯೮೪ರಿಂದ ಸತತ ಹತ್ತು ವರ್ಷಗಳ ಕಾಲ ಸರ್ಕಾರದ ಮೇಲೆ ಮಹಿಳಾ ಪೋಲೀಸ್ ಠಾಣೆ ಸ್ಥಾಪಿಸಲು ಒತ್ತಡ ಹೇರಿ ೧೯೯೪ರಲ್ಲಿ (ಮೈಸೂರು, ಧಾರವಾಡ, ಹುಬ್ಬಳ್ಳಿ, ಬೆಂಗಳೂರು, ಗುಲ್ಬರ್ಗ) ಮಹಿಳಾ ಪೋಲೀಸ್ ಠಾಣೆ ಸ್ಥಾಪನೆಗೆ ಶ್ರಮಿಸಿದೆ.

❖ ಮುಂಬೈ, ದೆಹಲಿ, ಜೈಪುರ, ತಿರುವನಂತಪುರ, ಪಾಟ್ನಾ ಮತ್ತು ಹೈದರಾಬಾದುಗಳಲ್ಲಿ ನಡೆದ ರಾಷ್ಟ್ರೀಯ ಮಹಿಳಾ ಸಮಾವೇಶವದಲ್ಲಿ ಭಾಗವಹಿಸಿದೆ.

❖ ಬಾಂಗ್ಲಾ, ಇಂಗ್ಲೆಂಡ್, ಅಮೇರಿಕಾ, ಕೆನಡ ದೇಶಗಳಲ್ಲಿ ಮಹಿಳಾ ಸಂಘಟನೆ ಕುರಿತ ಪ್ರಬಂಧಗಳನ್ನು ಸಮತಾ ವೇದಿಕೆಯ ಸದಸ್ಯೆಯರು ಮಂಡಿಸಿದ್ದಾರೆ.

❖ ಸಮಾತಾ ವೇದಿಕೆ ಕುರಿತ ಯೋಜನಕಾರ್ಯ ಅಲ್ಲದೆ ಅಧ್ಯಯನ ನಡೆಸಿ ರಚಿಸಿದ ಮಹಾ ಪ್ರಬಂಧಕ್ಕೆ ಕನ್ನಡ ವಿಶ್ವವಿದ್ಯಾನಿಲಯದಿಂದ ಪಿ.ಎಚ್.ಡಿ ಪದವಿಯನ್ನು ಒಬ್ಬರು ಪಡೆದಿದ್ದಾರೆ.

❖ ೨೦೦೨ರ ಪ್ರಜಾರತ್ನಾ ಪ್ರಶಸ್ತಿ ಪಡೆದ ಕೀರ್ತಿ 'ಸಮತಾ ವೇದಿಕೆಯದು'.

ಇಷ್ಟೇಲ್ಲಾ ಸಾಧನೆ ಸಿದ್ದಿಗಳ ನಡುವೆಯೂ ಮೌನವಾಗಿಯೇ ಸಮತಾ ವೇದಿಕೆ ತನ್ನ ಸಮೂಹ ಸಂಘಟನಾ ಶಕ್ತಿಯಿಂದಾಗಿ ಹೆಮ್ಮರವಾಗಿ ಬೆಳೆದಿದೆ. (ಡಾ||ಹಾಲತಿ ಸೋಮಶೇಖರ್ ಪುಟ ಸಂಖ್ಯೆ ೩೪೨-೩೫೨, ೨೦೦೭)

ಹೀಗೆ ಸ್ತ್ರೀಯು ಪುರುಷನಷ್ಟೇ ಸಮಾನ ಅವಕಾಶ, ಸಮಾನ ಹಕ್ಕು, ಮತ್ತು ಸ್ಥಾನಮಾನಗಳನ್ನು ಪಡೆಯಲು ಹಲವಾರು ಸಮಾಜ ಸುಧಾರಕರು ಮತ್ತು ಸರ್ಕಾರವು ಹಲವಾರು ಕಾರ್ಯಕ್ರಮಗಳ ಮೂಲಕ ಪುರುಷರಷ್ಟೇ ಸ್ತ್ರೀಯರಿಗೂ ಸಮಾನತೆಯನ್ನು ದೊರಕಿಸಿಕೊಡಲು ಅವಿರತವಾಗಿ ಶ್ರಮಿಸಿರುವುದನ್ನು ಕಾಣಬಹುದು.

## ಅಧ್ಯಾಯ – ೭

# ಆಧುನಿಕ ಭಾರತದಲ್ಲಿ ಮಹಿಳಾ ಪರ ಚಿಂತನೆ

ಹತ್ತೊಂಬತ್ತನೆಯ ಶತಮಾನದಿಂದಿಚೆಗೆ ಭಾರತದ ಮಹಿಳೆಯರ ಬಗೆಗಿನ ಚಾರಿತ್ರಿಕ ಸಂಗತಿಗಳ ದಾಖಲೆಗಳು ದೊರೆಯುವುದು. ಇವು ಸಂಪೂರ್ಣವಾಗಿ ವಸಾಹತುಶಾಹಿ ಅನುಭವಗಳ ಉತ್ಪನ್ನಗಳೇ ಪ್ರಾಚೀನ ಯುಗದಲ್ಲಿ ಮಹಿಳೆಯರ ಸ್ಥಿತಿಗಳು ಉತ್ತಮ ಸ್ಥಿತಿಯಲ್ಲಿದ್ದಿರಬಹುದಾದರೂ ಸಾಕಷ್ಟು ಧೀರ್ಘ ಕಾಲದಿಂದಲೇ ಅವು ದುಸ್ಥಿತಿಗಿಳಿಯುತ್ತಾ ಬಂದಿರುವ ಸಂಗತಿಯನ್ನು ಈ ದಾಖಲೆಗಳು ತಿಳಿಸುತ್ತವೆ. ಅಥವಾ ಖಚಿತಪಡಿಸುತ್ತವೆ. ಇದಾದ ನಂತರ ಬ್ರಿಟೀಷರ ಆಗಮನವಾಯಿತು. ತುಂಬಾ ಧೀರ್ಘಕಾಲದವರೆಗೆ ಚಲನೆಯೇ ಇಲ್ಲದೆ ಸ್ಥಗಿತವಾಗಿದ್ದ ಮಹಿಳೆಯರ ಸ್ಥಿತಿಗತಿಗಳು ಹಂತ–ಹಂತವಾಗಿ ಪ್ರಗತಿಯ ಪಥದಲ್ಲಿ ಆಧುನಿಕತೆಯೆಡೆಗೆ ದಾಪುಗಾಲಾಕಿದವು. ಬ್ರಿಟಿಷ್ ಮಿಷನರಿಗಳು ಭಾರತೀಯ ಸಮಾಜದಲ್ಲಿದ್ದಂತಹ ಗುಣದೋಷಗಳನ್ನು ಟೀಕೆಗೊಳಪಡಿಸಿ ಸುಧಾರಣೆ ಮಾಡಲು ಪ್ರಯತ್ನಿಸಿದ ಭಾರತೀಯ ಸಮಾಜ ಸುಧಾರಕರು ಕೂಡಿಯೇ ಶತಶತಮಾನಗಳಿಂದ ನಡೆದುಬಂದಿದ್ದ ವಂಚನೆ ಮತ್ತು ಅನ್ಯಾಯಗಳನ್ನು ಸರಿಪಡಿಸುವ ಮೂಲಕ ಇಲ್ಲೊಂದು ಸುವರ್ಣ ಯುಗವನ್ನು ಆರಂಭಿಸುವ ಸವಿಗನಸು ಕಂಡರು.

ಯೂರೋಪಿಯನ್ ಪ್ರಭಾವಿತ ಚರಿತ್ರೆಗಳು, ಅವು ಗುರುತಿಸಿದ ಭಾರತೀಯ ಪಠ್ಯಗಳೂ ಸ್ತ್ರೀಗೂ ವಿಶಿಷ್ಠತೆ ಎಂಬುದಿರುತ್ತದೆ ಎಂದೇ ಹೇಳ್ತಾವೆ. ಭಾರತೀಯ ಪಠ್ಯಗಳು ಮಹಿಳೆಯರು ಸ್ವಾಭಾವಿಕವಾಗಿ ಅರ್ಪಣಾ ಮನೋಭಾವದವರೂ, ತ್ಯಾಗಮಯಿಗಳು ಆಗಿರುತ್ತಾರಾದರೂ, ಅಗತ್ಯ ಬಿದ್ದಲ್ಲಿ ಪ್ರತಿಭಟನೆಯನ್ನು ಒಡ್ಡುವ ಅಪಾಯಕಾರಿಗಳು ಆಗಬಲ್ಲರು ಎನ್ನುತ್ತೇವೆ. (೨೦೦೧, ಪು ೧)
ವಿಶ್ವಸಂಸ್ಥೆಯು ೧೯೭೦ರಲ್ಲಿ ಇಡೀ ಪ್ರಪಂಚದ ಗಮನವನ್ನು ಮಹಿಳೆಯರ ಸ್ಥಿತಿಗತಿಗಳ ಮೇಲೆ ಕೇಂದ್ರೀಕರಿಸಲು ಹೇಳಿತು. ಈ ವಿಷಯಕ್ಕೆ ಸಂಬಂಧಿಸಿದಂತೆ ಮಾಹಿತಿಗಳನ್ನು ಸಂಗ್ರಹಿಸಿ ವರದಿಗಳನ್ನು ಸಿದ್ದಪಡಿಸಲು ಅನುಕೂಲವಾಗುವಂತೆ ಸಮಿತಿಗಳನ್ನು ನೇಮಿಸಬೇಕೆಂದು ಸದಸ್ಯ ರಾಷ್ಟ್ರಗಳಿಗೆ ಸೂಚಿಸಿತು. ಭಾರತ ಹಾಗೂ ಇನ್ನಿತರ ರಾಷ್ಟ್ರಗಳು ಮಹಿಳೆಯರ ಸ್ಥಿತಿಗತಿಗಳ ಅಧ್ಯಯನವನ್ನು ಕೈಗೊಳ್ಳುವ ಸಲುವಾಗಿ ಆಯೋಗಗಳನ್ನು ರಚಿಸಿದವು. ವಿಶ್ವಸಂಸ್ಥೆಯು ೧೯೭೫ ನ್ನು ಅಂತರರಾಷ್ಟ್ರೀಯ ಮಹಿಳಾ ವರ್ಷವೆಂದು ಘೋಷಿಸಿತು.

ಈ ವೇಳೆಗಾಗಲೆ ಮಹಿಳೆಯರ ಸ್ಥಿತಿಗತಿಗಳನ್ನು ಕುರಿತು ಪ್ರಶ್ನೆಗಳನ್ನು ಪರಿಶೀಲಿಸುವ ಉದ್ದೇಶದಿಂದಲೇ ಅದ್ಯಯನ ನಿರತವಾಗಿದ್ದ ಸಣ್ಣದಾದರೂ ದೃಢ ನಿಶ್ಚಯದ ಪಾಶ್ಚಾತ್ಯ ಹಾಗೂ ಭಾರತೀಯ ವಿದ್ವಾಂಸರ ವಲಯಗಳಲ್ಲಿ ಈ ಅಂತರರಾಷ್ಟ್ರೀಯ ನಿರ್ಣಯಕ್ಕೆ ಒಳ್ಳೆಯ ಸ್ವಾಗತ ದೊರೆಯಿತು. ಮಹಿಳಾ ಚರಿತ್ರೆಯನ್ನು ಕಾಣಿಸುವವರಲ್ಲಿ ನೇತಾರಳೆನಿಸಿದ ಅಮೇರಿಕಾದ

ಜರ್ಡಾತಾಲರ್ನರ್ ಇತಿಹಾಸ ಸಮಾವೇಶವೊಂದರ ಅಧ್ಯಕ್ಷತೆಯನ್ನು ವಹಿಸಿದ ಪ್ರಪ್ರಥಮ ಮಹಿಳೆ ಎನಿಸಿ ಭಾಷಣ ಮಾಡುತ್ತಾ 'ಮಹಿಳೆಯರಿಗೆ ಒಂದು ಚರಿತ್ರೆ ಇದೆ', ಮಹಿಳೆಯರು ಚರಿತ್ರೆಯಲ್ಲಿ ಇದ್ದಾರೆ' ಎಂದು ಘೋಷಿಸಿದರು.

ಪಾಶ್ಚಾತ್ಯರಲ್ಲಿ ಮಹಿಳಾ ಚರಿತ್ರೆಯನ್ನು ಕುರಿತಂತೆ ಮೂರು ಬಗೆಯ ಶೋಧಗಳನ್ನು ಕಾಣುತ್ತವೆ. ಇವುಗಳಲ್ಲಿ ಅತೀ ಪ್ರಾಚೀನವಾದುದು ಕೂಡಿಸುವ ಚರಿತ್ರೆ ಅಂದರೆ, ಮೂಲಗಳನ್ನು ಮರುಪರೀಕ್ಷೆಗೊಳಪಡಿಸುವ ಮೂಲಕ ಮಹಿಳೆಯರ ಕೊಡುಗೆಗಳನ್ನು, ಅವರ ಪಾತ್ರಗಳನ್ನೂ ಶೋಧಿಸುವ ಕೆಲಸ, ಎರಡನೆಯ ಮಾದರಿ 'ಲಿಂಗ ವ್ಯವಸ್ಥೆಯ ಪರಿಗಣನೆಯ ಚರಿತ್ರೆ' ಇಲ್ಲಿ ಈವರೆಗಿನ ಇತಿಹಾಸ ಲೇಖನ ಶಾಸ್ತ್ರದ ಸಂಗತಿಗಳನ್ನು ಹೊಸ ಸ್ತ್ರೀವಾದಿ ದೃಷ್ಟಿಕೋನದಿಂದ ಪರಿಶೀಲಿಸಿ, ಸಾಮಾಜಿಕ ಸಂಬಂಧಗಳ ವಿಶ್ಲೇಷಣೆಯಲ್ಲಿ ಲಿಂಗವ್ಯವಸ್ಥೆಯ ಭೇದ ಭಾವವೇ ಮುಖ್ಯ ಸೂತ್ರವಾಗುತ್ತದೆ ಎಂದು ಸ್ಥಾಪಿಸುವ ಚಿಂತನೆ ಇರುತ್ತದೆ. ಮೂರನೇಯ ಶೋಧ ' ಕೊಡುಗೆಯ ಚರಿತ್ರೆ' ಪಿತೃ ಪ್ರಧಾನವು ಮಹಿಳೆಯರ ಚಟುವಟಿಕೆಗಳನ್ನು ಸದಾ ಹತ್ತಿಕ್ಕುತ್ತಲೇ ಇರುತ್ತದೆ ಎಂಬುದನ್ನು ಗುರುತಿಸಿದ ಈ ವಿಧಾನ ಮಹಿಳಾ ಸಂಚಾಲನೆಗೆ ಅತ್ಯಂತ ಉಪಯುಕ್ತವಾದುದಾಗಿದೆ.

ವಸಾಹತುಶಾಹಿ ಹಿನ್ನೆಲೆ ಇರುವ ಪರಿಸ್ಥಿತಿಯಲ್ಲಿ 'ಮಹಿಳಾ ಚರಿತ್ರೆ' ಯನ್ನು ಬರೆಯುವುದರಿಂದ ಇನ್ನಷ್ಟು ಸವಾಲುಗಳನ್ನು ಆಹ್ವಾನಿಸುತ್ತದೆ. ಭಾರತದ ಮಹಿಳೆಯರನ್ನು ಅವರ ಬರ್ಬರ ಸಂಸ್ಕೃತಿ ಮತ್ತು ಸಮಾಜದ ಸಂಕೋಲೆಗಳಿಂದ ವಿಮುಕ್ತಿಗೊಳಿಸಿ ರಕ್ಷಿಸುವ, ಈ ದೇಶದವರನ್ನು ನಾಗರೀಕನ್ನಾಗಿಸುವ ಘನ ಧ್ಯೇಯವನ್ನು ಬ್ರಿಟಿಷರು ಹೊಂದಿದ್ದರು ಎಂದೇ ವಸಾಹತುಶಾಹಿ ಇತಿಹಾಸಕಾರರು ಹೇಳಿಕೊಂಡು ಬಂದಿದ್ದಾರೆ. (ಆ.ಛಾಯ ೨೦೦೧ ಪು.೩)

ಗಾಂಧಿಜೀಯವರು 'ಮಹಿಳಾ ಪ್ರಶ್ನೆ'ಯನ್ನು ಪುನಶ್ಚೇತನಗೊಳಿಸಿದರು ಎನ್ನಬಹುದು. ರಾಷ್ಟ್ರೀಯವಾದಿ ಇತಿಹಾಸಕಾರರು ಮಾತ್ರ ಗಾಂಧೀಯವರು ಮಹಿಳೆಯರ ಸಾರ್ವಜನಿಕ ಬದುಕಿನಲ್ಲಿ ಪ್ರವೇಶ ಪಡೆಯುವಂತೆ ಮಾಡಿ, ಅವರ ಸ್ವಂತದ ಸಮಸ್ಯೆಗಳನ್ನು ಸ್ವತಃ ಬಗೆಹರಿಸಿಕೊಳ್ಳಲು ನೆರವಾಗುವ ಸಾಧನಗಳನ್ನು ಅವರಿಗೆ ಒದಗಿಸಿದರು ಎಂದು ನಿರ್ಣಾಯಕವಾಗಿ ಬರೆದರು.

ಗಾಯಿತ್ರಿ ಸ್ಪೀವಾಕ್ ಅವರು Can the subaltern speak (ಅಲಕ್ಷಿತರು ಮಾತನಾಡಲು ಸಾಧ್ಯವೇ) ಎಂಬ ಅತ್ಯಂತ ಗಂಭೀರವಾದ ಒಂದು ಲೇಖನವನ್ನು ಬರೆದರು. ವಸಾಹತುಶಾಹಿ ಮಹಿಳೆಯರ ಚರಿತ್ರೆಯನ್ನು ಬರೆಯುವುದು ಎಷ್ಟೊಂದು ಸಮಸ್ಯಾತ್ಮಕ ಎಂಬುದನ್ನಾಕೆ ಇದರಲ್ಲಿ ವಿವರಿಸಿದ್ದಾಳೆ.

ಪ್ರಚಲಿತ ಬಂಡಾಯವಾದ ಇತಿಹಾಸಕಾರರು ವಸಾಹತುಶಾಹಿ ಆಡಳಿತದಲ್ಲಿ ಮಹಿಳೆಯರ ಆ ಅನುಭವಗಳೇನು ಹಾಗೂ ಮಹಿಳೆಯರು ಮತ್ತು 'ಮಹಿಳಾ ಪ್ರಶ್ನೆಗಳು' ವಸಾಹತುಶಾಹಿ ರಾಜಕಾರಣವನ್ನು ಹೇಗೆ ಪ್ರಭಾವಿಸಿದವು ಎಂಬ ಸಂಗತಿಗಳನ್ನು ಕುರಿತು ಗಂಭೀರವಾದ ಬರಹಗಳನ್ನು ಹೊರ ತರುತ್ತಿದ್ದಾರೆ.

ಭಾರತೀಯ ಮಹಿಳೆಯರಿಗೆ ಯಾವುದೇ ಅವಕಾಶಗಳ ಬಾಗಿಲು ತೆರೆಯುವುದು ಕಷ್ಟಸಾಧ್ಯವಾದಾಗ ಮೊದಲಿಗೆ ಅಂತಹ ಬವಲಾವಣೆಯನ್ನು ಒದಗಿಸಿದ ಕೀರ್ತಿ ಬ್ರಿಟಿಷರಿಗೆ ಸಲ್ಲುತ್ತದೆ. ಸುಧಾರಣೆಯ ಕಾರ್ಯಕ್ರಮಗಳ ಪಟ್ಟಿಯಲ್ಲಿ 'ಶಿಕ್ಷಣ'ಕ್ಕೆ ದೊರೆತ ಆದ್ಯತೆ ಮಹಿಳಾ ವಿಮೋಚನೆಯ ಹಾದಿಯನ್ನು ಸುಗಮಗೊಳಿಸಿದ ಮೊದಲ ಸಂಗತಿಯಾಯಿತು. ಮಹಿಳೆಯರನ್ನು ಸಾರ್ವಜನಿಕ ರಂಗಕ್ಕೆ ಹೊರತಂದ ಕೀರ್ತಿ ಗಾಂಧೀಜಿಯವರದು ಎಂದು ಹೇಳಲಾಗುತ್ತದೆ.

ಮಹಿಳೆಯರ ಸ್ಥಿತಿಗತಿಗಳನ್ನು ಉತ್ತಮ ಪಡಿಸುವ ಬಗ್ಗೆ ಗಮನಹರಿಸಿದ ಸುಧಾರಣಾವಾದಿಗಳ ಪಟ್ಟಿಯಲ್ಲಿ ರಾಂ ಮೋಹನ್‌ರಾಯ (೧೭೭೨-೧೮೩೩)ರ ಹೆಸರು ಮೊದಲಿಗೆ ಬರುತ್ತದೆ. ಚರಿತ್ರೆಕಾರರು ಆತನನ್ನು 'ಆಧುನಿಕ ಇಂಡಿಯಾದ ಪಿತಾಮಹ'ನೆಂದೂ, ಮಹಿಳೆಯರ ಹಕ್ಕುಗಳ ನೇತಾರನೆಂದೂ. ಸ್ತ್ರೀವಾದಿಯೆಂದೂ ಕರೆದಿದ್ದಾರೆ.

ರಾಸ್ಸುಂದರಿದೇವಿ (೧೮೦೯) ಎಂಬ ಬಂಗಾಲಿ ಹೆಂಗಸು ತನ್ನ ಆತ್ಮಕತೆ 'ಅಮರ್ ಜೀಬನ್' (ನನ್ನ ಜೀವನ) ಬರೆದಳು. ೧೮೭೬ರಲ್ಲಿ ಅದು ಪ್ರಕಟವಾಯಿತು. ತಾನು ಬರೆದ ಕೃತಿಯಲ್ಲಿ ಆಕೆ ಗೃಹಣಿಯಾಗಿ ತಾಯಿಯಾಗಿ ತನ್ನ ದಿನನಿತ್ಯ ಜೀವನದ ಅನುಭವಗಳನ್ನು ವಿವರವಾಗಿ ಬರೆದಿದ್ದಾಳೆ. ಓದುವ ಗೀಳನ್ನು ತಲೆಗೆರೆಸಿಕೊಂಡ ಆಕೆ ತನ್ನ ಮಗನ ಪುಸ್ತಕದಿಂದ ಬರೆಯುವ ಖಾಲಿ ಹಾಳೆಯೊಂದನ್ನು ಕದ್ದು ಹರಿದು ಅಡಿಗೆ ಮನೆಯಲ್ಲಿ ಅವಿಸಿಕೊಂಡು ತನ್ನ ಶಿಕ್ಷಣವನ್ನು ಛಲಬಿಡದೆ ರೂಢಿಸಿಕೊಂಡು ಕೊನೆಗೊಂದು ದಿನ ಓದುಬರಹವನ್ನು ಕಲಿತುಕೊಂಡಳು. ಈಗಿನ ಕಾಲದ ತಂದೆ-ತಾಯಿಗಳು ಮಕ್ಕಳ ಶಿಕ್ಷಣದ ಬಗ್ಗೆ ಸಾಕಷ್ಟು ಮುಜುವರ್ಜಿ ವಹಿಸುತ್ತಾರೆ. ಆದರೆ ಅಂದಿನ ಕಾಲದಲ್ಲಿ ಶಿಕ್ಷಣವನ್ನು ಪಡೆಯುವುದಕ್ಕಾಗಿ ಸಾಕಷ್ಟು ಹೋರಾಟವನ್ನು ಮಾಡಬೇಕಾಗಿತ್ತು.

ಸಮಕಾಲೀನ ಭಾರತದ ಖ್ಯಾತ ಸ್ತ್ರೀವಾದಿ ವೀಣಾಮಜುಂದಾರ್ ಅವರು ಸತಿಪದ್ಧತಿ ನಿಷೇಧ ಕಾಯಿದೆ ಜಾರಿಗೆ ಬಂದ ಮೇಲೂ ಅವರ ಮುತ್ತಜ್ಜಿ ಸಹಗಮನ ಮಾಡಿದ ಬಗ್ಗೆ ಹೇಳುತ್ತಾರೆ. ಮಕ್ಕಳು ಮೊಮ್ಮಕ್ಕಳು ತೀರಾ ವಿರೋಧಿಸಿದರು ಆಕೆ ತನ್ನ ಸ್ವ-ಇಚ್ಛೆಯಿಂದ ಪತಿಯೊಂದಿಗೆ ಚಿತೆಯನ್ನು ಏರಿದಳೆಂದೂ ಆಕೆಯ ಮನೆತನದ ಹಿರಿಯರು ಹೇಳ್ತಾರೆ. ಒಬ್ಬ ಮೊಮ್ಮಗನ ಹೆಂಡತಿಯಂತೂ ಸತಿಪದ್ಧತಿಯನ್ನು ಆಚರಿಸುವ ಹೆಂಗಸಿನ ಆಶೀರ್ವಾದವನ್ನು ತಾನು ಪಡೆಯುವುದಿಲ್ಲವೆಂದೂ

ವಿರೋಧಿಸುತ್ತಾಳೆ. ಈ ಕ್ರಾಂತಿಕಾರಿ ಸೊಸೆಯನ್ನು ನಿಜವಾದ ಛಲದ ಗಟ್ಟಿಗಿತ್ತಿ ಹೆಣ್ಣೆಂದು ವೀಣಾ ಮಜುಂದಾರರ ಕುಟುಂಬದವರು ನೆನೆಸಿಕೊಳ್ಳುತ್ತಾರೆ.

ಹತ್ತೊಂಬತ್ತನೆಯ ಶತಮಾನದಲ್ಲಿ 'ಮಹಿಳಾ ಪ್ರಶ್ನೆಗಳು ದೊಡ್ಡ ಪ್ರಮಾಣದಲ್ಲಿ ಕೇಳತೊಡಗಿದವು. ಆದರೆ ಇಲ್ಲಿ ಮಹಿಳೆಯರಿಗೆ ಏನು ಬೇಕು? ಎಂಬ ಪ್ರಶ್ನೆಯೇ ಬರಲೇ ಇಲ್ಲ; ಬದಲಿಗೆ ಅವರನ್ನು ಆಧುನೀಕರಿಸುವುದು ಹೇಗೆ? ಎಂಬ ಪ್ರಶ್ನೆಯೇ ಮುಖ್ಯವಾಯಿತು. ೧೮೪೮ರಲ್ಲಿ ಇಂಡಿಯಾಕ್ಕೆ ಭೇಟಿ ನೀಡಿದ ರೆವರೆಂಡ್ ಇ ಸ್ಟೋರೋ ಬಂದದ್ದೇ ಇಲ್ಲಿನ ಮಹಿಳೆಯರ ಹೀನಾಯ ಸ್ಥಿತಿಗತಿಗಳು ಇಂಡಿಯಾದಲ್ಲಿ ಒಗ್ಗಟ್ಟಿಲ್ಲದಿರುವುದರ ಮುಖ್ಯ ಕಾರಣ ಎಂದೇ ಸಾರಿದನು. ಇಸ್ರೇಲ್, ರೋಮ್ ಮತ್ತು ಪಶ್ಚಿಮ ಯೂರೋಪುಗಳನ್ನು ಶಕ್ತ ರಾಷ್ಟ್ರಗಳೆಂದು ಪಟ್ಟಿ ಮಾಡುವ ಸ್ಟೋರೋ, ಆ ರಾಷ್ಟ್ರಗಳು ತಮ್ಮ ಮಹಿಳೆಯರಿಗೆ ನೀಡಿರುವ ಉನ್ನತ ಸ್ಥಾನಮಾನಗಳಿಂದಾಗಿ ಅವು ನೈತಿಕ ಧೈರ್ಯ ಹಾಗೂ ಮೌಲ್ಯಗಳನ್ನು ಗಳಿಸಿವೆ ಎಂದೂ ವಿವರಿಸುತ್ತಾನೆ. ತಾವು ಮಿಲಿಟರಿ ಶಕ್ತಿಯನ್ನು ಬಳಸುವುದಕ್ಕೂ ಇಲ್ಲಿನ ಮಹಿಳೆಯರ ಹೀನಾಯ ಸ್ಥಿತಿಗತಿಗಳಿಗೂ ಸಂಬಂಧ ಕಲ್ಪಿಸಿದ ಬ್ರಿಟಿಷ್‌ರು ಇಂಡಿಯಾದ ಮೇಲೆ ತಮ್ಮ ಪ್ರಭುತ್ವ ಹೇರಬೇಕಾದ್ದು ತೀರಾ ಸಹಜ ಹಾಗೂ ಅನಿವಾರ್ಯ ಎಂದೇ ತೀರ್ಮಾನಿಸಿದರು.

೧೯ ನೇಯ ಶತಮಾನದ ಕೊನೆಯ ದಶಕದ ವೇಳೆಗೆ ಸುಧಾರಣಾವಾದಿ ಆದರ್ಶ ಸ್ಪಷ್ಟಗೋಚರವಾಗಿತ್ತು. ಈ ಆದರ್ಶ ಪರಿಕಲ್ಪನೆ, ಅದರಲ್ಲೂ ಮಹಿಳೆಯರನ್ನು ಕುರಿತಂತೆ , ಇಪ್ಪತ್ತನೆಯ ಶತಮಾನದುದ್ದಕ್ಕೂ ಗಟ್ಟಿಯಾಕಾರದ್ದಾಗಿಯೆ ಉಳಿದು ಬಂತು. ಇಂಡಿಯಾದ ಮಹಿಳೆಯರು ಕನಿಕರಕ್ಕೆ ಪಾತ್ರರಾದವರು ಎಂಬಲ್ಲಿಂದಲೇ ಈ ಆದರ್ಶ ಮೊದಲಾಗುತ್ತಿದ್ದದ್ದು. ನವವಿವಾಹಿತ ತರುಣಿಯರು ತಮ್ಮ ನಿತ್ಯಜೀವನದ ಬಗೆಗೆ ಸಾಮಾನ್ಯ ತಿಳುವಳಿಕೆಗಳನ್ನು ಪಡೆದುಕೊಳ್ಳಬೇಕಾದ ಅಗತ್ಯ ಎಷ್ಟು ಮಹತ್ವದೆಂಬುದನ್ನು ಕುರಿತು ೧೮೭೩ ರಲ್ಲಿ ಮಹೇಶಚಂದ್ರದೇವ ಅವರು ಸಮಾಜಕ್ಕೆ ತಿಳುವಳಿಕೆ ಹೇಳಲು ಉದ್ದೇಶಿಸಿದ ಭಾಷಣದ ಒಂದು ಭಾಗದಲ್ಲಿ ಈ ನಮ್ಮ ಹಿಂದೂ ಮಹಿಳೆಯರು ಎಂತಹ ದೈನ್ಯ ಹಾಗೂ ಶೋಕನೀಯ ಪರಿಸ್ಥಿತಿಗಳಲ್ಲಿ ಸಿಲುಕಿಬಿದ್ದಿದ್ದಾರೆಂಬುದನ್ನು ಸೂಕ್ಷ್ಮವಾಗಿ ಗಮನಿಸಿದ ಯಾವುದೇ ಸಂವೇದನಾಶೀಲ ಪುರುಷರು ಅವರ ಬಗ್ಗೆ ಕನಿಕರಿಸದೇ ಉಳಿಯುವುದು ಸಾಧ್ಯವೇ ಇಲ್ಲ . ಆ ಮಹಿಳೆಯರು ತಮ್ಮ ಗಂಡಂದಿರಲ್ಲಿ ದಯೇದಾಕ್ಷಿಣ್ಯಗಳಿಂದ ವರ್ತಿಸುತ್ತಾರೆ, ನಯ ನಾಜೂಕು ಶ್ರದ್ದೆಗಳಿಂದ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ , ವಿಧೇಯರಾಗಿ ಅವರನ್ನು ಸ್ವೀಕರಿಸುತ್ತಾರೆ. ಆದರೂ ಗಂಡಂದಿರು ಅವರನ್ನು ಬೈದು ಗದರಿಸುತ್ತಾರೆ . ಎಷ್ಟೋಸಲ ಕಾರಣವಿಲ್ಲದೆ ಹೊಟ್ಟೆಕಿಚ್ಚು ಮತ್ತು ಅಹಂಕಾರಗಳಿಂದ ಮತ್ತರಾಗಿ ಕ್ರೂರವಾಗಿ ಶಿಕ್ಷಿಸುತ್ತಾರೆ. ಎಂದೆಲ್ಲಾ ಮರುಗುತ್ತಾ ಹೋಗಿದ್ದಾರೆ. ದೇವ ಅವರ ಭಾಷಣದ ವಸ್ತು 'ಇಂಡಿಯಾದ ಮಹಿಳೆಯರ ಬವಣೆಗಳು' ಎಂಬುದು ಇಂಡಿಯಾದ ಸಮಾಜವನ್ನ ಟೀಕಿಸುವ ಪಾಶ್ಚಾತ್ಯ ಟೀಕಾಕಾರರ ಪ್ರತೀಧ್ವನಿಯೇ ಆದ ಇಂತಹ ಭಾಷಣಗಳೂ. ಬರಹಗಳೂ ಇಡೀ ಶತಮಾನದ್ದುದ್ದಕ್ಕೂ ಹರಿದಾಡಿದವು. ಆದರೆ ಇಂತಹ ಸ್ಥಿತಿಯ ಸುಧಾರಣೆಯ

ಪರವಾಗಿ ಹೋರಾಡಿದ ವಾದವೆಂದರೆ ಮಾನವತಾವಾದ ಎಂಬುದೊಂದೆ ಪಾಶ್ಚಾತ್ಯ ಕಲ್ಪನೆಗಳಿಂದಲೇ ಪ್ರೇರಣೆ ಪ್ರಭಾವಗಳನ್ನು ಪಡೆದ ಈ ಸುಧಾರಣಾ ವಾದಿಗಳು ತಮ್ಮ ಪರಂರೆಗಳ ಬಗೆಗೆ ಆಳವಾಗಿ ತಿಳಿದವರೇ ಆಗಿದ್ದರು ರಾಮಮೋಹನ್ ರಾಯ್ , ಪಂಡಿತ್ವಿದ್ಯಾಸಾಗರ್ ಸ್ವಾಮಿದಯಾನಂದ ಸರಸ್ವತಿಯಂತಹ ಹಲವರು ಪರಂಪರಾಗತ ಹಿಂದೂಶಾಸ್ತ್ರ ಗ್ರಂಥಗಳನ್ನು ಅಧ್ಯಯನ ಮಾಡಿದ ವಿದ್ವಾಂಸರೇ ಆಗಿದ್ದರು. ಇವರೂ ಕೂಡ ಭಾರತವು ಈಗ ಕತ್ತಲೆಯುಗದಿಂದ ಹೊರಬರುತ್ತಾ ಚೇತರಿಸಿಕೊಳ್ಳುತ್ತಿದೆ . ಎಂದೇ ವ್ಯಾಖಾನಿಸಿದರು. ಹಿಂದೊಮ್ಮೆ ನಮ್ಮಲ್ಲಿ ' ಸ್ವರ್ಣಯುಗ 'ವಿದ್ದದ್ದು ನಿಜ. ಆಗ ನಮ್ಮ ಮಹಿಳೆಯರನ್ನು ಉನ್ನತ ಸ್ಥಾನದಲ್ಲಿಟ್ಟು ಗೌರವಿಸಲಾಗುತ್ತಿತ್ತು .ಎಂಬುದು ಇವರು ಮುಖ್ಯವಾದವಾಗಿತ್ತು. (೨೦೦೧ ಪ್ರ ೨೩)

ಭಾರತದ ಮಹಿಳೆಯರ ಪರವಾಗಿ ತೀವ್ರವಾದ ಪ್ರಯತ್ನಗಳನ್ನು ಕೈಗೊಂಡ ಸುಧಾರಣಾವಾದಿಗಳ ಒಂದು ಪಟ್ಟಿಯನ್ನೆ ಮಾಡಬಹುದು . ಬಂಗಾಲದ ಈಶ್ವರಚಂದ್ರ ವಿದ್ಯಾಸಾಗರರು ಸ್ತ್ರೀ ಶಿಕ್ಷಣದ ನೇತಾರರೆನಿಸಿಕೊಂಡರು. ವಿಧವೆಯರ ಮರುವಿವಾಹವನ್ನು ಕಾಯ್ದೆಬದ್ದಗೊಳಿಸಲು ತೀವ್ರ ಪ್ರಚಾರ ಕೈಗೊಂಡರು. ಬ್ರಹ್ಮಸಮಾಜದ ಕೇಶವಚಂದ್ರ ಸೇನ್ ರವರು ಶಾಲೆಗಳಲ್ಲಿ ಪ್ರಾರ್ಥನಾ ಸಭೆಗಳಲ್ಲಿ , ಇನ್ನಿತರ ದಿನನಿತ್ಯದ ಪ್ರಸಂಗಗಳಲ್ಲಿ ರೂಢಿಗತ ಸ್ತ್ರೀ ಪಾತ್ರಗಳಿಗೆ ಹೊಸ ರೂಪಗಳನ್ನು ನೀಡಿದರು.

ಈ ಶತಮಾನದ ಕೊನೆಯ ವೇಳೆಗೆ ಬಂದ ವಿವೇಕಾನಂದರಂತೂ ಹಿಂದೂ ಪುನರುದ್ದಾರ ಚಟುವಟಿಕೆಗಳ ನಾಯಕತ್ವವನ್ನು ವಹಿಸಿ ಮಹಿಳೆಯರು ಈ ಪುನಶ್ಚೇತನ ಕ್ರಿಯೆಯಲ್ಲಿ ಶಕ್ತಿ ಸ್ವರೂಪರಾಗಬಲ್ಲರು ಎಂದು ಸಾರಿದರು .ಉತ್ತರಭಾರತದಲ್ಲಿ ಆರ್ಯಸಮಾಜವನ್ನು ಸಂಸ್ಥಾಪಿಸಿದ ಸ್ವಾಮಿದಯಾನಂದ ಸರಸ್ವತಿಯವರು ಸ್ತ್ರೀ ಶಿಕ್ಷಣಕ್ಕೆ ಪ್ರೋತ್ಸಾಹ ನೀಡಿದರು . ಅಸಮಾನ ವಯಸ್ಕ ಸ್ತ್ರೀ ಪುರುಷರ ನಡುವೆ ವಿವಾಹ, ವರದಕ್ಷಿಣೆ , ಬಹುಪತ್ನಿತ್ವಗಳಂತಹ ಪದ್ದತಿ ಗಳಾಗಿದ್ದು ಖಂಡನೀಯವಾಗಿದೆ ಎಂದಿದ್ದಾರೆ .

ಇದೇ ಸಂದರ್ಭದಲ್ಲಿ ರಾಧಾಸ್ವಾಮಿ ಯವರ ಅನುಯಾಯಿ ರಾಯ ಸಾಲಿಗರಾಮ ಹುಜೂರ ಮಹಾರಾಜನು 'ಪ್ರೇಮಪತ್ರ' ಎಂಬ ಗದ್ಯ ಕೃತಿಯಲ್ಲಿ ಸ್ತ್ರೀ ಉನ್ನತಿಯನ್ನು ಕಾಯ್ದುಕೊಳ್ಳುವಂತೆ ಬರೆದಿದ್ದಾರೆ . ಮುಸ್ಲಿಂರಲ್ಲಿ ಖ್ವಾಜಾ ಅಲ್ತಾಫ್ ಹುಸೇನ್ ಆಲಿ ಹಾಗೂ ಷೇಖ್ ಮಹಮ್ಮದ್ ಅಬ್ದುಲ್ಲಾರು ಹುಡುಗಿಯರಿಗೆ ಶಿಕ್ಷಣ ಮೊದಲು ಮಾಡಿದರು . ಇದೇ ಕಾಲದಲ್ಲಿ ಪಾರ್ಸಿ ಪತ್ರಕರ್ತ ಬಹ್ರಾಮ್ ಜಿ ಮಲಬಾರಿಯ 'ದ ಟೈಮ್ಸ್ ' ಪತ್ರಿಕೆಯಲ್ಲಿ ಬಾಲ್ಯ ವಿವಾಹ, ಬಲವಂತ ವಿಧವೆತನಗಳು ಯುವತಿಯರನ್ನು ಯುವತಿಯರ ಬದುಕಿನಲ್ಲಿ ತರುವ ದುರಂತಗಳನ್ನು ಕುರಿತು ಬರೆದ ಲೇಖನಗಳು ಬ್ರಿಟಿಷ್ ಓದುಗರ ಗಮನವನ್ನು ಸೆಳೆದವು . ಬಾಲವಿಧವೆಯರು ಶಿಕ್ಷಣ ಪಡೆಮ ಬಾಲಕಿಯರ ಶಾಲೆಯಲ್ಲಿ ಅಧ್ಯಾಪಕಿಯರಾಗಲು ಸೂಕ್ತವಾಗುವಂತಹ ಸಂಸ್ಥೆಗಳನ್ನು 'ಪೂನಾ'ದಲ್ಲಿ ಸ್ಥಾಪಿಸುವ ಮೂಲಕ ಧೊಂಡೂ ಕೇಶವ ಕರ್ವೆ ಯವರು ವಾಸ್ತವದ ಪರಿಹಾರವನ್ನು ಒದಗಿಸಿದರು .ಆರ್

ವೆಂಕಟರತ್ನಂ ನಾಯ್ಡು ಅವರು 'ದೇವದಾಸಿ ಪದ್ಧತಿ' ಯನ್ನು ವಿರೋಧಿಸಿ ಕೆಲಸ ಮಾಡಿದರು ವಿರೇಶ ಲಿಂಗಂ ಪಂತುಲು ಅವರು ವಿವಾಹ ಪದ್ದತಿಗಳಲ್ಲಿ ಸುಧಾರಣೆಗಳನ್ನ ತರಲು ಪ್ರಯತ್ನಿಸಿದರು . ಇವರಿಬ್ಬರು ಸ್ತ್ರೀ ಶಿಕ್ಷಣದ ಅವಕಾಶಗಳನ್ನು ಹೆಚ್ಚಿಸಲು ಸಹ ಶ್ರಮಿಸಿದರು . ಇವರೆಲ್ಲರು ಬಹುಮಟ್ಟಿಗೆ ವಿವಾಹ ಸ್ತ್ರೀ ಶಿಕ್ಷಣಗಳನ್ನು ಪ್ರಧಾನ ಮಹಿಳಾಸಂಗತಿಗಳೆಂದು ಭಾವಿಸಿದರೆಂಬುವುದು ಗಮನಾರ್ಹವಾದ ವಿಷಯ. ೧೯ ನೇ ಶತಮಾನದ ಈ ಎಲ್ಲಾ ಸುಧಾರಣಾ ವಾದಿಗಳು ಕ್ರಿಯಾಶೀಲ ಚಳುವಳಿಗಾರರಾಗಿದ್ದರೆಂಬುದು ಒಂದು ವಿಶೇಷ.

ಈಶ್ವರಚಂದ್ರರು ಸ್ತ್ರೀ ಶಿಕ್ಷಣವನ್ನು ಉತ್ತೇಜಿಸುವ ಕೆಲಸವನ್ನು , ಬಹುಪತ್ನಿತ್ವವನ್ನು ವಿರೋಧಿಸುವ ಕೆಲಸವನ್ನು ಅಷ್ಟೇ ಮುತುವರ್ಜಿಯಿಂದ ಮಾಡಿದರು. ವಿಧವಾ ಮರುವಿವಾಹವನ್ನು ಕುರಿತು ಬರೆದ ಮೊದಲ ಗ್ರಂಥ. ೧೮೫೫ರಲ್ಲೇ ಈಶ್ವರಚಂದ್ರರು ನಾವು ಬದುಕುತ್ತಿರುವ ಈ ಕಲಿಯುಗದಲ್ಲಿಯೂ ಈ ಪದ್ದತಿಗೆ ಅವಕಾಶವಿದೆ ಎಂದು ವಾದಿಸಿದರು, ೧೮೫೬ ರಲ್ಲಿ ಹಿಂದೂ ವಿಧವಾ ಮರುವಿವಾಹ ಕಾಯಿದೆಯನ್ನು ಜಾರಿಗೆ ತರಲಾಯಿತು, ಈ ಕಾಯಿದೆಯೂ ವಿಧವೆಯರ ಬದುಕನ್ನು ಎಷ್ಟು ಉದ್ದರಿಸಿತು ಎಂಬುದು ಪ್ರಶ್ನೆಯೇ ಆಗಿರಬಹುದಾದರು ಹೆಚ್ಚು ಮಾನವೀಯವೆನಿಸುವ ಸಮಾಜ ನಿರ್ಮಾಣದ ಬಗೆಗೆ ಈಶ್ವರಚಂದ್ರರು ಪ್ರಾಮಾಣಿಕವಾಗಿ ಆಶಿಸಿದ್ದರು ಎಂಬುದನ್ನಂತೂ ಒಪ್ಪಲೇಬೇಕು, ಎಮ್,ಜಿ,ರಾನಡೆಯವರು ೧೮೬೯ರಲ್ಲಿ ಪ್ರಾರ್ಥನಾ ಸಮಾಜ ಸ್ಥಾಪಿಸಿ ಅದರ ಮುಖಾಂತರ ಸ್ತ್ರೀ ಪುರುಷರಿಗೆ ಸಮಾನ ಅವಕಾಶ ಕಲ್ಪಸಿ ಕೊಟ್ಟರು, ಇದಲ್ಲದೇ ಇನ್ನು ಕೆಲವು ಸಮಾಜ ಸುಧಾರಕರು ಸ್ತ್ರೀಯರ ಸ್ಥಾನಮಾನದ ಸುಧಾರಣೆಗೆ ಕಾರಣರಾಗಿದ್ದಾರೆ, ದಾದಾಬಾಯಿನವರೋಜಿ ಜಿ,ಬದ್ರುದ್ದೀನ್ ತಾಯಬ್ಜಿ, ಜಿ.ಕೆ.ಗೋಕಲೆ, ಇವರಲ್ಲದೇ ಕೆಲವು ಮಹಿಳಾ ಸಮಾಜ ಸುಧಾರಕರು ಸಹ ಕಾರಣರಾಗಿದ್ದಾರೆ, ಬಗಿನಿ ನಿವೇದಿತಾ, ಡಾ,ಅನಿಬೆಸೆಂಟ್, ಪಂಡಿತ್ ರಮಾಬಾಯಿ,ರಮಾಬಾಯ್ ರಾನಡೆ, ಸರೋಜಿನಿನಾಯ್ಡು, ತಾರ್‌ಥತ್, ಅಮೃತಕಾರ್, ಮುಂತಾದವರು ರಾಜಕೀಯ ಶೈಕ್ಷಣಿಕ ಸಂಘಟನಾತ್ಮಕ ಚಟುವಟಿಕೆಗಳ ಮೂಲಕ ಸ್ತ್ರೀಯರ ಅಂತಸ್ಥನ್ನು ಹೆಚ್ಚಿಸಲು ಕಾರಣರಾಗಿದ್ದಾರೆ.

**ಮಹಿಳೆಯರಿಗೆ ಶಿಕ್ಷಣ :-**

೧೯ನೇಯ ಶತಮಾನದ ಆದಿಭಾಗದಲ್ಲಿ ಜೀವನದ ನೆನಪುಗಳನ್ನು ಬರೆದಿಟ್ಟ ಬಹುಮಟ್ಟಿನ ಹೆಂಗಸರು ಓದುಕಲಿಯಲು ತಮಗಿದ್ದ ತೀವ್ರ ಆಸೆಯನ್ನು ವ್ಯಕ್ತಪಡಿಸಿರುವುದನ್ನು ಕಾಣಬಹುದು . ೧೮೦೯ರಲ್ಲಿ ಜನಿಸಿದ ರಾಸ್ಸುಂದರಿದೇವಿ ಕೊನೆಯಿಲ್ಲದ ಮನೆಗೆಲಸಗಳು ಹನ್ನೆರಡು ಮಕ್ಕಳನ್ನು ಸುಧಾರಿಸುವ ಅವಿರತ ಹೊಣೆಗಳ ನಡುವೆಯೂ ತನ್ನ ಓದಿನ ಆಸೆ ಸ್ವಲ್ಪ ಸಮಯವನ್ನು ಹೊಂದಿಸಿಕೊಂಡು ಓದುವುದನ್ನು ಮತ್ತು ಬರೆಯುವುದನ್ನು ಕಲಿತುಕೊಂಡಳು. ಹೈಮವತಿ

ಸೆನ್(೧೮೬೬-೧೯೩೨) ಐವತ್ತು ವರ್ಷ ತುಂಬಿದ ಮೇಲೆ ಬಂದಾಕೆ ಪೂರ್ವ ಬಂಗಾಲದ ಖುಲ್ನಾ ಜಿಲ್ಲೆಯಲ್ಲಿ ಕಳೆದ ತನ್ನ ಬಾಲ್ಯದ ನೆನಪುಗಳನ್ನು ಆಕೆ ಬರೆದಿಟ್ಟಿದ್ದಾಳೆ ,ಶಾಲೆಯ ಆವರಣದಲ್ಲಿಯೇ ಕುಳಿತು ಶಿಕ್ಷಣವನ್ನು ಪಡೆದುಕೊಳ್ಳುತ್ತಾಳೆ, ಪಂಡಿತಾ ರಮಾಬಾಯಿ (೧೮೫೮-೧೯೨೨)ಗೆ ಓದುಬರಹಗಳ ಪಾಂಡಿತ್ಯವನ್ನು ಗುರುತಿಸಿ 'ಪಂಡಿತಾ' ಎಂಬ ಪದವಿ ದೊರೆಯಿತು, ರಮಾಬಾಯಿಗೆ ತಾಯಿಯೇ ಮೊದಲ ಗುರು, ಅವರ ತಂದೆ ವೇದಶಾಸ್ತ್ರಜ್ಞರಾಗಿದ್ದರು ತಮ್ಮ ಜಾತಿಯರ ವಿರೋಧವಿದ್ದರು ಪತ್ನಿ ಮತ್ತು ಮಗಳಿಗೆ ಓದು ಬರಹವನ್ನು ಕಲಿಸಿದರು, ಮಿಷನರಿಗಳೆನೋ ಬಾಲಕಿಯರ ಶಾಲೆಗಳನ್ನು ತೆರೆಯಲು ಪ್ರಯತ್ನಿಸಿದರು ಭಾರತೀಯ ಸುಧಾರಕರಿಂದಲೆ ಇದಕ್ಕೆ ವಿರೋದವನ್ನು ಎದುರಿಸಬೇಕಾಯಿತು, ಕೋನೆಗೆ ಸರ್ಕಾರವು ಆ ಶತಮಾನದ ಎರಡನೆಯ ಭಾಗದ ವೇಳೆಗೆ ಸ್ತ್ರೀ ಶಿಕ್ಷಣಕ್ಕೆ ಆರ್ಥಿಕ ನೆರವನ್ನು ಘೋಷಿಸಿತು,ಅವಿರತ ಪ್ರಯತ್ನದಿಂದಾಗಿ ೧೯ನೇಯ ಶತಮಾನದ ಕೊನೆಯ ಎರಡು ಮೂರು ದಶಕಗಳಲ್ಲಿ ಮಹಿಳೆಯರ ಶಿಕ್ಷಣ ಸಂಸ್ಥೆಗಳು ಸ್ಥಿರವಾಗತೊಡಗಿದವು.ಔಪಚಾರಿಕ ಶಿಕ್ಷಣಕ್ಕೆ ಒಳ್ಳೇಯ ಚಾಲನೆ ದೊರೆಯಿತು.ಶತಮಾನದ ಕೊನೆಯ ವೇಳೆಗೆ ಕೆಲವು ಮಹಿಳೆಯರಾದರೂ ಧೈರ್ಯವಾಗಿ ಮುಂದೆ ನಿಂತು ಸ್ತ್ರೀ ಶಿಕ್ಷಣವನ್ನು ಕುರಿತು ಮಾತನಾಡುವಷ್ಟು ಸಮರ್ಥರಾದರು. ಇಪ್ಪತ್ತನೆಯ ಶತಮಾನದ ವೇಳೆಗೆ ಸ್ವಂತವಾಗಿ ಯೋಜನೆ, ಕಾರ್ಯಕ್ರಮಗಳನ್ನು ತಾವೇ ರೂಪಿಸಿ ನಿರ್ವಹಿಸುವ ಶಾಲೆಗಳನ್ನು ಸ್ಥಾಪಿಸಿದರು.

**ಸಾಂಪ್ರದಾಯಿಕ ಶಿಕ್ಷಣ :-**

ಸಾಂಪ್ರದಾಯಿಕ ಶಿಕ್ಷಣದಲ್ಲಿ ಧಾರ್ಮಿಕ ಸಾಹಿತ್ಯವನ್ನು ಮಾತ್ರ ಕಲಿಸಲಾಗುತ್ತಿತ್ತು.ಶೂದ್ರರಿಗೂ ಮಹಿಳೆಯರಿಗೂ ಧಾರ್ಮಿಕ ಸಾಹಿತ್ಯವನ್ನು ಕಲಿಯುವ ಅವಕಾಶವಿರಲಿಲ್ಲ. ವಿಶೇಷ ಸಂದರ್ಭಗಳಲ್ಲಿ ಮಹಿಳೆಯರಲ್ಲಿ ಕೆಲವರಿಗೆ ಓದಲು ಮಾತ್ರ ಅವಕಾಶವಿತ್ತು. ಮೇಲುವರ್ಗದ ವೈಷ್ಣವ ಮನೆತನಗಳಲ್ಲಿ ಕೆಲವು ಮಹಿಳೆಯರಿಗೆ ಪುರಾಣ ಸಾಹಿತ್ಯವನ್ನು ಓದಲು ಕಲಿಯುವ ಅವಕಾಶವಿತ್ತು. ಮುಸ್ಲಿಂ ಹುಡುಗಿಯರು ಕುರಾನನ್ನು ಓದುವುದು ಹಾಗೂ ಸ್ವಲ್ಪಮಟ್ಟಿನ ಗಣಿತವನ್ನು ಕಲಿಯುತ್ತಿದ್ದರಾದರು, ಹೆಣ್ಣುಮಕ್ಕಳು ಸಾರ್ವಜನಿಕವಾಗಿ ಬೆರೆಯುವುದನ್ನು ಕಟ್ಟುನಿಟ್ಟಾಗಿ ನಿಷೇಧಿಸುತ್ತಿದ್ದ ಉತ್ತಮ ವರ್ಗದ ಕುಟುಂಬಗಳ ಹುಡುಗಿಯರು ಶಾಲೆಗಳಿಗೆ ಹೋಗುವುದನ್ನು ಒಪ್ಪುತ್ತಿರಲಿಲ್ಲ. ಅಂದರೆ ಕೆಲವು ಹೆಣ್ಣುಮಕ್ಕಳು ತಮ್ಮ ಧರ್ಮದ ಬಗ್ಗೆ ಮನೆಯಲ್ಲಿಯೇ ಕುಳಿತು ಕಲಿಯಲು ಅವಕಾಶವಿತ್ತು.

೧೯ನೇಯ ಶತಮಾನದ ಆರಂಭದಲ್ಲಿ ಪುರುಷರ ಸಾಕ್ಷರತೆಗೆ ಹೋಲಿಸಿದರೆ ಮಹಿಳೆಯರ ಸಾಕ್ಷರತೆಯ ಪ್ರಮಾಣ ತೀರಾ ಕನಿಷ್ಠದಾಗಿತ್ತು. ಸ್ತ್ರೀ ಶಿಕ್ಷಣವಂತೂ ಅನೌಪಚಾರಿಕವೇ ಆಗಿತ್ತು. ಅದೂ ವ್ಯವಹಾರ ಜ್ಞಾನಕ್ಕೆ ತಕ್ಕಷ್ಟು ಎಂಬ ಮಿತಿಯದಾಗಿತ್ತು. ಗೌರವಾನ್ವಿತ ಕುಟುಂಬಗಳ ಮಹಿಳೆಯರು ಶಾಸ್ತ್ರೀಯ ಅಥವಾ ದೇಶಿಯ ಸಾಹಿತ್ಯ ಕೃತಿಗಳನ್ನು ಗಾಂಭೀರ್ಯದ ಮನರಂಜನೆಗಾಗಿ ಅಧ್ಯಯನ ಮಾಡುತ್ತಿದ್ದರು. ಆಸ್ತಿವಂತ ಕುಟುಂಬಗಳ ಮಹಿಳೆಯರು ಲೆಕ್ಕಪತ್ರಗಳನ್ನು ನೋಡಿಕೊಳ್ಳುವಷ್ಟಕ್ಕೆ

ಶಿಕ್ಷಣವನ್ನು ಸ್ವಲ್ಪ ಪಡೆಯುತ್ತಿದ್ದರು. ಉಳಿದ ಹೆಂಗಸರಿಗೆ ಮನೆಗೆಲಸಗಳಿಗೆ ಸಂಬಂಧಿಸಿದಂತೆ ಕಲೆಯನ್ನು ರೂಢಿಸಿಕೊಳ್ಳುವುದೇ ಮುಖ್ಯ ಶಿಕ್ಷಣವಾಗಿ ದೊರೆಯಿತು.

**ಮೊದಲು ಬಾಲಿಕ ಶಾಲೆಗಳು :-**

೧೮೧೯ರಲ್ಲಿ ಹಿಂದೂ ಕಾಲೇಜು ಆರಂಭಗೊಂಡ ಹೊಸತರಲ್ಲೇ ಕಲ್ಕತ್ತಾ ಸ್ಕೂಲ್ ಸೊಸೈಟಿಯು ಸ್ತ್ರೀ ಶಿಕ್ಷಣವನ್ನು ಪ್ರೋತ್ಸಾಹಿಸಿತು. ಈ ಸೊಸೈಟಿಯ ಸೆಕ್ರೆಟರಿ ರಾಧಾಕಾಂತದೇವ್ ಸ್ತ್ರೀ ಶಿಕ್ಷಣದ ಮಹಾನ್ ಪೋಷಕರೆನಿಸಿ 'ಕಲ್ಕತ್ತಾ ಫೀಮೇಲ್ ಜುವನೈಲ್' ಸೊಸೈಟಿಯು ಸ್ಥಾಪನೆಗೊಳ್ಳಲು ಸಹ ನೆರವಾಗಿ ನಿಂತರು. ಅಲ್ಲದೆ 'ಗೌರವಾನ್ವಿತ' ಹಿಂದೂ ಬಾಲಕಿಯರಿಗಾಗಿ ಮೂವತ್ತು ಶಾಲೆಗಳನ್ನು ತೆರೆಯಿತು.  ಈ ಶಾಲೆಗಳಿಗೆ ಹಿಂದೂ ಮಹನೀಯರ ಬೆಂಬಲ ದೊರೆತಿತ್ತು ಮತ್ತು ಬ್ರಾಹ್ಮಣ ಪಂಡಿತರಿಗೆ ಇಲ್ಲಿ ಉದ್ಯೋಗಾವಕಾಶವೂ ದೊರೆಯಿತು. ಆದರೆ 'ಉತ್ತಮ ಜಾತಿ' ಹೆಣ್ಣು ಮಕ್ಕಳನ್ನು ಈ ಶಾಲೆಗಳು ಆಕರ್ಷಿಸಲಿಲ್ಲ.

ಚರ್ಚ್ ಮಿಷನರಿ ದಕ್ಷಿಣ ಭಾರತದಲ್ಲಿ ಹೆಚ್ಚು ಫಲಪ್ರದವಾಯಿತು. ೧೮೨೧ರಲ್ಲಿ ತಿರುನೆಲ್‌ವೇಲಿಯಲ್ಲಿ ಬಾಲಕಿಯರ ಮೊದಲ ವಸತಿ ಶಾಲೆಯನ್ನು ಆರಂಭಿಸಲಾಯಿತು. ೧೮೪೦ರ ವೇಳೆಗೆ ಸ್ಕಾಟಿಷ್ ಚರ್ಚ್ ಸೊಸೈಟಿಯು ಸುಮಾರು ಇನ್ನೂರು ಹಿಂದು ಬಾಲಕಿಯರಿಗೆ ಆರು ಶಾಲೆಗಳನ್ನು ತೆರೆದು ಸಾಧನೆ ಮಾಡಿತು. ಶತಮಾನದ ಮಧ್ಯದ ವೇಳೆಗೆ ಮಿಷನರಿಗಳು ಮದ್ರಾಸಿನಲ್ಲಿ ಎಂಟು ಸಾವಿರ ವಿದ್ಯಾರ್ಥಿನಿಯರಿಗೆ ಬೋಧಿಸುತ್ತಿದ್ದರು.

**ಸ್ತ್ರೀ ಶಿಕ್ಷಣಕ್ಕೆ ಸರ್ಕಾರದ ಬೆಂಬಲ :-**

೧೮೪೮-೧೮೫೬ರ ಅವಧಿಯಲ್ಲಿ ಭಾರತದ ಗರ್ವನರ್ ಜನರಲ್ ಆಗಿದ್ದ ಲಾರ್ಡ್‌ಡಾಲ್ ಹೌಸಿಯು ಸ್ತ್ರೀ ಶಿಕ್ಷಣದಲ್ಲಿ ಬದಲಾವಣೆಯಾಗದ ಹೊರತು ಇನ್ನಾವುದೇ ರೀತಿಯ ಪ್ರತ್ಯೇಕ ಬದಲಾವಣೆಯು ಪ್ರಧಾನವಾದ ಹಾಗೂ ಲಾಭದಾಯಕವಾದ ಪರಿಣಾಮಗಳನ್ನು ತರಲು ಸಮರ್ಥವಾಗಲಾರದು ಎಂದು ಘೋಷಿಸಿದನು. ಈವರೆಗೆ ಶ್ರೀಮಂತರಿಗೆ ಉನ್ನತ ಶಿಕ್ಷಣ ದೊರೆಯಲು ಬೇಕಾದ ಬೆಂಬಲವನ್ನು ನೀಡುತ್ತಿದ್ದ ಸರ್ಕಾರದ ಶಿಕ್ಷಣ ನೀತಿಯಲ್ಲಿ ಬದಲಾವಣೆಯನ್ನು ಸೂಚಿಸಿದನು. ಸರ್ಕಾರವು ದೇಶಿ ಭಾಷೆಗಳಲ್ಲಿ ಸಮೂಹ ಶಿಕ್ಷಣವನ್ನು ಬೆಂಬಲಿಸುತ್ತ ಬರಬೇಕೆಂದು. ೧೮೫೩ ರಿಂದ ೧೮೫೪ರವರೆಗೆ ಬೋರ್ಡ್ ಆಫ್ ಕಂಟ್ರೋಲ್‌ನ ಅಧ್ಯಕ್ಷನಾಗಿದ್ದ ಸರ್. ಚಾರ್ಲ್ಸ್‌ವುಡ್‌ರವರು ೧೮೫೪ರಲ್ಲಿ ಆದೇಶ ಹೊರಡಿಸಿದನು. ಸ್ತ್ರೀ ಮತ್ತು ಪುರುಷರಿಬ್ಬರಿಗೂ ಸಮಾನವಾಗಿ ಶಿಕ್ಷಣ ದೊರೆಯುವಂತೆ ಅವಕಾಶ ಕಲ್ಪಿಸಿತು. ನಂತರ ಬ್ರಹ್ಮಸಮಾಜ, ನಂತರದಲ್ಲಿ ಪ್ರಾರ್ಥನಾ ಸಮಾಜ , ಆರ್ಯಸಮಾಜ ಹಾಗೂ ಥಿಯೋಸಾಫಿಕಲ್ ಸೊಸೈಟಿಗಳೂ ಸ್ತ್ರೀಶಿಕ್ಷಣಕ್ಕೆ ಬೆಂಬಲವನ್ನು ನೀಡಿದವು.

೧೮೫೪ರ ವೇಳೆಗೆ ಸುಮಾರು ೬೨೬ ಬಾಲಕಿಯರ ಶಾಲೆಗಳಿದ್ದವು. ಈ ಶಾಲೆಗಳಲ್ಲಿ ಒಟ್ಟು ೨೧,೭೫೫ ವಿದ್ಯಾರ್ಥಿನಿಯರಿದ್ದರು. ಈ ಶಾಲೆಗಳು ತುಂಬಾ ಚಿಕ್ಕವು ಹಾಗೂ ಇಡೀ ಜನಸಂಖ್ಯೆಗೆ ಹೋಲಿಸಿದರೆ ಇಲ್ಲಿ ಕಲಿಯಲು ಬರುತ್ತಿದ್ದ ಬಾಲಕಿಯರ ಒಟ್ಟು ಸಂಖ್ಯೆ ನಗಣ್ಯವೆನಿಸುವಂಥದು ಎಂಬುದು ಸ್ಪಷ್ಟ. ಹೀಗೆ ಸಮಾಜ ಸುಧಾರಕರು ಸ್ತ್ರೀಯರು ಶಿಕ್ಷಣಕ್ಕೆ ಹೆಚ್ಚು ಪ್ರೋತ್ಸಾಹವನ್ನು ನೀಡಿದರು. ಸಮಾಜಸುಧಾರಕರಷ್ಟೆ ಅಲ್ಲದೆ ಪಂಡಿತಾ ರಮಾಬಾಯಿ, ಮಾತಾಜಿ ಮಹಾರಾಣಿ ತಪಸ್ವಿನಿ ಮುಂತಾದ ಧುರಿಣಿಯರು ಶಾಲೆಗಳನ್ನು ತೆರೆಯುವುದರ ಮೂಲಕ ಸ್ತ್ರೀಯರ ಶಿಕ್ಷಣಕ್ಕೆ ಹೆಚ್ಚು ಪ್ರೋತ್ಸಾಹವನ್ನು ನೀಡಿದರು. ೨೧ನೇ ಶತಮಾನದ ಆದಿಭಾಗದಲ್ಲಿ ಬಾಲಕಿಯರ ಶಾಲೆಗಳ ಸಂಖ್ಯೆ ಹಾಗೂ ಶಾಲೆಗಳ ಸಂಖ್ಯೆ ಹೆಚ್ಚಾಗ ತೊಡಗಿತು. ಮೊದಲನೆಯ ಮಹಾಯುದ್ಧ ಕೊನೆಯಾಗುವ ಹೊತ್ತಿಗೆ ಬಾಲಕಿಯರ ಶಾಲೆಗಳು ಹೆಚ್ಚಾಗಿ ಬಾಲಕಿಯರು ಶಿಕ್ಷಣವನ್ನು ಪಡೆದುಕೊಂಡರು.ಹಾಗೆಯೇ ವಿಶ್ವವಿದ್ಯಾನಿಲಯಗಳಲ್ಲಿಯೂ ವಿದ್ಯಾರ್ಥಿನಿಯರ ಸಂಖ್ಯೆ ಹೆಚ್ಚಾಗಿ ಶಿಕ್ಷಣವನ್ನು ಪಡೆದುಕೊಂಡರು.

ಇತ್ತೀಚಿನ ದಿನಗಳಲ್ಲಿ ಸ್ತ್ರೀಯರು ಹೆಚ್ಚು ಹೆಚ್ಚು ಶಿಕ್ಷಣವನ್ನು ಪಡೆದುಕೊಳ್ಳುತ್ತಿದ್ದರು. ಇಂಜಿನೀಯರಿಂಗ್, ವೈದ್ಯಕೀಯ ನರ್ಸಿಂಗ್, ಏರೋಸೀಸ್, ವೃತ್ತಿಪರ ಕೋರ್ಸ್‌ಗಳು, ಫ್ಯಾಷನ್ ಡಿಸೈನಿಂಗ್ ಹೀಗೆ ಎಲ್ಲಾ ವಿಧದ ಕೋರ್ಸ್‌ಗಳನ್ನು ಸ್ತ್ರೀಯರು ಓದುತ್ತಿದ್ದಾರೆ. ಅಲ್ಲದೆ ಪುರುಷರಿಗಿಂತ ಸ್ತ್ರೀಯರೆ ಹೆಚ್ಚು ಹೆಚ್ಚು ಅಂಕಗಳನ್ನು ಪಡೆದು ದಾಖಲೆಯನ್ನೇ ನಿರ್ಮಿಸುತ್ತಾರೆ. ಇಂದಿನ ಮಹಿಳೆಯರು ನಾವೇನು ಪುರುಷರಿಗಿಂತ ಕಡಿಮೆ ಇಲ್ಲವೆಂದು ಎಲ್ಲಾ ವಿಧದ ಶಿಕ್ಷಣವನ್ನು ಪಡೆದು ತಮ್ಮ ಜೀವನವನ್ನು ತಾವೇ ರೂಪಿಸಿಕೊಳ್ಳುವುದರ ಜೊತೆಗೆ ಅಸ್ಥಿತ್ವವನ್ನು ಕಂಡುಕೊಂಡಿದ್ದಾರೆ. ಸರ್ಕಾರವು ಹೆಣ್ಣು ಮಕ್ಕಳ ಶಿಕ್ಷಣಕ್ಕೆ ನೀಡುತ್ತಿರುವ ಎಲ್ಲಾ ಸವಲತ್ತುಗಳನ್ನು ಪಡೆದುಕೊಳ್ಳುತ್ತಿದ್ದಾರೆ. ಶಿಕ್ಷಣದ ಮೂಲಕ ತಮ್ಮ ಭವಿಷ್ಯವನ್ನು ತಾವೇ ಸ್ವತಃ ಹೊಸದಾಗಿ ನಿರ್ವಹಿಸಲು ಸಮರ್ಥರಾಗ ತೊಡಗಿದ್ದಾರೆ. 'ಹೆಣ್ಣು ಮಕ್ಕಳನ್ನು ಶಾಲೆಗೆ ಕಳುಹಿಸಿ' ಮಾದರಿಯ ಜನಾಂದೋಲನ ಕಾರ್ಯಕ್ರಮಗಳು ನಿರಂತರವಾಗಿ ನಡೆದಾಗ ಇನ್ನೂ ಹೆಚ್ಚು ಹೆಣ್ಣು ಮಕ್ಕಳು ವಿದ್ಯಾವಂತರಾಗುತ್ತಾರೆ.

## <u>ಉದ್ಯೋಗ ಕ್ಷೇತ್ರದಲ್ಲಿ ಸ್ತ್ರೀಯರು :-</u>

೧೯ನೇ ಶತಮಾನದ ಅಂತ್ಯದಲ್ಲಿ ವಿದ್ಯಾವಂತ ಮಹಿಳೆಯರು ಉದ್ಯೋಗ ಕ್ಷೇತ್ರದಲ್ಲಿ ಕಾಲಿಡತೊಡಗಿದರು. ಅಡುಗೆ ಮನೆಯ ಳಗೋಡೆಯ ನಡುವೆ ಸೀಮಿತವಾಗಿದ್ದ ಸ್ತ್ರೀ ಕ್ರಮೇಣ ಶಿಕ್ಷಣಕ್ಕಾಗಿ, ಉದ್ಯೋಗಕ್ಕಾಗಿ ಹೆಜ್ಜೆನ್ನಿಟ್ಟರು. ಇದು ನಮ್ಮ ಭಾರತೀಯ ಸಾಮಾಜಿಕ ಹಿನ್ನೆಲೆಯಲ್ಲಿ ಒಂದು ಕ್ರಾಂತಿಕಾರಕ ಬದಲಾವಣೆಯಾಯಿತು. ಶಿಕ್ಷಣ ಆಯೋಗ ಮೊದಲಿಗೆ ಮಹಿಳಾ ಶಿಕ್ಷಕಿಯರನ್ನು ಸೃಷ್ಟಿಸಲು ಮಹಿಳಾ ಶಿಕ್ಷಣ ತರಬೇತಿ ಕಾಲೇಜುಗಳನ್ನು ತೆರೆದು ಪ್ರಾಥಮಿಕ ಹಂತದಲ್ಲಿ ಸ್ತ್ರೀಯರಿಗೆ ಹೆಚ್ಚು ಶಿಕ್ಷಕಿ ವೃತ್ತಿಯನ್ನು ನೀಡಬೇಕೆಂದು ಶಿಫಾರಸ್ಸು ಮಾಡಿತು. ಅಲ್ಲದೆ ವೃತ್ತಿ ಸಂಬಂಧಿತ ಶಾಲೆಗಳನ್ನು ತೆರೆದು ದಾದಿಗಳಾಗಿ, ಬೆರಳಚ್ಚುಗಾರ್ತಿಯಾಗಿ, ಲೆಕ್ಕಿಗಳಾಗಿ, ಗುಮಾಸ್ತಳಾಗಿ, ಕಾರ್ಖಾನೆ ಕಛೇರಿಗಳಲ್ಲಿ,

ಐಟಿ ಬಿಟಿ,ಕಾಲ್ಸೆಂಟರ್,ಸೇಲ್ಸ್ ಗರ್ಲ್, ಏರೋಸೀಸ್, ಐ.ಎ.ಎಸ್ ಅಧಿಕಾರಿ, ಐ.ಪಿ.ಎಸ್ ಅಧಿಕಾರಿ, ಹೀಗೆ ಸ್ತ್ರೀಯರು ಎಲ್ಲಾ ಹುದ್ದೆಗಳನ್ನು ಅಲಂಕರಿಸಿ ಪುರುಷರಿಗಿಂತ ಏನು ಕಡಿಮೆ ಇಲ್ಲವೆಂದು ತಮ್ಮ ಸೇವೆಗಳನ್ನು ಸಲ್ಲಿಸುತ್ತಿದ್ದಾರೆ.

**ಮಹಿಳಾ ವಿಮೋಚನೆಗಾಗಿ ಪ್ರಾರಂಭವಾದ ಸಂಘಟನೆಗಳು :-**

ಸ್ವಾತಂತ್ರ್ಯ ಪೂರ್ವದಲ್ಲಿ ಹಾಗೂ ಸ್ವಾತಂತ್ರ್ಯ ನಂತರದಲ್ಲಿ ಮಹಿಳಾ ವಿಮೋಚನೆಗಾಗಿ, ಮಹಿಳಾ ಹಕ್ಕುಗಳ ಪ್ರತಿಪಾದನೆಗಾಗಿ ವಿವಿಧ ಸಂಘಟನೆಗಳು ಜನ್ಮತಾಳಿ ಕಾರ್ಯನಿರ್ವಹಿಸಿದೆ. ಕೆಲವು ಇನ್ನೂ
ನಿರ್ವಹಿಸುತ್ತಿವೆ. ಅವುಗಳೆಂದರೆ

೧. ಆಲ್ ಇಂಡಿಯಾ ಡೆಮಾಕ್ರೆಟಿಕ್ ವಿಮೆನ್ಸ್ ಅಸೋಸಿಯೇಷನ್
೨. ಆಂದ್ರ ಮಹಿಳಾಸಭಾ – ೧೯೩೮
೩. ಭಾರತೀಯ ಗ್ರಾಮೀಣ ಮಹಿಳಾ ಸಂಘ – ೧೯೭೩(ಆಂದ್ರ)
೪. ಸ್ತ್ರೀಶಕ್ತಿ ಸಂಘಟನ– ೧೯೭೯(ಆಂದ್ರ)
೫. ನಾರಿ ವಿಕಾಸ ಪರಿಷತ್(ಆಂದ್ರ)
೬. ಅಸ್ಸಾಂ ಪ್ರಾದೇಶಿಕ ಮಹಿಳಾ ಸಮಿತಿ–೧೯೨೬
೭. ನಾರಿಮುಕ್ತಿ ಸಂಘಟನ ೧೯೨೬(ಅಸ್ಸಾಂ)
೮. ಲಿಜ್ಜತ್ ಪಪ್ಪಡ್ ಸೊಸೈಟಿ ೧೯೬೮
೯. Self Employment women's Association–೧೯೭೨(ಜತಚಿ ಗುಜರಾತ್)
೧೦. ವಿಮೆನ್ ವೆಲ್‌ಫೇರ್ ಸೆಂಟರ್ ೧೯೬೧ (ಕೇರಳ)
೧೧. ಕಸ್ತೂರಿ ಬಾ ಗಾಂಧಿ ನ್ಯಾಷನಲ್ ಮೆಮೋರಿಯಲ್ ಟ್ರಸ್ಟ್ ೧೯೪೫
೧೨. ಮಹಿಳಾ ಜಾಗರಣಾ ಸಮಿತಿ (ಮಧ್ಯಪ್ರದೇಶ)
೧೩. ಆಂಟಿ ಡೌರಿ ಫ್ರಂಟ್ (ವಿದರ್ಭ ಮಧ್ಯಪ್ರದೇಶ)
೧೪. ಮಹಿಳಾ ಮುಕ್ತಿ ಮೋರ್ಚಾ
೧೫. ರಾಜಸ್ತಾನ್ ಯೂನಿವರ್ಸಿಟಿ ವಿಮೆನ್ಸ್ ಅಸೋಸಿಯೇಷನ್
೧೬. ಟ್ರೈಬಲ್ ವೆಲ್‌ಫೇರ್ ಆರ್ಗನೈಸೇಷನ್
೧೭. ಆರ್ಯ ಮಹಿಳಾ ಸಮಾಜ ೧೮೮೨(ಮಹಾರಾಷ್ಟ್ರ)
೧೮. ಪೂನಾ ಮಹಿಳಾ ಮಂಡಲ್ ೧೯೨೯
೧೯. ಶ್ರದ್ಧಾನಂದ ಮಹಿಳಾಶ್ರಯ ೧೯೨೮
೨೦. ಸ್ತ್ರೀ ಹಿತಕಾರಿಣಿ ೧೯೬೪

೨೧. ಸಮಾಜವಾದಿ ಮಹಿಳಾ ಸಭಾ ೧೯೫೫

೨೨. ಪ್ರಜಾಸತ್ತಾತ್ಮಕ ಮಹಿಳಾ ಸಂಘಟನೆ

೨೩. ಮಹಿಳಾ ಸಾಂಸ್ಕೃತಿಕ ಸಂಘಟನೆ

೨೪. ಮಹಿಳಾ ಸಮಖ್ಯಾ

೨೫. ವಿಮೋಚನಾ

೨೬. ಶಾಶ್ವತೀ(ಎನ್.ಎಂ.ಕೆ.ಆರ್.ವಿ. ಮಹಿಳಾ ಕಾಲೇಜಿನ ಮಹಿಳಾ ಅಧ್ಯಯನ)

೨೭. ವಿಮೆನ್ಸ್ ವಾಯ್ಸ್

೨೮. ಅಂಗನವಾಡಿ ಕಾರ್ಯಕರ್ತೆಯರ ಸಂಘಟನೆ

೨೯. ಬೀಡಿ ಕಾರ್ಮಿಕ ಮಹಿಳಾ ಸಂಘಟನೆ

೩೦. ನಿವಾರಣಾ

೩೧. ಕರ್ನಾಟಕ ಲೇಖಕಿಯರ ಸಂಘ

೩೨. ರೈತ ಮಹಿಳಾ ಸಂಘಟನೆ

೩೩. ದಲಿತ ಸಂಘರ್ಷ ಸಮಿತಿ(ಮಹಿಳಾ ವಿಭಾಗ)

೩೪. ಜನವಾದಿ ಮಹಿಳಾ ಸಂಘಟನೆ

೩೫. ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ

೩೬. ಸಮತಾ ಅಧ್ಯಯನ ಕೇಂದ್ರ ಮೈಸೂರು

೩೭. ಮಹಿಳಾ ದಕ್ಷತಾ ಸಮಿತಿ, ಬೆಂಗಳೂರು

೩೮. ಹೆಲ್ಪಿಂಗ್ ಹ್ಯಾಂಡ್ ,ಬಂಜಾರ ಅಕಾಡಮಿ ಬೆಂಗಳೂರು

೩೯. ಹ್ಯೂಮನ್ ರೈಟ್ ಲಾಸಿಟ್ವರ್ಕ್ ಬೆಂಗಳೂರು

೪೦. ಕರ್ನಾಟಕ ರಾಜ್ಯ ಮಹಿಳಾ ಆಯೋಗ ಬೆಂಗಳೂರು

೪೧. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಜಿಲ್ಲಾವಾರು ಇರುವ ಸಾಂತ್ವನ ಕೇಂದ್ರಗಳು ಮುಂತಾದವು.

**ರಾಜಕೀಯ ಕ್ಷೇತ್ರದಲ್ಲಿ ಸ್ತ್ರೀಯರು :-**

ಭಾರತದ ಸಂವಿಧಾನವು ಪ್ರಜಾಸತ್ತಾತ್ಮಕ ರಾಜಕೀಯದಲ್ಲಿ ಸ್ತ್ರೀಯರೂ ಸಹ ಸಕ್ರಿಯವಾಗಿ ಭಾಗವಹಿಸಲು ಹಕ್ಕನ್ನು ನೀಡಿದೆ. ಮತದಾನದ ಹಕ್ಕಿನ ಜೊತೆಗೆ ಗ್ರಾಮ ಪಂಚಾಯಿತಿಯಿಂದ ಲೋಕಸಭೆಗೂ ಅಧ್ಯಕ್ಷರಾಗಿ, ಉಪಾಧ್ಯಕ್ಷರಾಗಿ, ಮಂತ್ರಿಯಾಗಿ. ಕ್ಯಾಬೀನೆಟ್ ಮಂತ್ರಿಯಾಗಿ, ಮುಖ್ಯಮಂತ್ರಿಯಾಗಿ, ರಾಜ್ಯಪಾಲರಾಗಿ, ಪ್ರಧಾನಮಂತ್ರಿಯಾಗಿ ಈಗ ರಾಷ್ಟ್ರಾಧ್ಯಕ್ಷರಾಗಿ ಕಾರ್ಯ

ನಿರ್ವಹಿಸುತ್ತಿದ್ದಾರೆ. ಇದೀಗ ಮಹಿಳಾ ಮೀಸಲಾತಿಗಾಗಿ ಸಂಘಟನಾತ್ಮಕ ಹೋರಾಟ ನಡೆಸಬೇಕಾಗಿ ಬಂದಿದೆ.

## ಮಹಿಳಾ ಪ್ರಾತಿನಿಧ್ಯ – ಕೆಲವು ವಿವರಗಳು

**ಮೈಸೂರು ಪ್ರಜಾ ಪ್ರತಿನಿಧಿ ಸಭೆ :–**

1930 – 2

1934 – 5

1937 -- 3

1941 – 5

1945 – 12 ಇವರು 1949ರವರೆಗೆ ಇದ್ದರು.

1907ರಲ್ಲಿ ಮೈಸೂರು ವಿಧಾನ ಪರಿಷತ್ ಪ್ರಾರಂಭವಾಗಿ ಪ್ರತಿ ಅವಧಿಗೆ ಒಬ್ಬೊಬ್ಬ ಮಹಿಳೆಗೆ ಪ್ರಾತಿನಿಧ್ಯ ದೊರಕಿತ್ತು.

ಸ್ವಾತಂತ್ರ್ಯ ನಂತರದ ಚುನಾವಣೆಗಳಲ್ಲಿ ಕೆಳಕಂಡಂತೆ ಪ್ರಾತಿನಿಧ್ಯ ಕಂಡು ಬರುತ್ತದೆ.

**ಕರ್ನಾಟಕ ವಿಧಾನಸಭೆ**

| ಚುನಾವಣೆ ನಡೆದ ಕಾಲ | ಶಾಸಕರ ಸ್ಥಾನ | ಆಯ್ಕೆಯಾದ ಮಹಿಳೆಯರು |
|---|---|---|
| ೧೯೫೨ | ೯೨ | ೦೫ |
| ೧೯೫೭ | ೧೭೯ | ೧೮ |
| ೧೯೬೨ | ೨೦೮ | ೧೮ |
| ೧೯೬೭ | ೨೧೬ | ೦೭ |
| ೧೯೭೨ | ೨೧೬ | ೧೧ |
| ೧೯೭೮ | ೨೧೬ | ೦೮ |
| ೧೯೮೩ | ೨೨೪ | ೦೨ |
| ೧೯೮೫ | ೨೨೪ | ೦೮ |
| ೧೯೮೯ | ೨೨೪ | ೦೯ |
| ೧೯೯೪ | ೨೨೪ | ೦೭ |
| ೧೯೯೯ | ೨೨೪ | ೦೬ |
| ೨೦೦೪ | ೨೨೪ | ೦೭ |

## ಪಂಚಾಯತ್ ರಾಜ್ ವ್ಯವಸ್ಥೆ :-

ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ೩೩% ಮಹಿಳಾ ಮೀಸಲಾತಿ ಅತ್ಯಂತ ಯಶಸ್ವಿಯಾಗಿ ಜಾರಿಯಾಗಿದೆ. ೧೯೮೩ರಲ್ಲಿ ಮಂಡಲ ಪಂಚಾಯ್ತಿ, ಜಿಲ್ಲಾ ಪಂಚಾಯ್ತಿ ವ್ಯವಸ್ಥೆಯಲ್ಲಿ ೨೫% ಮೀಸಲಾತಿ ಇತ್ತು. ೧೯೯೩ರಲ್ಲಿ ಸಂವಿಧಾನದ ೭೩, ೭೪ನೇ ತಿದ್ದುಪಡಿಯಂತೆ ೩೩% ರಷ್ಟು ಮೀಸಲಾತಿ ಜಾರಿಗೆ ಬಂದು ಜಿಲ್ಲಾ ಪಂಚಾಯತ್, ತಾಲ್ಲೂಕ್ ಪಂಚಾಯತ್ ಹಾಗೂ ಗ್ರಾಮ ಪಂಚಾಯತ್‌ಗಳಲ್ಲಿ ಮಹಿಳೆಯರಿಗೆ ಪ್ರಾತಿನಿಧ್ಯ ದೊರಕಿದೆ.

ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡಗಳ ಮಹಿಳೆಯರಲ್ಲಿ ಮಹಿಳೆಯರಲ್ಲಿ ಅಧ್ಯಕ್ಷ, ಉಪಾಧ್ಯಕ್ಷ ಸ್ಥಾನಕ್ಕೆ ೧/೩ರಷ್ಟು ಮೀಸಲಾತಿ ದೊರಕಿದೆ.

**೨೦೦೦ರಲ್ಲಿ ಚುನಾಯಿತಗೊಂಡ ಮಹಿಳಾ ಪ್ರಾತಿನಿಧ್ಯ :-**

ಗ್ರಾಮ ಪಂಚಾಯತ್ ೪೪.೮೬%

ತಾಲ್ಲೂಕ್ ಪಂಚಾಯತ್ ೪೭.೨೪%

ಜಿಲ್ಲಾ ಪಂಚಾಯತ್ ೩೮.೦೮%

**ಮಹಿಳಾ ಅಧ್ಯಕ್ಷ ಉಪಾಧ್ಯಕ್ಷ ಸ್ಥಾನಗಳು :-**

ಗ್ರಾಮ ಪಂಚಾಯತ್ – ೩೮%

ತಾಲ್ಲೂಕ್ ಪಂಚಾಯತ್ – ೩೪%

**ಲೋಕಸಭಾ ಸದಸ್ಯರು.**

| ವರ್ಷ | ಸ್ಥಾನಗಳು | ಮಹಿಳಾ ಪ್ರಾತಿನಿಧ್ಯ | ಸ್ಪರ್ಧಿಸಿದ್ದು | ಆಯ್ಕೆ |
|---|---|---|---|---|
| ೧೯೫೯ | ೪೯೯ | ೨೨ | – | – |
| ೧೯೫೭ | ೫೦೦ | ೨೭ | – | – |
| ೧೯೬೨ | ೫೦೩ | ೩೪ | ೦೧ | ೦೧ |
| ೧೯೬೭ | ೫೨೩ | ೩೧ | ೦೩ | ೦೩ |
| ೧೯೭೧ | ೫೨೧ | ೨೨ | ೦೧ | ೦೧ |
| ೧೯೭೭ | ೫೪೪ | ೧೯ | ೦೪ | ೦೧ |
| ೧೯೮೦ | ೫೪೪ | ೨೮ | ೦೬ | – |
| ೧೯೮೪ | ೫೪೪ | ೪೪ | ೦೭ | ೦೨ |

| | | | | |
|---|---|---|---|---|
| ೧೯೮೯ | ೫೧೭ | ೨೭ | ೧೨ | ೦೧ |
| ೧೯೯೧ | ೫೪೪ | ೩೯ | – | – |
| ೧೯೯೬ | – | ೪೦ | ೧೩ | ೦೩ |
| ೧೯೯೮ | – | ೪೨ | – | – |
| ೧೯೯೯ | – | ೪೭ | ೧೧ | ೨ |
| ೨೦೦೪ | – | ೪೫ | – | ೨ |

ಲೋಕಸಭೆ ಮತ್ತು ವಿಧಾನ ಸಭೆಯಲ್ಲಿನ ಮಹಿಳಾ ಪ್ರಾತಿನಿಧ್ಯ ಆಶಾದಾಯಕವಾಗೇನು ಇಲ್ಲ. ಜನಸಂಖ್ಯೆಯ ಅರ್ಧದಷ್ಟಿರುವ ಮಹಿಳೆಯರು ಈ ಕ್ಷೇತ್ರದಲ್ಲಿ ಮೂಲೆ ಗುಂಪಾಗಿದ್ದಾರೆ.

ಜಿಲ್ಲಾ ಪಂಚಾಯತ್ – ೩೩%

ಸಂವಿಧಾನದ ೮೮ನೇ ತಿದ್ದುಪಡಿ, ತಂದು ವಿಧಾನಸಭೆ, ವಿಧಾನ ಪರಿಷತ್ ಲೋಕಸಭೆಗಳಲ್ಲಿ 33% ಮೀಸಲಾತಿ ಪಡೆಯಲು ಮುಂದಿನ ಹೋರಾಟ ರೂಪಿಸುವ ಜವಬ್ದಾರಿ ಮಹಿಳಾ ಸಂಘಟಕರಿಗೆ ಇದೆ. ಹಿಂದೆಂದಿಗಿಂತಲೂ ಎಚ್ಚೆತ್ತ ಮಹಿಳೆ ಪ್ರಗತಿ ಪಥದತ್ತ ದಾಪುಗಾಲು ಹಾಕುತ್ತಿದ್ದಾಳೆ. ಸ್ತ್ರೀಶಕ್ತಿ ಗುಂಪುಗಳು ಎಲ್ಲೆಡೆ ಜಾಗೃತವಾಗಿವೆ.

**ತಮ್ಮ ಹಕ್ಕು ಕುರಿತಾದ ಜಾಗೃತಿ :–**

ಜಗತ್ತಿನ ಹಲವಾರು ಅಭಿವೃದ್ಧಿ ಹೊಂದಿದ ದೇಶಗಳ ಹಿನ್ನೆಲೆ ನೋಡಿದರೆ ನಮ್ಮ ಭಾರತೀಯ ಸ್ತ್ರೀಯರು ಅತೀ ಹೆಚ್ಚಿನ ಕಾನೂನು & ರಾಜಕೀಯ ಹಕ್ಕನ್ನು ಪಡೆದಿದ್ದಾರೆ ಆದರೂ ನಮ್ಮ ಗ್ರಾಮೀಣ ಸ್ತ್ರೀಯರಿಗೆ ಇನ್ನು ಜಾಗೃತಿ ಎಂಬುದಿಲ್ಲ ಕಾರಣ ಸ್ತ್ರೀಯರಿಗೆ ನೀಡಿರುವ ಕೆಲವು ಹಕ್ಕುಗಳು ಈ ಕೆಳಗಿನಂತಿವೆ.

೧. ಸ್ತ್ರೀಯರ ವ್ಯಕ್ತಿಗತ ಹಿನ್ನೆಲೆ

೨. ಸ್ತ್ರೀಯರ ಸಾಮಾಜಿಕ ಪರಿಸರ

೩. ಸ್ತ್ರೀಯರ ಆರ್ಥಿಕ ನೆಲೆ

೪. ಸ್ತ್ರೀಯರ ಮನೋನಿಷ್ಠಗ್ರಹಿಕೆಗಳು

ಈ ಮೇಲೆ ತಿಳಿಸಿದ ಅಂಶಗಳನ್ನು ಗಮನಿಸಿ ನೋಡಿದಾಗ ನಮ್ಮ ದೇಶದ ಸ್ತ್ರೀಯರಿಗೆ ತಮ್ಮ ಹಕ್ಕುಗಳಬಗ್ಗೆ ಜಾಗೃತಿಯಾಗಿಲ್ಲ. ನಮ್ಮ ಪರಂಪರೆಯಂತೆ ಮಗಳಾಗಿ, ತಾಯಿಯಾಗಿ, ಹೆಂಡತಿಯಾಗಿ, ಸಹೋದರಿಯಾಗಿ ಕಾಣಲಾಗುತ್ತಿದೆಯ ಹೊರತು ಸ್ವತಂತ್ರ ವ್ಯಕ್ತಿಯಾಗಿಲ್ಲ. ಸ್ವಂತ

ಅಧಿಕಾರ ಪಡೆದಿಲ್ಲ. ಇಂದಿಗೂ ಪುರುಷ ಶೋಷಣೆ ಮುಂದುವರೆದಿದ್ದು ಕಾನೂನಿನ ರಕ್ಷಣೆ ಪಡೆಯುವುದು ಕಷ್ಟವಾಗುತ್ತಿದೆ.

**ಮಹಿಳೆಯರ ಸಬಲೀಕರಣ :-**

ಲಿಂಗತಾರತಮ್ಯತೆ ಅಸಮಾನತೆ, ಅನರ್ಹತೆ ಹಾಗೂ ಇನ್ನಿತರೇ ಬಗೆಯ ಸಂಕಷ್ಟಗಳಿಗೆ ಒಳಗಾಗಿರುವ ಸ್ತ್ರೀಯರಿಗೂ ಕೂಡ ಪುರುಷರಿಗೆ ಸರಿಸಮಾನವಾದ ಅಂತಸ್ತು ಹಾಗೂ ಅವಕಾಶಗಳನ್ನು ನೀಡಿ ಅವರನ್ನು ಸಶಕ್ತರಾಗಿಸಲು ಹಮ್ಮಿಕೊಂಡಿರುವ ಅಭಿವೃದ್ಧಿಯಾತ್ಮಕ ಕಾರ್ಯಕ್ರಮಗಳ ಪ್ರಕ್ರಿಯೆಯನ್ನು ಮಹಿಳಾ ಸಬಲೀಕರಣ ಎನ್ನಲಾಗಿದೆ.

ಇತಿಹಾಸದುದ್ದಕ್ಕೂ ಸ್ತ್ರೀಯರನ್ನು ಅಬಲೆಯರು ದುರ್ಬಲೆಯರು ಎಂದು ಪರಿಗಣಿಸಿ ದ್ವಿತೀಯ ದರ್ಜೆಯ ಹೊಣೆ ಹೊತ್ತವರು ಎಂದು ಪರಿಗಣಿಸಲಾಗಿದೆ. ಕಾಲ ಕ್ರಮೇಣ ಸ್ತ್ರೀಯರ ಬಗೆಗಿನ ದೃಷ್ಟಿಕೋನ ಬದಲಾಯಿತು. ೨೦ನೇ ಶತಮಾನ ಪ್ರಾರಂಭದಲ್ಲಿ ಬ್ರಿಟನ್ ಮತ್ತು ಅಮೇರಿಕಾ ದೇಶಗಳಲ್ಲಿ ಸ್ತ್ರೀಯರಿಗೆ ಮತದಾನದ ಹಕ್ಕನ್ನು ನೀಡಿತು. ಅನಂತರ ಪಶ್ಚಿಮದ ರಾಷ್ಟ್ರಗಳಲ್ಲಿ ಸ್ತ್ರೀಯರ ಅಂತಸ್ಥಿನಲ್ಲಿ ಭಾರಿಸುಧಾರಣೆಯಾಗಿ ಪುರುಷರಿಗೆ ಸಮಾನವಾದ ಹಕ್ಕು ಮತ್ತು ಅವಕಾಶವನ್ನು ನೀಡಿತು. ಆದರು ಏಷ್ಯಾ ಮತ್ತು ಆಫ್ರಿಕಾ ರಾಷ್ಟ್ರಗಳಲ್ಲಿ ಸ್ತ್ರೀಯರು ಪುರುಷರಿಗೆ ಸಮಾನವಾದ ಅವಕಾಶ ಪಡೆಯಲು ಸಾಧ್ಯವಾಗಿಲ್ಲ. ಸ್ತ್ರೀಯರ ವಿರುದ್ಧ ಒಂದಲ್ಲಾ ಒಂದು ರೀತಿ ಶೋಷಣೆ ನಡೆಯುತ್ತಲಿತ್ತು. ಸ್ತ್ರೀಯರಿಗೆ ಸ್ತ್ರೀಯರು ಎಂಬ ಲಿಂಗಾಧಾರಿತ ಕಾರಣದಿಂದ ಪುರುಷರಿಗೆ ಸಮಾನವಾದ ಅವಕಾಶ ಪಡೆಯಲು ಸಾಧ್ಯವಾಗಲಿಲ್ಲ. ಸ್ತ್ರೀಯರ ವಿರುದ್ಧ ಒಂದಲ್ಲ ಒಂದು ರೀತಿಯಿಂದ ಶೋಷಣೆ ನಡೆಯುತ್ತಲೇ ಇತ್ತು. ಸ್ತ್ರೀಯರಿಗೆ ಸ್ತ್ರೀಯರು ಎಂಬ ಲಿಂಗಾಧಾರಿತ ಕಾರಣದಿಂದ ಪುರುಷರಿಗೆ ಸಮಾನವಾದ ಹಕ್ಕು ಮತ್ತು ಅವಕಾಶಗಳನ್ನು ನಿರಾಕರಿಸಲಾಗಿತ್ತು. ಈ ಬೆಳವಣಿಗೆಯನ್ನೇ ಲಿಂಗತಾರತಮ್ಯತೆ ಎಂದು ಕರೆಯಲಾಗಿದೆ.

ಇಂತಹ ಸ್ತ್ರೀಯರ ಶೋಷಣೆಯನ್ನು ನಿವಾರಿಸುವ ದೃಷ್ಟಿಯಿಂದ ವಿಶ್ವರಾಷ್ಟ್ರಗಳು ೧೯೭೫ ರಲ್ಲಿ ಮಾರ್ಚ್ 8ರಂದು ಅಂತರರಾಷ್ಟ್ರೀಯ ಮಹಿಳಾ ವರ್ಷ ಎಂದು ಘೋಷಿಸಿದಾಗ ಸ್ತ್ರೀಯರ ಸಮಸ್ಯೆಗಳ ಕಡೆಗೆ ಗಮನವನ್ನು ಹರಿಸಿತ್ತು.

**ಸ್ತ್ರೀಯರ ಜಾಗತೀಕ ಮಹಾಸಭೆ ನೈರೋಬಿ ಸಭೆ :-**

೧೯೭೫ ರಲ್ಲಿ ವಿಶ್ವಸಭೆಯ ಅಂತರರಾಷ್ಟ್ರೀಯ ಮಹಿಳಾಸಭೆ ಎಂದು ಘೋಷಣೆ ಮಾಡಿದಾಗ ೧೯೮೫ ರಲ್ಲಿ ನೈರೋಬಿಯಲ್ಲಿ ಜರುಗಿದ ೩ ಸ್ತ್ರೀಯರ ಜಾಗತಿಕ ಮಹಾಸಭೆಯಲ್ಲಿ ಮಹಿಳಾ ಸ್ವಶಕ್ತಿಯ ಕಡೆ ಗಮನವರಿಸಿತ್ತು. ಈ ಸಭೆಯಲ್ಲಿ ಜಗತ್ತಿನ ಎಲ್ಲಾ ದೇಶಗಳು ಸ್ತ್ರೀಯರ ಸ್ವಶಕ್ತಿಯ ಕಡೆ ಗಮನವರಿಸಬೇಕೆಂದು ತಿಳಿಸಿತ್ತು.

**ಜಾಗತಿಕ ಮಹಿಳಾ ಸಮ್ಮೇಳನ ಅಥವಾ ಬೀಜಿಂಗ್ ೧೯೯೫ :-**

೧೯೯೫ರಲ್ಲಿ ಚೀನಾದ ಬೀಜಿಂಗ್‌ನಲ್ಲಿ ನಡೆದ 3ನೇ ಜಾಗತೀಕ ಸಮ್ಮೇಳನದಲ್ಲಿ ೧೮೯ ದೇಶಗಳ ಪ್ರತಿನಿಧಿಗಳು ಭಾಗವಹಿಸಿದ್ದರು. ಈ ಸಮ್ಮೇಳನದಲ್ಲಿ ಸ್ತ್ರೀಯರಿಗೆ ಸಂಬಂಧಿಸಿದ 12 ಗಂಭೀರವಾದ ವಿಷಯಗಳನ್ನು ಗುರ್ತಿಸಲಾಯಿತು. ಸ್ತ್ರೀಯರು ಬಡತನ, ಆರೋಗ್ಯ, ಆರ್ಥಿಕಸ್ಥಿತಿ, ಮಾಧ್ಯಮ, ಹಕ್ಕುಗಳು, ಪರಿಸರ ಹೆಣ್ಣು ಮಗು, ಮಾನವಹಕ್ಕು ಮಹಿಳೆಯರ ಅಭಿವೃದ್ದಿ ಉದ್ಯೋಗ, ಶಿಕ್ಷಣ, ಸ್ತ್ರೀಯರು ಸಮಾನತೆ ಸ್ಥಾಪಿಸುವಂತೆ ಅವಕಾಶವಾಯಿತು.

**ವಿಶ್ವರಾಷ್ಟ್ರಗಳ ಸಾಮಾನ್ಯ ಸಭೆಯ ಅಧಿವೇಶನ ೨೦೦೫ :-**

ಕ್ರಿ.ಶ ೨೦೦೦ ಜೂನ್‌ನ ನ್ಯೂಯಾರ್ಕ್‌ನಲ್ಲಿ ವಿಶ್ವಸಂಸ್ಥೆಯ ಸಾಮಾನ್ಯ ಸಭೆಯ ಅಧಿವೇಶನದಲ್ಲಿ ಮಹಿಳೆಯರ ಸಮಾನತೆ, ಶಾಂತಿ, ಅಭಿವೃದ್ಧಿ ಎಂಬ ವಿಷಯವಾಗಿ ಚರ್ಚಿಸಲಾಯಿತು. ಈ ಅಧಿವೇಶನದಲ್ಲಿ ವಿಶ್ವರಾಷ್ಟ್ರಗಳು, ಸಂಘ ಸಂಸ್ಥೆಗಳು, ಭಾಗವಹಿಸಿ ಲಿಂಗಸಮಾನತೆ ಸ್ಥಾಪಿಸಲು ತಮ್ಮ ತಮ್ಮ ದೇಶಗಳಲ್ಲಿ ಕಾರ್ಯಕ್ರಮ ಕೈಗೊಳ್ಳುವಂತೆ ಸೂಚಿಸಲಾಯಿತು. ಈ ಸಮ್ಮೇಳನದಲ್ಲಿ ವಿಚಾರಗಳನ್ನು ಆಧಾರವಾಗಿಟ್ಟುಕೊಂಡು ಭಾರತದಲ್ಲಿಯೂ ೨೦೦೧ ನೇ ವರ್ಷವನ್ನು ಮಹಿಳಾ ಸಶಕ್ತಿಕರಣದ ವರ್ಷ ಎಂದು ಘೋಷಿಸಲಾಯಿತು.

**ಸ್ತ್ರೀ ಶಕ್ತಿಕರಣದ ಕಾರ್ಯ ತಂತ್ರಗಳು :-**

೧. ಸ್ತ್ರೀಯರ ರಾಜಕೀಯ ಸಹಬಾಗಿತ್ವ

೨. ಆರ್ಥಿಕ ರಂಗದಲ್ಲಿ ಆದಾಯ ನೀಡುವಂತೆ ಯೋಜನೆಗಳು.

೩. ಸ್ತ್ರೀಯರ ಸಾಕ್ಷರತೆ ಹೆಚ್ಚಿಸುವುದು.

ದೌರ್ಜನ್ಯ ತಡೆಗಟ್ಟುವುದು ಹೆಚ್ಚು ಮಕ್ಕಳ ಲಿಂಗತಾರತಮ್ಯ ಕೊನೆಗೊಳಿಸುವುದು ಮಾಧ್ಯಮಗಳ ಪಾತ್ರದಲ್ಲಿ ಸುಧಾರಣೆ ಮಾನವ ಹಕ್ಕುಗಳು ಮತ್ತು ಮೂಲಭೂತ ಹಕ್ಕುಗಳನ್ನು ನೀಡುವುದು.

**ಮಹಿಳೆಯರ ಕಲ್ಯಾಣಾಭಿವೃದ್ಧಿ ಕಾರ್ಯಕ್ರಮಗಳು ಅಥವಾ ಯೋಜನೆಗಳು :-**

ಭಾರತದಲ್ಲಿ ಸ್ತ್ರೀಯರು ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದ್ದು. ಅವುಗಳನ್ನು ನಿವಾರಿಸುವ ದೃಷ್ಟಿಯಿಂದ ಸ್ವತಂತ್ರ ಭಾರತ ಸ್ತ್ರೀಯರ ಅಭಿವೃದ್ಧಿ ಮತ್ತು ಕಲ್ಯಾಣವನ್ನು ಸಾಧಿಸಲು ಅನೇಕ ಕಾರ್ಯಕ್ರಮ ಅಥವಾ ಯೋಜನೆಗಳನ್ನು ಹಾಕಿಕೊಂಡಿದೆ. ಅಂತಹ ಕಾರ್ಯಕ್ರಮವನ್ನು ಮೂಲತಃ ಮೂರು ಭಾಗಗಳಾಗಿ ವಿಂಗಡಿಸಲಾಗಿದೆ.

೧. **ಶಾಸನಾತ್ಮಕ ಕಾರ್ಯಕ್ರಮಗಳು:-**

ಮಹಿಳೆಯರ ಅಭಿವೃದ್ಧಿಗಾಗಿ ಶಿಕ್ಷಣ. ಆರೋಗ್ಯ ಮತ್ತು ಸಾಮಾಜಿಕ ಕಲ್ಯಾಣ ಇಲಾಖೆಗಳ ಪಾತ್ರ, ಕೆಲವು ವಿಶಿಷ್ಠ ಮಹಿಳೆಯರಿಗಾಗಿ ವಿಶೇಷ ಕಾರ್ಯಕ್ರಮ.

ಈ ಎಲ್ಲಾ ಕಲ್ಯಾಣ ಕಾರ್ಯಕ್ರಮಗಳನ್ನು ಕೈಗೊಳ್ಳುವ ಸ್ವಾತಂತ್ರ್ಯ ಭಾರತ ಸರ್ಕಾರವು ಹಲವಾರು ಇಲಾಖೆಗಳಿಗೆ ವಹಿಸಿದೆ. ಯೋಜನಾ ಆಯೋಗ ಶಿಕ್ಷಣಖಾತೆ , ಸಮಾಜ ಕಲ್ಯಾಣ ಖಾತೆ, ಸಾಮಾಜಿಕ ಕ್ಷೇಮಾಭಿವೃದ್ಧಿ ಇಲಾಖೆ, ಮಹಿಳಾ ಕಲ್ಯಾಣ ರಾಷ್ಟ್ರೀಯ ಪರಿಷತ್ ಇತ್ಯಾದಿ ಇಲಾಖೆಗಳಿಗೆ ವಹಿಸಿದೆ.

೨. **ಶಾಸನಾತ್ಮಕ ಕಾರ್ಯಕ್ರಮಗಳ ಮೂಲಕ ಸ್ತ್ರೀಯರ ಕಲ್ಯಾಣಾಭಿವೃದ್ಧಿ :-**

ಸ್ತ್ರೀಯರಿಗೂ ಕೂಡ ಸಮಾನವಾದ ಅವಕಾಶ ಮತ್ತು ಹಕ್ಕುಗಳನ್ನು ನೀಡುವುದಕ್ಕೊಸ್ಕರ ಹಾಗೂ ನ್ಯಾಯ ದೊರಕಿಸಿ ಕೊಡಲು ಸ್ವತಂತ್ರ ಭಾರತ ಸರ್ಕಾರ ಭಾರತೀಯ ಸಂವಿಧಾನದಲ್ಲಿ ಮಹಿಳೆಯರ ಕಲ್ಯಾಣ ಸಾಧಿಸಲು ಈ ಕೆಳಕಂಡ ಕೆಲವು ಶಾಸನಗಳನ್ನು ಸಾರಿಗೆ ತಂದಿದೆ.

೧. ಹಿಂದೂ ವಿವಾಹ ಕಾಯಿದೆ ೧೯೫೫

೨. ಹಿಂದೂ ಉತ್ತಾರಾಧಿಕಾರತ್ವ ಮತ್ತು ಜೀವನಾಂಶಕ ಕಾಯಿದೆ ೧೯೫೬

೩. ಹಿಂದೂ ದತ್ತು ಸ್ವೀಕಾರ ಕಾಯಿದೆ ೧೯೫೬

೪. ಅನೈತಿಕ ವ್ಯವಹಾರಗಳ ನಿಗ್ರಹಣಾ ಕಾಯಿದೆ ೧೯೫೬

೫. ವರದಕ್ಷಿಣೆ ನಿಷೇಧ ಕಾಯ್ದೆ ೧೯೬೧

೬. ಸಮಾನವೇತನ ಕಾಯ್ದೆ ೧೯೭೬

೭. ವೈದ್ಯಕೀಯ ಗರ್ಭ ನಿವಾರಣ ಕಾಯಿದೆ ೧೯೭೬

೮. ಕುಟುಂಬ ನ್ಯಾಯಾಲಯ ಕಾಯ್ದೆ ೧೯೮೪

**ಸ್ತ್ರೀಯರಿಗೆ ನ್ಯಾಯ ಒದಗಿಸಲು ಕಾನೂನಿನ ಸಹಾಯ :-**

ಸ್ವತಂತ್ರ ಭಾರತ ಸರ್ಕಾರವು ೧೯೭೬ ರಲ್ಲಿ ಕಾರ್ಮಿಕ ಇಲಾಖೆ ಒಳಗೊಂಡಂತೆ ಒಂದು ವಿಶೇಷ ಸೆಲ್ ರಚನೆ ಮಾಡಿದ್ದು ಇದು ಕಷ್ಟಕ್ಕೆ ಒಳಗಾದ ಸ್ತ್ರೀಯರಿಗೆ ಕಾನೂನು ನೆರವು ನೀಡುತ್ತಿದೆ. ಇದರ ಹೊಣೆಗಾರಿಕೆಯನ್ನು ಕಮೀಷನರ್ ಆಫ್ ಪೊಲೀಸ್‌ರವರಿಗೆ ವಹಿಸಲಾಗಿದೆ. ಇವರು ಸ್ತ್ರೀಯರಿಗೆ ನ್ಯಾಯ ಒದಗಿಸಲು ಮಹಿಳಾ ಅಭಿವೃದ್ಧಿ ಇಲಾಖೆ. ಮಹಿಳಾ ಕಲ್ಯಾಣ ಇಲಾಖೆ ಖಾತೆ ಪ್ರಾರಂಭಿಸಿ ಸ್ತ್ರೀಯರ ಸಮಸ್ಯೆಯನ್ನು ತಿಳಿದುಕೊಂಡು ಪರಿಹಾರ ಕಂಡುಹಿಡಿಯುವ ಹಾಗೂ ಕಾನೂನಿನ ಸಹಾಯ ಮಾಡಲು ಪ್ರಯತ್ನಿಸಲಾಗಿದೆ.

೩. **ಸ್ತ್ರೀಯರ ಶಿಕ್ಷಣಾಭಿವೃದ್ಧಿ ಯೋಜನೆ :-**

ಸ್ವತಂತ್ರ ಬಂದಾಗಿನಿಂದಲೂ ಸ್ತ್ರೀಯರ ಶಿಕ್ಷಣದ ಕಡೇ ಹೆಚ್ಚು ಗಮನ ವಹಿಸಬೇಕೆಂದು ಶಿಕ್ಷಣ

ಆಯೋಗವು ಹೊತ್ತಿ ಹೇಳುತ್ತಿದೆ. ಅಲ್ಲದೆ ಸ್ತ್ರೀಯರು ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣದ ಬಗ್ಗೆ ವಿಶೇಷ ಗಮನಹರಿಸಬೇಕೆಂದು ತಿಳಿಸಿದೆ. ಭಾರತ ಸರ್ಕಾರವು ಶಿಕ್ಷಣ ಇಲಾಖೆ ರಾಷ್ಟ್ರೀಯ ಶೈಕ್ಷಣಿಕ ಸಂಶೋಧನೆ ಪ್ರಶಿಕ್ಷಣ ಇಲಾಖೆ, ವಯಸ್ಕರ ಶಿಕ್ಷಣ ಇತ್ಯಾದಿ ಸ್ತ್ರೀ ಶಿಕ್ಷಣದ ಬಗ್ಗೆ ಗಮನ ವಹಿಸಿದೆ. ಸ್ತ್ರೀಯರ ಅಂತಸ್ತು ಸ್ತ್ರೀಯರಿಗೆ ಸಂಬಂಧಿಸಿದ ವಿಷಯಗಳು ಸಮಸ್ಯೆಗಳು ಹಾಗೂ ಸವಾಲುಗಳನ್ನು ಅಧ್ಯಯನ ಮಾಡಲು ವಿಶ್ವವಿದ್ಯಾನಿಲಯದ ದನಸಹಾಯ ಮಂಡಳಿಯ ಸಹಾಯದಿಂದ ಮಹಿಳಾ ಅಧ್ಯಯನ ಕೇಂದ್ರಗಳನ್ನು ಸ್ಥಾಪಿಸಲಾಗಿದೆ.

### ೪. ಸ್ತ್ರೀಯರ ಆರೋಗ್ಯಾಭಿವೃದ್ಧಿ ಯೋಜನೆಗಳು :-

ನಮ್ಮ ಭಾರತೀಯ ಸ್ತ್ರೀಯರು ತಮ್ಮ ಆರೋಗ್ಯವನ್ನು ಅಲಕ್ಷಿಸುತ್ತಿದ್ದಾರೆ ಎಂಬುದನ್ನು ಹಲವಾರು ಸಂಘ ಸಂಸ್ಥೆಗಳು ೧೯೭೫ ರಿಂದ ೧೯೮೫ ರಲ್ಲಿ ಕೇಂದ್ರ ಸರ್ಕಾರಕ್ಕೆ ಮನವಿ ಮಾಡಿಕೊಂಡ ಹಿನ್ನೆಲೆಯಲ್ಲಿ ಸ್ತ್ರೀಯರ ಆರೋಗ್ಯ ರಕ್ಷಣೆಗಾಗಿ ಕೆಲವು ಕಾರ್ಯಕ್ರಮಗಳನ್ನು ಕೈಗೊಂಡಿದೆ . ಭಾರತೀಯ ವೈದ್ಯಕೀಯ ಸಂಶೋಧನಾ ಪರಿಷತ್, ಕೇಂದ್ರ ಆರೋಗ್ಯ ಕುಟುಂಬ ಕಲ್ಯಾಣ ಇಲಾಖೆ ಇವುಗಳ ಮೂಲಕ ಸ್ತ್ರೀಯರ ಆರೋಗ್ಯದ ಬಗ್ಗೆ ವಿಶೇಷ ಗಮನವರಿಸದೇ ಅಲ್ಲದೆ ಉದ್ಯೋಗದಲ್ಲಿರುವ ಸ್ತ್ರೀಯರ ಆರೋಗ್ಯದ ಬಗ್ಗೆ ಗಮನಹರಿಸಿದೆ. ಇದಲ್ಲದೆ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಕುಟುಂಬ ಕಲ್ಯಾಣ ಕೇಂದ್ರಗಳನ್ನು ಜೊತೆಗೆ ವಿಶ್ವಬ್ಯಾಂಕಿನಿಂದ ತಂದೆ, ತಾಯಿ, ಮಕ್ಕಳ ಆರೋಗ್ಯ ರಕ್ಷಣೆಗಾಗಿ ಬಳಸಿಕೊಳ್ಳಲಾಗಿದೆ.

### ೫. ಸ್ತ್ರೀಯರ ಆರ್ಥಿಕಾಭಿವೃದ್ಧಿ ಯೋಜನೆಗಳು :-

ಆರ್ಥಿಕ ಕ್ಷೇತ್ರದ'ಲ್ಲಿ ಸ್ತ್ರೀಯರು ಹೆಚ್ಚು ಭಾಗಿಯಾಗಲು ಅವರ ಉದ್ಯೋಗ ಅವಕಾಶಗಳನ್ನು ಹೆಚ್ಚಿಸಲು ಪಂಚವಾರ್ಷಿಕ ಯೋಜನೆಗಳ ಮೂಲಕ ಪ್ರಯತ್ನಿಸಲಾಗಿದೆ. ಈಗಾಗಲೇ ಸ್ತ್ರೀಯರು ಕಾರ್ಖಾನೆ, ಕಛೇರಿ, ಶಿಕ್ಷಣ ಸಂಸ್ಥೆಗಳು ಹಾಗೂ ಸರ್ಕಾರಿ ಸೇವೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ, ಅಂತೆಯೇ ಸ್ತ್ರೀಯರ ಶ್ರಮ ಶಕ್ತಿಗಳನ್ನೆ ಹೆಚ್ಚಿಸಲು ಉದ್ಯೋಗಸ್ಥ ಮಹಿಳೆಯರ ಆರ್ಥಿಕ ಹಿತವನ್ನು ಸಾಧಿಸಲು ಕೆಲವು ಕಾರ್ಯಕ್ರಮ ಕೈಗೊಂಡಿದೆ. ಇದರ ಜೊತೆಗೆ ಹೆಣ್ಣು ಮಕ್ಕಳ ವೃತ್ತಿ ತರಬೇತಿ ಮಹಿಳಾ ರಾಷ್ಟ್ರೀಯ ತರಬೇತಿ ಸ್ಥಾಪಿಸಿ ದುಡಿಯುವ ಸ್ತ್ರೀಯರಿಗಾಗಿ ವಸತಿ ನಿಲಯವನ್ನೇ ಪಟ್ಟಣ ಮತ್ತು ನಗರಗಳಲ್ಲಿ ಸ್ಥಾಪಿಸಲಾಗಿದೆ. ಸ್ತ್ರೀಯರ ಕಲ್ಯಾಣ ಸ್ಥಾಪಿಸಲು ಮಹಿಳಾ ಅಭಿವೃದ್ಧಿ ರಾಷ್ಟ್ರೀಯ ಸಮಿತಿ ಇದರ ಮೂಲಕ ವಿವಿಧ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ.

### ೬. ಸಾಮಾಜಿಕ ಕ್ಷೇಮಾಭಿವೃದ್ಧಿ ಇಲಾಖೆಯ ಪಾತ್ರ :-

ಧೀನರು, ದುರ್ಬಲರು, ಅನಾಥರು, ಮಕ್ಕಳು ವಿಧವೆಯರು ಇನ್ನಿತರ ಸ್ತ್ರೀಯರ ರಕ್ಷಣೆಗಾಗಿ ಪ್ರತಿಯೊಂದು ರಾಜ್ಯವು ಸಾಮಾಜಿಕ ಕ್ಷೇಮಾಭಿವೃದ್ಧಿ ಇಲಾಖೆಯನ್ನು ಸ್ಥಾಪಿಸಿ ಈ ಇಲಾಖೆಯ

ಮುಖಾಂತರ ಗ್ರಾಮೀಣ ಪ್ರದೇಶಗಳಲ್ಲಿ ಸ್ವಯಂ ಸೇವಕರು ಸೇವಕಿಯರು, ಹಳ್ಳಿಯ ಸ್ತ್ರೀಯರಿಗೆ ಬಟ್ಟೆ ಹೊಲಿಯುವ, ತೋಟಗಾರಿಕೆ, ವೈಜ್ಞಾನಿಕ ಮಾದರಿ ಪಶುಸಂಗೋಪನೆ, ಕರಕುಶಲ ತರಬೇತಿ, ಇತ್ಯಾದಿ ವಿಷಯಗಳನ್ನು ಕುರಿತು ತರಬೇತಿ ನೀಡುತ್ತಿದ್ದಾರೆ, ಕೇಂದ್ರ ಸರ್ಕಾರದ ಆಯೋಗದ ವತಿಯಿಂದ ಕೇಂದ್ರೀಯ ಸಾಮಾಜಿಕ ಮಂಡಲಿಯ ಸ್ತ್ರೀಯರ ಹಿತರಕ್ಷಣೆಗಾಗಿ ಅಬಲೆಯರು ದುರ್ಬಲರು, ನಿರಾಶ್ರಿತರು ವಿಧವೆಯರಿಗೆ ಶಿಕ್ಷಣ ಹಾಗೂ ಮನರಂಜನಾ ಕಾರ್ಯಕ್ರಮಗಳನ್ನು ನೀಡುತ್ತಿದೆ.

## ೭. ಮಹಿಳಾ ಕಲ್ಯಾಣಾಭಿವೃದ್ಧಿ ಇತರೇ ವಿಶಿಷ್ಠ ಯೋಜನೆಗಳು:-

### ಅ. ಮಹಿಳೆಯರಿಗಾಗಿ ಸಾಮಾಜಿಕ ಭದ್ರತೆ

ಭಾರತ ಸರ್ಕಾರವು ಸಾಮಾಜಿಕ ನ್ಯಾಯ ಯೋಜನೆ ಆರಂಭಿಸಿ ಅನಾಥ ಸ್ತ್ರೀ, ಪುರುಷರು, ವಿಧವೆಯರು, ವೃದ್ದರು, ಮಾನಸಿಕ ದೈಹಿಕ ಹಾಗೂ ದುರ್ಬಲರಿಗೆ ಮಾಸಿಕ ದನಸಹಾಯ ನೀಡುತ್ತಿದೆ.

### ಆ. ಕುಟುಂಬ ನ್ಯಾಯಾಲಯ

ಗಂಡ ಹೆಂಡತಿಗೆ ವಿರಸ ಉಂಟಾದಾಗ ಕೌಟುಂಬಿಕ ವಿಚಾರಗಳು ತಲೆದೂರಿದಾಗ ಪುರುಷ ಪ್ರಧಾನವಾದ ಕುಟುಂಬ ವ್ಯವಸ್ಥೆಯಲ್ಲಿ ಸ್ತ್ರೀಯರಿಗೆ ನ್ಯಾಯ ಒದಗಿಸಲು ಕುಟುಂಬ ನ್ಯಾಯಲಯ ಸ್ಥಾಪಿಸಿ ನ್ಯಾಯ ಒದಗಿಸುತ್ತದೆ.

### ಇ. ಸ್ತ್ರೀಯರಿಗೆ ಪುನರ್‌ವಸತೀಕರಣ

ವೇಶ್ಯಾವೃತ್ತಿಗೆ ತಳ್ಳಲ್ಪಟ್ಟ ಒತ್ತಾಯದಿಂದ ದೇವದಾಸಿಯನ್ನಾಗಿ ಮಾಡಲ್ಪಟ್ಟ, ಅಪಹರಣಕ್ಕೆ ಒಳಗಾದ ಅಪ್ರಾಪ್ತ ವಯಸ್ಸಿನಲ್ಲಿ ವಿವಾಹ ಪೂರ್ವದಲ್ಲಿ ಗರ್ಭಿಣಿಯಾಗಲ್ಪಟ್ಟ ಇನ್ನಿತರೆ ಶೋಷಣೆಗೆ ಒಳಗಾದ ಸ್ತ್ರೀಯರಿಗೆ ಪುರ್ನವಸತಿ ಕಾರ್ಯಕ್ಕಾಗಿ ಹಲವಾರು ಯೋಜನೆಗಳನ್ನು ಮಾಡಲಾಗಿದೆ.

ಕೊನೆಯದಾಗಿ ಹೇಳುವುದಾದರೆ ಮಹಿಳೆಯರ ಕಲ್ಯಾಣಾಭಿವೃದ್ಧಿ ದೃಷ್ಟಿಯಿಂದ ಸ್ವತಂತ್ರ ಭಾರತ ಸರ್ಕಾರ ಕೈಗೊಂಡ ಎಲ್ಲಾ ಶಾಸನಗಳು ಕಲ್ಯಾಣ ಕಾರ್ಯಕ್ರಮಗಳು ಸಂಪೂರ್ಣವಾಗಿ ಸ್ತ್ರೀಯರನ್ನು ತಲುಪುತಿಲ್ಲ. ಇದರ ಉಪಯೋಗವನ್ನು ಕೇವಲ ನಗರ ಶಿಕ್ಷಕ ಮಧ್ಯಮ ವರ್ಗದ ಮೇಲ್ಜಾತಿಯ ಸ್ತ್ರೀಯರು ಮಾತ್ರ ಸ್ವಲ್ಪ ಮಟ್ಟಿಗೆ ಪಡೆಯುತ್ತಿದ್ದಾರೆ. ಗ್ರಾಮೀಣ ಪ್ರದೇಶದ ಬಡವರು ಅನಕ್ಷರಸ್ಥ ಸ್ತ್ರೀಯರಿಗೆ ಇವುಗಳ ಬಗ್ಗೆ ಸ್ಪಷ್ಟವಾದ ಅರಿವು ಇಲ್ಲವಾಗಿದೆ. ಇದಕ್ಕೆ ಕಾರಣ ನಮ್ಮ ಕಲ್ಯಾಣಾಭಿವೃದ್ಧಿ ಕಾರ್ಯಕ್ರಮಗಳ ಕುಂದುಕೊರತೆ ಹಾಗೂ ದೋಷಗಳು ಕಾರಣವಿರಬಹುದು. ಆದರೂ ಈ ನಮ್ಮ ಚಿಂತನೆ ಸಾಗಿದೆ ಎಂಬುದು ಸಮಾಧಾನವಾಗಿದೆ.

## ಸ್ತ್ರೀಶಕ್ತಿ ಸಂಘಟನೆ:-

ಕರ್ನಾಟಕ ರಾಜ್ಯಾದ್ಯಂತ ಸ್ತ್ರೀಶಕ್ತಿ, ಸ್ವಶಕ್ತಿ, ಸ್ವಸಹಾಯ ಸಂಘಗಳು ಮಹಿಳೆಯರಲ್ಲಿ ಆರ್ಥಿಕ ಸ್ವಾವಲಂಬನೆ ಹಾಗೂ ಭದ್ರತೆಯನ್ನು ಒದಗಿಸುವ ದಿಸೆಯಲ್ಲಿ ಕಾರ್ಯೋನ್ಮುಖವಾಗಿವೆ. ಇವರ ವಿಶಿಷ್ಠತೆ

ಎಂದರೆ ಮಹಿಳೆಯರೇ ಸ್ವತಃ ಉಳಿತಾಯ ಮಾಡಿದ ಹಣವೇ ಸಾಲ ರೂಪದಲ್ಲಿ ದುಡಿಯುವ ಬಂಡವಾಳವಾಗುವುದು. ೨೦೦೦ದಲ್ಲಿ ಜಾರಿಗೆ ಬಂದ ಈ ಯೋಜನೆಯಲ್ಲಿ ಲಕ್ಷಾಂತರ ಮಹಿಳೆಯರು ತಮ್ಮನ್ನು ತಾವು ತೊಡಗಿಸಿಕೊಂಡು ಕೋಟ್ಯಾಂತರ ರೂಪಾಯಿಗಳಿಗೆ ಟರ್ನ್ ಓವರ್ ಮಾಡುತ್ತಿರುವುದು ಸಾಧಾರಣ ಕೆಲಸವೇನಲ್ಲ. ಈ ಯೋಜನೆ ಮಹಿಳೆಯರಿಗೆ ಒಂದು ವರದಾನವಿದ್ದಂತೆ.

ಮಹಿಳಾ ಮತ್ತು ಮಕ್ಕಳ ಇಲಾಖೆಯಿಂದ ಜಾರಿಗೊಳಿಸಲ್ಪಟ್ಟ ಸ್ವಶಕ್ತಿ ಕಾರ್ಯಕ್ರಮ ಗ್ರಾಮೀಣ ಭಾಗದಲ್ಲಿ ಅತ್ಯಂತ ಉತ್ಸಾಹ ಮೂಡಿಸಿದೆ. ಇನ್ನೂ ಕೆಲವು ಕಡೇ ಸ್ವಯಂ ಸೇವಾ ಸಂಸ್ಥೆಗಳು, ನವಸಾಕ್ಷರರ ಸಂಘಗಳು ಕೂಡ ಸ್ವಸಹಾಯ ಗುಂಪುಗಳಾಗಿ ರೂಪುಗೊಂಡಿವೆ.

ಈ ವ್ಯವಸ್ಥೆಯಿಂದ ಇಡೀ ಮಹಿಳಾ ಸಮುದಾಯದಲ್ಲಿ ಒಂದು ಮಿಂಚಿನ ಸಂಚಾರವಾದಂತಾಗಿ, ಎಲ್ಲೆಡೆ ಸಂಘಟಿತರಾಗಿದ್ದಾರೆ. ಮಹಿಳಾ ದಿನಾಚರಣೆ ಕಾರ್ಯಕ್ರಮ ರಾಜಕೀಯಸಭೆ ಇತ್ಯಾದಿ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುತ್ತಿದ್ದಾರೆ. ಆರ್ಥಿಕ ಸಬಲತೆಯೊಂದಿಗೆ ಸಾಮಾಜಿಕ, ರಾಜಕೀಯ ಸಬಲತೆಯೆಡೆಗೂ ಒಯ್ಯಬೇಕಾಗಿದೆ. ಅನೇಕ ಸಮಸ್ಯೆಗಳು ಗೊಂದಲ ಪಕ್ಷರಾಜಕೀಯದಿಂದ ಹೊರತಾಗಿ ಇವರದೇ ಆದ ನಿಲುವನ್ನು ಹೊಂದಿ ಸಾಮಾಜಿಕ ಅನಿಷ್ಟವಾಗಿರುವ ಕುಡಿತದ ವಿರುದ್ಧ ಪ್ರತಿಭಟಿಸುವ ಹೋರಾಟ ಇವರಿಗೆ ನೈತಿಕ ಶಕ್ತಿ ಹಾಗೂ ಅಂತಃ ಶಕ್ತಿ ತುಂಬಿ ಗಟ್ಟಿಗೊಳಿಸಬೇಕಾಗಿದೆ.

ಮಹಿಳೆಯರ ಮೇಲೆ ನಡೆಯುತ್ತಿರುವ ದೌರ್ಜನ್ಯ, ಹಲ್ಲೆ, ಅತ್ಯಾಚಾರ, ಕೌಟುಂಬಿಕ ಹಿಂಸೆ, ವರದಕ್ಷಿಣೆ ಸಮಸ್ಯೆ ಮುಂತಾದ ಸಾಮಾಜಿಕ ಪಿಡುಗುಗಳ ವಿರುದ್ಧ ತಳಮೂಲದಲ್ಲೇ ಹೋರಾಡುವ ಪರಿಹಾರ ಕಂಡುಕೊಳ್ಳುತ್ತಾ ತರಬೇತುಗೊಳ್ಳುತ್ತಿದ್ದಾರೆ. ಮಹಿಳೆಯರೇ ಹೋರಾಡುವಂತಾದಾಗ ಅವರ ಮೇಲಿನ ದೌರ್ಜನ್ಯಗಳು ನಿಲ್ಲುತ್ತವೆ. ಸ್ತ್ರೀಶಕ್ತಿ ಸಂಘಟನೆಗಳಿಗೆ ಸರ್ಕಾರ ಬೆಂಬಲ ನೀಡಿದಾಗ ಸ್ತ್ರೀಶಕ್ತಿ ಸಂಘಟನೆಗಳು ಶಕ್ತಿಯುತವಾಗಿ ಬೆಳೆಯುತ್ತವೆ.

**ಯಶಸ್ವಿ ಮಹಿಳೆಯರು:–**

**ಇಸ್ರೇಲ್ ಮಹಿಳೆಯರು**

ಇಸ್ರೇಲ್ ಒಂದು ಚಿಕ್ಕ ದೇಶ. ಒಟ್ಟು ಜನಸಂಖ್ಯೆಯಲ್ಲಿ ಪುರುಷರು ೪೯% ಮಹಿಳೆಯರು ೫೧% ಇದ್ದಾರೆ. ಇಸ್ರೇಲಿನ ರಾಷ್ಟ್ರೀಯ ಭಾಷೆ ಹೀಬ್ರಾ. ಸಾಕ್ಷರತೆ ೧೫% ಶಿಕ್ಷಣ ಕ್ಷೇತ್ರದಲ್ಲಿ ಗಂಡು ಮಕ್ಕಳಿಗಿಂತ ಹೆಣ್ಣು ಮಕ್ಕಳು ಮುಂದಿದ್ದಾರೆ. ೪೭% ಮನೆಯ ಹೊರೆಗೆ ದುಡಿಯುತ್ತಿದ್ದಾರೆ. ಆದರೆ ಪುರುಷ ಮಹಿಳೆಯರ ವೇತನದಲ್ಲಿ ತಾರತಮ್ಯವಿದೆ. ಅದಕ್ಕಾಗಿ ಮಹಿಳಾ ಸಂಘಟನೆಗಳು ಹೋರಾಟ ನಡೆಸಿವೆ.

ಮಾನವೀಯ ಮತ್ತು ಸಾಮಾಜಿಕ ತತ್ವಗಳು ಲಿಂಗತಾರತಮ್ಯ ತೋರದೇ ಸಮಾನತೆಯನ್ನು ಪ್ರತಿಪಾದಿಸಿದರೆ, ಧಾರ್ಮಿಕ ವ್ಯವಸ್ಥೆ ನೀತಿಗಳು ಪುರುಷರಿಗೆ ಬೇರೆ ಮಹಿಳೆಯರಿಗೆ ಬೇರೆ ಹಕ್ಕು ಕರ್ತವ್ಯಗಳನ್ನು ಹೇಳುತ್ತವೆ. ಇವನ್ನೆಲ್ಲಾ ನೋಡಿದರೆ ಕಾನೂನನ್ನು ಶಾಸ್ತ್ರ ಆಳುತ್ತಿರುವುದು ಗೋಚರವಾಗುತ್ತದೆ.

**ಲಾರಿಚಾಲಕಿ ಸೋಜಿರಾ ಬಾಯಿ**

ಪುಣೆಯಲ್ಲಿ ೩೦ ವರ್ಷದಿಂದ ಒಂದು ದಿನವು ಅಪಘಾತ ಮಾಡದೆ ಐಸ್ ಸಾಗಾಣಿಕೆ ಮಾಡುವ "ಬರ್ಫವಾಲಿಬಾಯಿ" ಎಂದು ಕರೆಸಿಕೊಳ್ಳುವ ಈಕೆ ಮದುವೆಯಾಗಿ ಬಂದಾಗ ೧೭ ವರ್ಷ. ಈಗ ೪೫ ಮೀರಿದೆ . ಅವಳ ಗಂಡ ಐಸ್ ಫ್ಯಾಕ್ಟರಿಯಲ್ಲಿ ಕಾರ್ಮಿಕನಾಗಿದ್ದ. ಈಕೆಗೆ ಹೂವು ಕೀಳುವ ಕೆಲಸ. ದಿನಕ್ಕೆ ೨.೫೦ರೂ ಕೂಲಿ ನಂತರ ಬೇಸತ್ತ ಅವಳು ತಾನೇ ವಾಹನ ಚಾಲನೆ ಕಲಿತು ೩ಲಕ್ಷ ಸಾಲ ಪಡೆದು ಲಾರಿ ಕೊಂಡಳು. ಓದು ಬರಹ ಬರದೆ ಇದ್ದರೂ ವ್ಯವಹಾರ ನಿಪುಣೆ, ಈಗ ೪ಲಾರಿ, ೨೫ಎಕರೆ ಜಮೀನು ೨ ಮೋಟಾರುಸೈಕಲ್, ೧ ಜೀಪ್, ೨ ಮಹಡಿ ಮನೆಗಳ ಒಡತಿಯಾಗಿದ್ದರೂ ಕೂಡ ಈಗಲೂ ಲಾರಿ ಡ್ರೈವರ್ ಆಗಿದ್ದಾಳೆ.

**ಮಣಿಪುರ ಮಹಿಳೆಯರ ಪ್ರತಿಭಟನೆ**

ಸೈನಿಕರಿಂದ ಮಣಿಪುರ ಮಹಿಳೆಯರು ಹಾಗೂ ಅಲ್ಲಿನ ಜನರ ಮೇಲೆ ನಡೆಯುತ್ತಿರುವ ದೌರ್ಜನ್ಯ ಹಲ್ಲೆಗಳಿಂದ ಕೊನೆಗೂ ಹೇಸಿಹೋಗಿ ಸಿಡಿದು ನಿಂತಿದ್ದಾರೆ. ಮಹಿಳೆಯರ ಮೇಲೆ ಅತ್ಯಾಚಾರ ಮಾಡಿ ಕೊಂದುಹಾಕಿರುವ ಬರ್ಬರತೆಯನ್ನು ಕಂಡು ಆಕ್ರೋಶಗೊಂಡು ಬೆತ್ತಲೆಯಾಗಿ ಬೀದಿಗಿಳಿದು ಪ್ರತಿಭಟಿಸುತ್ತಿದ್ದಾರೆ. ಸೇನೆಯ ಸ್ವೇಚ್ಛಾಚಾರಕ್ಕೆ ಅವಕಾಶವಾಗಿರುವ ಸಶಸ್ತ್ರದಳಗಳ ವಿಶೇಷಾಧಿಕಾರಕಾಯ್ದೆ ದುರುಪಯೋಗವಾಗುತ್ತಿದ್ದು ಅದನ್ನು ರದ್ದುಗೊಳಿಸುವಂತೆ ಆಗ್ರಹಿಸಿದ್ದಾರೆ.

ಮಣಿಪುರದ ಮಹಿಳೆಯರು ಮೇಧಾವಿಗಳು, ಧೈರ್ಯವಂತರು ಅಖಿಲ ಮಣಿಪುರ ಹಕ್ಕು ರಕ್ಷಣೆ ಹಾಗೂ ಅಭಿವೃದ್ಧಿ ಸಂಘಟನೆ ಹೋರಾಟ ನಡೆಸಿದೆ.

**ನಮಗೆ ನಾವೇ ಮಾದರಿಯಾಗಬೇಕು:-**

ಸಾಮಾನ್ಯವಾಗಿ ಪ್ರತಿ ಒಂದಕ್ಕು ರೋಲ್‌ಮಾಡೆಲ್ ಎಂಬುದು ಇರುತ್ತದೆ. ಮುಕ್ತವಾಗಿ ಅಥವಾ ಅವ್ಯಕ್ತವಾಗಿ ಈ ರೋಲ್‌ಮಾಡೆಲ್ ನಮ್ಮೊಳಗೆ ಆವಾಹಿಸಲ್ಪಡುತ್ತದೆ. ನಮಗೆ ಅರಿವಿರದಂತೆ ಅದಕ್ಕೆ ಮರುಳಾಗಿಬಿಡುತ್ತೇವೆ. ಅದು ಮಗುವಿನಿಂದ ಹಿಡಿದು ಎಲ್ಲಾ ಹಂತದಲ್ಲಿಯೂ ನಮ್ಮನ್ನಾವರಿಸಿರುತ್ತದೆ. ಬೆಳೆಯುವ ಮಗು, ತಾಯಿ, ತಂದೆ, ಮನೆಯಲ್ಲಿನ ಮಕ್ಕಳು, ಇತರರು ಇವರನ್ನೆಲ್ಲಾ ನೋಡಿ ಅನುಕರಿಸುತ್ತಾ ಬೆಳೆಯತೊಡಗುತ್ತದೆ. ಶಾಲೆಯಲ್ಲಿ ಶಿಕ್ಷಕ, ಶಿಕ್ಷಕಿಯರು ಇಷ್ಟವಾದವರು ರೋಲ್‌ಮಾಡೆಲ್ ಆಗುತ್ತಾರೆ. ಬೆಳೆಯುತ್ತಾ ಬಂದಂತೆಲ್ಲಾ ಪ್ರಸಿದ್ಧ ವ್ಯಕ್ತಿ, ನಾಯಕರು ಇತ್ಯಾದಿ ಕೆಲವೊಮ್ಮೆ ಕೆಲವು ಮೌಲ್ಯ ಸಿದ್ಧಾಂತಗಳೂ ಸಹ ರೋಲ್‌ಮಾಡೆಲ್‌ಗಳಾಗುತ್ತವೆ. ಅಂತಹ ಸಂದರ್ಭದಲ್ಲಿ ಅವರಿಗಿಂತ ಅವರು ಹುಟ್ಟು ಹಾಕಿದ ಪ್ರತಿಪಾದಿಸಿದ ಮೌಲ್ಯಗಳು ಮುಖ್ಯವಾಗುತ್ತವೆ. ಗಾಂಧಿ, ಬುದ್ಧ, ಬಸವ, ಲೋಹಿಯಾ, ಅಂಬೇಡ್ಕರ್, ಜೆ.ಪಿ. ಮುಂತಾದವರ ವಿಚಾರಗಳು ನಮ್ಮನ್ನು ಸೆಳೆದಾಗ ಅವರ ತತ್ವಗಳ ಅನುಯಾಯಿಗಳಾಗುತ್ತೇವೆ.

ಆಂಧ್ರ ಮಹಿಳೆಯರ ಸಾರಾಯಿ ವಿರುದ್ಧದ ಹೋರಾಟವು ಸಹ ಭಾರತಕ್ಕೆ ಒಂದು ಮಾದರಿಯಾದ ಹೋರಾಟವಾಗಿರುವುದನ್ನು ಗುರುತಿಸಲು ಸಾಧ್ಯ.- ಹೀಗೆ ಎಲ್ಲಕಡೆಗಳಲ್ಲು ಸ್ತ್ರೀಶಕ್ತಿ ಸಂಘಗಳು ಸಬಲೀಕರಣಕ್ಕಾಗಿ ಹೋರಾಟ ನಡೆಸಿರುವುದನ್ನು ಕಾಣಬಹುದಾಗಿದೆ.

ಒಟ್ಟಾರೆಯಾಗಿ ಹೇಳುವುದಾದರೆ ಸೌಟು ಹಿಡಿಯುವ ಕೈ ಕತ್ತಿ ಹಿಡಿಯುತ್ತಿದೆ ಎಂಬುದನ್ನು ಇತಿಹಾಸ ತಿಳಿಸಿದರೆ ವರ್ತಮಾನದಲ್ಲಿ ಸೌಟು ಹಿಡಿಯುವ ಕೈ ಪೆನ್ನು, ಗನ್ನು, ಸ್ಟೇರಿಂಗ್, ಸ್ಪಾನರ್ ಏನನ್ನು ಬೇಕಾದರು ಹಿಡಿಯುತ್ತದೆ ಎಂಬುದನ್ನು ಸಾಬೀತುಪಡಿಸಬಹುದು. ಹೀಗೆ ಮಹಿಳೆಯರಿಂದ ಆಗದೆ ಇರುವಂತಹ ಕೆಲಸ ಯಾವುದು ಇಲ್ಲ. ಒಂದೊಂದು ಕ್ಷೇತ್ರದಲ್ಲಿಯು ಕೂಡ ತಮ್ಮ ತಮ್ಮ ಅಲ್ಪ ಕಾಣಿಕೆಯನ್ನಿತ್ತು ಮಹಿಳಾ ಕೊಡುಗೆಯನ್ನು ಪ್ರತಿಷ್ಠಾಪಿಸಿದ್ದಾರೆ.

ಹೀಗೆ ಮಹಿಳೆಯರು ಸ್ವಾವಲಂಬಿಗಳಾಗಿ ವಿಮಾನ ಚಾಲನೆಯಿಂದಿಡಿದು ಕೊಳದಲ್ಲಿ ಮೀನಿನಂತೆ ಈಜುತ್ತಿದ್ದಾರೆ. ಅಲ್ಲದೆ ಐಟಿ ಬಿಟಿ ಕಂಪನಿಗಳಲ್ಲಿ ಪುರುಷರ ಸಮಾನವಾಗಿ ರಾತ್ರಿ ಪಾಳಿಯಲ್ಲು ದುಡಿಯುತ್ತಿರುವುದನ್ನು ಕಾಣಬಹುದು.

## ಅಧ್ಯಾಯ - ೮
## ಅಸಂಘಟಿತ ವಲಯಗಳಲ್ಲಿ ಮಹಿಳೆಯರ ಸ್ಥಾನ

ಉದ್ಯೋಗದ ಭದ್ರತೆಯನ್ನು ಒದಗಿಸುವ ಮತ್ತು ಸೇವಾ ನಿಯಮಗಳನ್ನು ಪಾಲಿಸುವ ಸಲುವಾಗಿ ಸರ್ಕಾರ ರೂಪಿಸಿರುವ ಶಾಸನಗಳು ಮತ್ತು ಕಾನೂನುಗಳ ಚೌಕಟ್ಟಿನಿಂದ ಹೊರಗಿರುವ, ಕಾರ್ಮಿಕ ಸಂಘ- ಸಂಘಟನೆಗಳು ಇಲ್ಲದ ಉತ್ಪಾದನಾ ಘಟಕಗಳನ್ನು ಅಸಂಘಟಿತ ಮತ್ತು ಅನೌಪಚಾರಿಕ ಘಟಕಗಳೆಂದೂ ಅಲ್ಲಿ ದುಡಿಯುವ ದುಡಿಮೆಗಾರನನ್ನು ಅಸಂಘಟಿತ ದುಡಿಮೆಗಾರನೆಂದು ಕರೆಯುವರು ಈ ಅಸಂಘಟಿತ ಕ್ಷೇತ್ರದಲ್ಲಿ ದುಡಿಯುವವರಲ್ಲಿ ಮಹಿಳೆಯರ ಪಾಲು ದೊಡ್ಡದು.

ಯಾವುದೇ ಸಂಘ ಅಥವಾ ಸಂಘಟನೆಗಳಿಂದ ಹೊರತಾದ ಅಸಂಘಟಿತ ವಲಯದಲ್ಲಿ ದುಡಿಮೆಗಾರರು ಅತಿ ಹೆಚ್ಚು ಶೋಷಣೆಗೆ ಈಡಾಗುತ್ತಾರೆ. ಇವರಿಗೆ ಸ್ವಾತಂತ್ರ್ಯ ಸ್ವಾಯತ್ತತೆ ಇಲ್ಲದಿರುವುದರಿಂದ ತಮ್ಮ ಒಲವು ನಿಲವುಗಳನ್ನು ಪ್ರತಿಷ್ಠಾಪಿಸಲು ಅಥವಾ ಹಕ್ಕು ಚಲಾಯಿಸಲು ಸಾಧ್ಯವಾಗದ ಕಾರ್ಮಿಕರನ್ನು Flexible Labour ಎನ್ನುತ್ತಾರೆಂದೂ ಅಭಿಪ್ರಾಯವಿದೆ. "ಯಾವ ದುಡಿಮೆಯಲ್ಲಿ ಒಂದೇ ಉದ್ದೇಶಕ್ಕಾಗಿ ಒಗ್ಗೂಡಿ ತಮ್ಮ ಹಿತಾಶಕ್ತಿಗಳನ್ನು ಪೂರೈಸಿಕೊಳ್ಳಲು ಸಾಧ್ಯವಿಲ್ಲವೋ ಅವೆಲ್ಲವೂ ಅಸಂಘಟಿತ ವಲಯಗಳು" ಎಂದು ಕಾರ್ಮಿಕ ಆಯೋಗ ಅಸಂಘಟಿತ ವಲಯವನ್ನು ವ್ಯಾಖ್ಯಾನಿಸಿದೆ.

ಕೃಷಿ ಕ್ಷೇತ್ರದ ಮತ್ತು ಕಟ್ಟಡ ನಿರ್ಮಾಣ ಕಾಮಗಾರಿಯ ಕೂಲಿ ಕಾರ್ಮಿಕರು ಗೃಹ ಕೈಗಾರಿಕೆಗಳಲ್ಲಿ ತೊಡಗಿರುವವರು ಕುಟುಂಬ ಆಧಾರಿತ ದುಡಿಮೆಗಾರರು, ಬೀಡಿ ಕಟ್ಟುವವರು, ಊದುಬತ್ತಿ ತಯಾರಿಕರು, ಮೇಣದಬತ್ತಿ ತಯಾರಿಸುವವರು ಅಲ್ಲದೆ ಸ್ವಯಂ ಉದ್ಯೋಗಿಗಳು, ಇವರನ್ನೆಲ್ಲಾ ಅಸಂಘಟಿತ ವಲಯದ ಕಾರ್ಮಿಕರೆಂದು ಕರೆಯಲಾಗುತ್ತದೆ.

ಅಸಂಘಟಿತ ವಲಯವೆಂದು ಗುರುತಿಸುವ ಅನೇಕ ಕ್ಷೇತ್ರಗಳಲ್ಲಿ ದುಡಿಯುವ ಮಹಿಳೆಯರ ಸಂಖ್ಯೆ ಅಧಿಕವಾಗಿದೆ. ದುಡಿಮೆಯಲ್ಲಿ ಅಧಿಕ ಸಂಖ್ಯೆ ಮಹಿಳಾ ದುಡಿಮೆಗಾರರಿದ್ದಾರೆ. "ವ್ಯವಸಾಯದಲ್ಲಿ ನಿರತವಾಗಿರುವ ಒಟ್ಟು ಜನರಲ್ಲಿ ೫೧.೨೧ ಪ್ರತಿಶತ ಮಹಿಳೆಯರಿದ್ದಾರೆ. ಪುರುಷರ ಸಂಖ್ಯೆ ೪೮.೮ ಪ್ರತಿಶತ ಮಾತ್ರ ಅಂದರೆ ಪುರುಷರಿಗಿಂತ ಆರು ಲಕ್ಷದಷ್ಟು ಅಧಿಕ ಮಹಿಳೆಯರು ಕೃಷಿ ಕ್ಷೇತ್ರದಲ್ಲಿ ದುಡಿಯುತ್ತಿರುವುದಾಗಿ ಒಂದು ಅಧ್ಯಯನ ತಿಳಿಸುತ್ತದೆ. ಅಧ್ಯಯನ ಕುಟುಂಬ ಆಧಾರಿತ ದುಡಿಮೆಗಾರರು ಬಿಡಿ ಕಟ್ಟುವವರು, ಗಂಧದಕಡ್ಡಿ ತಯಾರಕರು. ಮೇಣವಬತ್ತಿ ಹೊಸೆಯುವವರು, ವ್ಯಾಪಾರಿಗಳು ಹಾಗೂ ಸ್ವಯಂ ಉದ್ಯೋಗಸ್ಥರು ಇವರನ್ನು ಅಸಂಘಟಿತ ವಲಯದ ಕಾರ್ಮಿಕರು ಎಂದು ಗುರುತಿಸುತ್ತದೆ.

ಇವರಲ್ಲದೆ ಇತರರು ಎಂದರೆ ಬೀಡಿ ಕಾರ್ಮಿಕರು, ಮನೆಕೆಲಸದವರು, ತರಕಾರ, ಹೂವು, ಹಣ್ಣು ಮಾರುವವರು, ಕನ್‌ಸ್ಟ್ರಕ್ಸ್‌ನಲ್ಲಿ ದುಡಿಯುವ ಮಹಿಳೆಯರು, ಗಾರ್ಮೆಂಟ್ ಕೆಲಸಗಾರರು, ಆಹಾರ ವಸ್ತುಗಳ ತಯಾರಕರು, ಕಮ್ಮಾರನು ಇನ್ನೂ ಅನೇಕ ಕ್ಷೇತ್ರಗಳಲ್ಲಿ ಕೆಲಸ ಮಾಡುವ ಮಹಿಳೆಯರ ಅಸಂಘಟಿತ ವಲಯವು ತುಂಬ ವಿಸ್ತಾರವಾಗಿದೆ. ಆಯಾಯ ಪ್ರದೇಶಗಳಲ್ಲಿ ದೊರೆಯುವ ಕಚ್ಚಾ ವಸ್ತುಗಳನ್ನಾಧರಿಸಿಯೂ ಅಸಂಘಟಿತ ವಲಯ ವಿಸ್ತೃತವಾಗುತ್ತಾ ಹೋಗುತ್ತದೆ. ಮಹಿಳೆಯರು ತಮ್ಮ ಪ್ರದೇಶಗಳಲ್ಲಿ ದೊರೆಯುವ ವಸ್ತುಗಳನ್ನು ಆಧರಿಸಿ ಕೆಲಸ ಮಾಡುತ್ತಾರೆ. ಅವರ ಶ್ರಮಕ್ಕೆ ತಕ್ಕ ಪ್ರತಿಫಕ ದೊರೆಯುವುದಿಲ್ಲ. ವ್ಯಾಪಾರಸ್ಥ ಮಹಿಳೆಯರಿಗೆ ಅವರ ವ್ಯಾಪಾರದಿಂದ ಒಂದು ಸಾರಿ ಲಾಭ ಬಂದರೆ ಮತ್ತೊಂದು ಬಾರಿ ನಷ್ಟವನ್ನ ಅನುಭವಿಸುತ್ತಾರೆ. ಬಿಸಲು ಹಸಿಲು ಅನ್ನದೆ ಬೀದಿ ಬೀದಿ ತಿರುಗುತ್ತಾ ಮಾರಾಟ ಮಾಡುತ್ತಾರೆ. ಬಿದಿರು ಹೆಚ್ಚಾಗಿ ಬೆಳೆಯುವ ಪ್ರದೇಶದಲ್ಲಿ ಮಹಿಳೆಯರು ಬಿದಿರನ್ನು ಆಧರಿಸಿ ಬಿದಿರಿನಿಮದ ಬುಟ್ಟಿಗಳನ್ನು, ಹೂವಿನಕುಕ್ಕೆಗಳನ್ನು ತಯಾರಿಸಿ ಮಾರಾಟ ಮಾಡುತ್ತಾರೆ.

**ಉದಾ:-** ಒರಿಸ್ಸಾದ ಬಾರಿಪದ ಜಿಲ್ಲೆಯಲ್ಲಿ ಸಬ್ಬೆ ಹುಲ್ಲು ಹೆಚ್ಚಾಗಿ ಬೆಳೆಯುವುದರಿಂದ ಅಲ್ಲಿ ಆ ಹುಲ್ಲಿನಿಂದ ಹಗ್ಗ ಹೊಸೆಯುವ ಉದ್ಯಮ ಸಾಮಾನ್ಯವಾಗಿದೆ. ಹೀಗೆ ಆಯಾ ಪ್ರದೇಶಗಳಿಗೆ ಅನುಗುಣವಾಗಿ ದುಡಿಮೆಗಳು ಭಿನ್ನವಾಗುತ್ತಾ ಹೋಗುತ್ತವೆ.

ಮಾರ್ಚ್ ೨೦೦೪ರ ಯೋಜನಾ ಪತ್ರಿಕೆಯ ವರದಿಯು ತಿಳಿಸುವಂತೆ ಭಾರತದಲ್ಲಿ ಒಟ್ಟು **೪೮೬** ಲಕ್ಷ ಮಹಿಳೆಯರು ಅಸಂಘಟಿತ ವಲಯದಲ್ಲಿ ದುಡಿಯುತ್ತಿದ್ದಾರೆ. ಗ್ರಾಮೀಣ ಪ್ರದೇಶದ ಮಹಿಳೆಯ ಪಾಲು ದೊಡ್ಡದು ೪೨೭ ಲಕ್ಷ ಮಹಿಳೆಯರು ಗ್ರಾಮೀಣ ಹಾಗೂ ೬೦ ಲಕ್ಷ ಮಹಿಳೆಯರು ನಗರ ಪ್ರದೇಶದವರು ಆಗಿದ್ದಾರೆಂದು ಈ ವರದಿಯಿಂದ ತಿಳಿದುಬರುತ್ತದೆ. ಒಟ್ಟು ಪ್ರತಿಶತ **೪೦** ರಷ್ಟು ಮಹಿಳೆಯರು ಅಸಂಘಟಿತ ವಲಯದ ದುಡಿಮೆಗಾರರಾಗಿದ್ದಾರೆ. ಕರ್ನಾಟಕ ರಾಜ್ಯ ಒಂದರಲ್ಲಿ ಅಸಂಘಟಿತ ವಲಯದಲ್ಲಿ ದುಡಿಯುವ ಮಹಿಳೆಯರ ಸಂಖ್ಯೆ ೧೭ ಲಕ್ಷಕ್ಕೂ ಮಿಕ್ಕಿದೆ. ಬಹಳಷ್ಟು ದುಡಿಮೆಗಾರರು ಕೃಷಿಕಾರ್ಮಿಕರೇ ಆಗಿರುವುದನ್ನು ಕಾಣಬಹುದು.

ವಿಜಾಪುರದಲ್ಲಿ ಅಸಂಘಟಿತ ವಲಯಕ್ಕೆ ಸೇರಿದ ಮಹಿಳೆಯರ ಸಂಖ್ಯೆ ಒಮದು ಅಂದಾಜಿನಂತೆ **೨೫೦೦**. ಇವರಲ್ಲಿ ಹೆಚ್ಚು ಮಹಿಳೆಯರು ಕೃಷಿ ಕ್ಷೇತ್ರದಲ್ಲಿ ದುಡಿಮೆಯನ್ನು ಕೈಗೊಂಡಿದ್ದಾರೆ. ಜನಗಣತಿಯ ಸಂದರ್ಭದಲ್ಲಿ ಈ ಜಿಲ್ಲೆಯ ಅಸಂಘಟಿತ ವಲಯವನ್ನು ೬ ಪ್ರಕಾರದ ಉದ್ಯೋಗಿಗಳಾಗಿ ವಿಂಗಡಿಸಿದ್ದು ಗುರುತಿಸಲಾಗಿದ್ದು ಅವುಗಳ ವಿವರ ಈ ಕೆಳಗಿನಂತಿದೆ.

೧. ಸಾಗುವಳಿದಾರರು

೨. ಕೃಷಿ ಕಾರ್ಮಿಕರು

೩. ಗುಡಿಕೈಗಾರಿಕೆ, ಹೈನುಗಾರಿಕೆ

೪. ಕುಟುಂಬ ಸಂಬಂಧ ಕೈಗಾರಿಕೆ

೫. ಕುಟುಂಬೇತರ ಕೈಗಾರಿಕೆ

೬. ಕಟ್ಟಡ ನಿರ್ಮಾಣ

೭. ವ್ಯಾಪಾರ ವಾಣಿಜ್ಯ

೮. ಸಾರಿಗೆ ಸಂಪರ್ಕ

೯. ಇತರೆ

ಈ ಪಟ್ಟಿಯಲ್ಲಿ ಮೊದಲಿನೆರಡು ಕೃಷಿಸಂಬಂಧ ಚಟುವಟಿಕೆಗಳು ಉಳಿದವುಗಳು ಕೃಷಿಯೇತರವಾದಗಳು

ಕೃಷಿ, ಹೈನುಗಾರಿಕೆ, ಕಟ್ಟಡ ನಿರ್ಮಾಣ, ವಸ್ತು ತಯಾರಿಕೆ, ಬಿದಿರು ಬುಟ್ಟಿ, ಈಚಲು ಬುಟ್ಟಿ ತಯಾರಿಸುವುದು, ಬಟ್ಟೆ ಹೊಲಿಯುವುದು, ಕೌದಿ ಹೊಲಿಯುವುದು, ಸಿದ್ದ ಉಡುಪು ತಯಾರಿಕೆ ಮನೆಗಳಲ್ಲಿ ಕಸ ಮುಸುರೆ ಹಾಗೂ ಬಟ್ಟೆ ತೊಳೆಯುವ ಆಳುಗಳಾಗಿ ಹಂಗಾಮಿ ಅಥವಾ ದಿನಗೂಲಿ ನೌಕರಿ, ಚಿಲ್ಲರೆ ವ್ಯಾಪಾರ ತಲೆ ಮೇಲೆ ಹೊತ್ತು ಮಾರುವುದು, ದಿನಗೂಲಿ, ನೌಕರಿ ಮತ್ತು ಆಹಾರ ಸಂರಕ್ಷಣೆ ಇತ್ಯಾದಿಗಳು ಇಷ್ಟೇ ಅಲ್ಲದೆಯೇ ಇತ್ತೀಚಿನ ದಿನಗಳಲ್ಲಿ ಬಟ್ಟೆ ಅಂಗಡಿಗಳಲ್ಲಿ ಕೆಲಸ ಮಾಡುವ ಮಹಿಳೆಯರು ಬೀದಿ-ಬೀದಿಗಳಲ್ಲಿ ಸೇಲ್ಸ್ ಗರ್ಲ್ಸ್ ಕೆಲಸ, ಕೆಲವು ಖಾಸಗಿ ಆಫೀಸ್‌ಗಳಲ್ಲಿ ರಿಸಿಪ್‌ಶನಿಸ್ಟ್ ಆಗಿಯು ಮಹಿಳೆಯರು ದುಡಿಯುತ್ತಿದ್ದಾರೆ. ಕಾಲ್‌ಸೆಂಟರ್‌ಗಳಲ್ಲಿಯೂ ಮಹಿಳೆಯರು ಉದ್ಯೋಗಿಗಳಾಗಿ ದುಡಿಯುತ್ತಿದ್ದಾರೆ. ಸ್ವತ ತಾವೇ ಉದ್ಯೋಗಗಳನ್ನು ಕೈಗೊಳ್ಳುವವರನ್ನು ಮೂರು ಮುಖ್ಯ ಪ್ರಕಾರಗಳಲ್ಲಿ ವಿಂಗಡಿಸಿಕೊಳ್ಳಬಹುದು.

೧) ಚಿಲ್ಲರೆ ವ್ಯಾಪಾರಿಗಳು, ಬೀದಿ ಬದಿಯ ಮಾರಾಟಗಾರರು ಹೊತ್ತು ಮಾರುವವರು ಗೃಹ ಬಳಕೆ ವಸ್ತುಗಳು ಮಾರಾಟಗಾರರು.

೨) ಗೃಹ ಸಂಬಂಧ ಉತ್ಪಾದನಾ ಚಟುವಟಿಕೆಗಳು, ಮಡಿಕೆ ತಯಾರಿಕೆ, ಹೈನುಗಾರಿಕೆ ಉಪ್ಪಿನಕಾಯಿ, ಹಪ್ಪಳ, ಸಂಡಿಗೆ ತಯಾರಿಕೆ ಜೊತೆಗೆ ಕೈಮಗ್ಗದಲ್ಲಿ ಸೀಯುವಿಕೆ.

೩) ಸೇವಾ ವಲಯಗಳಲಿ ದುಡಿಯವವರು. ಉದ್ಯೋಗಿಗಳು, ನಗರ ಹಾಗು ಗ್ರಾಮೀಣ ಪ್ರದೇಶಗಳೆರಡರಲ್ಲಿಯೂ ಕಂಡು ಬರುತ್ತಾರೆ.

ಮಹಿಳೆಯರು ಎಲ್ಲಾ ಚಟುವಟಿಕೆಗಳಲ್ಲಿ ತೊಡಗಿದ್ದರೂ ಅವೆಲ್ಲವೂ ಲಿಂಗವಿಶಿಷ್ಟ ದುಡಿಮೆಗಳೇ ಆಗಿರುವುದನ್ನು ಕಾಣಬಹುದು. ಕೆಲವು ಕೆಲಸಗಳನ್ನು ಮಹಿಳೆಯರೆ ಮಾಡಬೇಕೆಂದು ನಿಯಮಗಳಿರುತ್ತವೆ. ಉದಾ: – ಕೃಷಿಯಲ್ಲಿ ಕಳೆ ತೆಗೆಯುವುದು. ಕಟ್ಟಡಗಳನ್ನು ನಿರ್ಮಾಣ ಮಾಡುವಾಗ ಜೆಲ್ಲಿ, ಮರಳು, ಸಿಮೆಂಟ್‌ಗಳನ್ನು ಮಹಿಳೆಯರು ತಲೆಯ ಮೇಲೆ ಹೊತ್ತು ಕಟ್ಟುವವರೆ ಒದಗಿಸುವುದು. ಬಾವಿ ತೆಗೆಯುವಾಗ ಸಿಗುವ ಮಣ್ಣನ್ನು ಮಹಿಳೆಯರೆ ಹೊರಗೆ

ಸುರಿಯುವ ಕೆಲಸ ಹೀಗೆ ಹೆಚ್ಚು ಶ್ರಮದಾಯಕವಾದ ಕೆಲಸಗಳನ್ನು ಮಹಿಳೆಯರಿಗಾಗಿ ಮುಡುಪಾಗಿಡಲಾಗಿರುತ್ತದೆ. ದೇಹಕ್ಕೆ ಆಯಾಸವಾಗುವಂತಹ ಕೆಲಸವಾಗಿದ್ದರು ದುಡಿಮೆಗೆ ತಕ್ಕಂತಹ ಪ್ರತಿಫಲ ಸಿಗುವುದಿಲ್ಲ.

ಅಸಂಘಟಿತ ವಲಯದಲ್ಲಿ ದುಡಿಯುವ ಮಹಿಳೆಯರಿಗೆ ಅವರ ಶ್ರಮಕ್ಕೆ ತಕ್ಕದಾದಂತಹ ಪ್ರತಿಫಲವು ಸಿಗದಿರುವುದನ್ನು ಕಾಣಬಹುದು. ಕೃಷಿ ಕ್ಷೇತ್ರವನ್ನೆ ತೆಗೆದುಕೊಂಡರೆ ಮಹಿಳೆಯರು ಗಂಡಸರಷ್ಟೇ ಶ್ರಮವಹಿಸಿ ದುಡಿದರೂ ಸಹ ಒಂದು ದಿನದ ಕೂಲಿ ೫೦ ರೂ. ಮಾತ್ರ ಆಗಿರುತ್ತದೆ. ಅದೇ ಪುರುಷನಿಗೆ ೧೦೦ರೂ ಅನ್ನು ದಿನಗೂಲಿಯಾಗಿ ನೀಡುತ್ತಾರೆ. ಅದೇ ರೀತಿ ಗಾರ್ಮೆಂಟ್‌ಗಳಲ್ಲಿ ದುಡಿಯುವ ಮಹಿಳೆಯರಿಗೆ ಅಮ್ಮಮ್ಮ ಅಂದರೆ ೧೫೦೦ರಿಂದ೨೦೦೦ ದವರೆಗೆ ವೇತನ ನೀಡಬಹುದು. ಅದೇ ಪುರುಷನಿಗೆ ೪೦೦೦ ದಿಂದ ೫೦೦೦ ದವರೆಗೆ ವೇತನ ನೀಡುತ್ತಾರೆ. ಇಬ್ಬರೂ ಕೂಡ ಬೆಳಿಗ್ಗೆಯಿಂದ ಸಾಯಂಕಾಲದವರೆಗೆ ದುಡಿದರೂ ಸಹ ಇಬ್ಬರ ವೇತನದಲ್ಲಿ ತಾರತಮ್ಯವಿರುವುದನ್ನು ಕಾಣಬಹುದು ಇಲ್ಲಿ ಪುರುಷನ ದುಡಿಮೆಗೆ ಬೆಲೆ ಇದೆ. ಸ್ತ್ರೀಯರ ದುಡಿಮೆಗೆ ಬೆಲೆಯಿಲ್ಲ. ಮಹಿಳೆಯರು ಕೃಷಿ ಕ್ಷೇತ್ರದಲ್ಲಿ ಕಳೆ ಕೀಳುವುದು, ಸಸಿ ನೆಡುವುದು, ಬುಟ್ಟಿ ಹೆಣೆಯುವುದು, ಹೊಲಿಗೆ ಕೆಲಸ ಬೂದುಬತ್ತಿ ತಯಾರಿಸುವುದು ಇಂತೆಲ್ಲ ಕೆಲಸಗಳು ಕಣ್ಣಿಗೆ ಮತ್ತು ಕೈಗೆ ಶ್ರಮದಾಯಕ ಕೆಲಸವಾಗಿದ್ದರು ಕೂಡ ಅವರ ಪರಿಶ್ರಮಕ್ಕೆ ಅಥವಾ ಅವರ ಬೆವರಿಗೆ ಸರಿಯಾದ ಪ್ರತಿಫಲ ಸಿಗುತ್ತಿಲ್ಲ.

ಈಗ ಶಿಕ್ಷಿತರ ಪ್ರಮಾಣ ಎಷ್ಟಿದೇ ಎಂಬುದನ್ನು ಅರಿಯುವುದು ಸರಿ. ಮಹಿಳೆಯರಲ್ಲಿ ಅನಕ್ಷರಸ್ಥರ ಸಂಖ್ಯೆ ಹೆಚ್ಚಾಗಿರುವುದನ್ನು ಕಾಣಬಹುದಾಗಿದೆ. ಎಷ್ಟೋ ತಂದೆ-ತಾಯಿಗಳು ತಮ್ಮ ಮಕ್ಕಳನ್ನು ಪ್ರಾಥಮಿಕ ಶಾಲೆಯವರೆಗೆ ಓದಿಸಿರುವುದನ್ನು ಕಾಣಬಹುದು. ಪ್ರಾಥಮಿಕ ಶಾಲೆಯವರೆಗೆ ವಿದ್ಯಾಭ್ಯಾಸ ಪಡೆದವರು ಪ್ರತಿಶತ ೪೦ ರಷ್ಟಿದ್ದಾರೆ. ಮಾಧ್ಯಮಿಕ ತರಗತಿಯ ಶಿಕ್ಷಣ ಪಡೆದವರ ಸಂಖ್ಯೆ ನೂರಕ್ಕೆ ೨೦ ರಷ್ಟಿದ್ದರೆ ಕೇವಲ ನೂರಕ್ಕೆ 5ರಷ್ಟು ಮಾತ್ರ ಹೆಚ್ಚಿನ ಶಿಕ್ಷಣವನ್ನು ಪಡೆದವರಿದ್ದಾರೆ.

ನಗರದಲ್ಲಿ ನಡೆಸಿದ ಸಮೀಕ್ಷೆಯ ಪ್ರಕಾರ ಮನೆಗೆಲಸದಲ್ಲಿ ತೊಡಗಿಕೊಂಡಿರುವವರ ಸಂಖ್ಯೆ ೪೦ ರಷ್ಟಿದೆ ಬೀಡಿ ಕಟ್ಟುವವರ ಸಂಖ್ಯೆ ಶೇ ೨೦ ಬಿದಿರಿನ ವಸ್ತು ತಯಾರಿಸುವವರು ಶೇ ೨೦. ಗೃಹ ಉದ್ಯೋಗಗಳಲ್ಲಿ ತೊಡಗಿರುವವರು ಶೇ ೧೦ ಮತ್ತು ಊದಿನಕಡ್ಡಿ ತಯಾರಿಸುವವರ ಸಂಖ್ಯೆ ಶೇ.೧೦ ಆಗಿದೆ.

ಅಸಂಘಟಿತ ವಲಯಗಳಲ್ಲಿ ಕೆಲಸ ಮಾಡುವ ಮಹಿಳೆಯರನ್ನು ಹಲವಾರು ಸಮಸ್ಯೆಗಳು ಕಾಡುತ್ತಿರುವುದನ್ನು ಕಾಣಬಹುದು ಅವುಗಳೆಂದರೆ

೧. ಅವರನ್ನು ಕಾಡುವ ಅತ್ಯಂತ ಮುಖ್ಯವಾದ ಸಮಸ್ಯೆಯೆಂದರೆ ದೈಹಿಕ ಅನಾರೋಗ್ಯ ಆಯಾ ಕೆಲಸಸದ ಸ್ವರೂಪದಿಂದಾಗಿ ಈ ತೊಂದರೆ ಕಾಣಿಸಿಕೊಳ್ಳುತ್ತದೆ.

೨. ಅತೀಯಾದ ಕೆಲಸದಿಂದ ಮೈ ಕೈ ನೋವು ಉಂಟಾಗುತ್ತದೆ.೪೪ ಪ್ರತಿ ಶತ ಮಹಿಳೆಯರು ಮೈ ಕೈ ನೋವಿನಿಂದ ಬಳಲುತ್ತಿರುವುದನ್ನು ನೋಡಬಹುದು. ಇದಕ್ಕೆ ಕಾರಣವೆಂದರೆ ನಿರಂತರವಾಗಿ ದುಡಿಯುತ್ತಿರುವುದು.

೩. ಊದುಬತ್ತಿ ಹೊಸೆಯುವ ಹಾಗೂ ಬೀಡಿ ಕಟ್ಟುವ ಮಹಿಳೆಯರಲ್ಲಿ ಅಲರ್ಜಿ ಉಂಟಾಗುತ್ತದೆ.ಈ ಅಲರ್ಜಿ ಹೇಗೆ ಉಂಟಾಗುತ್ತದೆ ಎಂದರೆ ತಂಬಾಕಿನ ವಾಸನೆ ಹಾಗೂ ಗಂಧದ ಕಡ್ಡಿಯ ಹುಡಿಗಳಿಂದಾಗಿ ಈ ಅಲರ್ಜಿ ಉಂಟಾಗುತ್ತದೆ . ಅಲರ್ಜಿ ಶೇ ೨೬ ರಷ್ಟು ಮಹಿಳೆಯರಲ್ಲಿ ಪ್ರತಿಸತ ಉಂಟಾಗುತ್ತದೆ.

೪. ಶೇ. ೩೦ ರಷ್ಟು ಮಹಿಳೆಯರು ಮೈ ಕೈ ನೋವಿನಿಂದ ನರಳುತ್ತಿದ್ದಾರೆ.

೫. ಇನ್ನು ಉಳಿದ ೧೦ ಜನರು ನಿದ್ರಾಹೀನತೆಯಿಂದ ಬಳಲುತ್ತಿದ್ದಾರೆ.

೬. ಪೌಷ್ಟಿಕ ಆಹಾರದ  ದೊರತೆಯಿಂದ ಬಳಲುತ್ತಿದ್ದಾರೆ.

ದುಡಿಮೆಯ ಸಮಯದ್ದಲ್ಲಿ ಮಹಿಳೆಯರು ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಇವರು ನಿರ್ದಿಷ್ಟ ಕಾನೂನಿನ ಚೌಕಟ್ಟಿನಗೆಒಳಪಡದೆ ಇರುವುದರಿಂದ ಈ ಸಮಸ್ಯೆಗಳಿಗೆ ಒಳಗಾಗುತ್ತಿದ್ದಾರೆ. ಎಲ್ಲಕ್ಕಿಂತ ಅತೀ ದೊಡ್ಡ ಸಮಸ್ಯೆಯೆಂದರೆ ಮದ್ಯವರ್ತಿಗಳದು.ಇದರಿಂದ ತೊಂದರೆಗೆ ಈಡಾಗುವ ಮಹಿಳೆಯರ ಸಂಖ್ಯೆ ಶೇ ೨೦ ವಾಹನ ಸೌಕರ್ಯಗಳ ಕೆಲಸ ಸಿಗದೇ ತೊದರೆ ಅಂದರೆ ಸಮಸ್ಯೆ ಎದುರಿಸುತ್ತಿರುವವರ ಸಂಖ್ಯೆ ಶೇ ೨೬ ರಷ್ಟು ಇದ್ದಾರೆ .

ಬೀಡಿ ಸುತ್ತುವ ಕಾರ್ಮಿಕರು ವಾಹನ ಸೌಕರ್ಯದ ಸಮಸ್ಯೆ ಎದುರಿಸುತ್ತಿದ್ದಾರೆ. ಇವರು ಸುತ್ತಿದಂತಹ ಬೀಡಿಗಳನ್ನು ಮಾರಾಟ ಮಾಡಲು ಕಾರ್ಖಾನೆಗೆ ಹೋಗಬೇಕಾಗುತ್ತದೆ. ಆಗ ವಾಹನವನ್ನು ಅವಲಂಬಿಸಬೇಕಾಗುತ್ತದೆ. ಅವರಿಗೆ ಸಿಗುವಂತಹ ಅಲ್ಪ ಆದಾಯದಲ್ಲಿ ವಾಹನಕ್ಕೂ ಖರ್ಚು ಮಾಡಬೇಕಾಗುತ್ತದೆ. ಅವರಿಗೆ ಯಾವುದೇ ರೀತಿಯ ಪ್ರತಿ ಫಲ ಸಿಗುವುದಿಲ್ಲ.

ಬಿದಿರಿನಿಂದ ಬುಟ್ಟಿಗಳನ್ನು ಹೆಣೆಯುವವರು ಮದ್ಯವರ್ತಿಗಳಂದ ಶೋಷಣೆಗೆ ಒಳಗಾಗುತ್ತಾರೆ. ಮಹಿಳೆಯರಿಗೆ ಈ ತೀರವಾಗಿ ಮಾರುಕಟ್ಟೆಯ ಸಂಪರ್ಕವಿಲ್ಲದೆ ಇರುವುದರಿಂದ ಮದ್ಯವರ್ತಿಗಳನ್ನು ಅವಲಂಬಿಸುವುದು ಅನಿವಾರ್ಯವಾಗಿದೆ. ಅವರು ಕಷ್ಟಪಟ್ಟು ಹೆಣದ ಬುಟ್ಟಿಗಳನ್ನು ಮಧ್ಯವರ್ತಿಗಳು ಮಾರುಕಟ್ಟೆಗೆ ಸಾಗಿಸುವುದರಿಂದ ಇವರಿಂದ ಪ್ರತೀ ಬುಟ್ಟಿಗೆ ೨ ರೂ ಕಮೀಶನ್ ಪಡೆಯುತ್ತರೆ. ಇದರಿಂದ ಇವರ ಆಧಾಯ ತಗ್ಗುತ್ತದೆ.

ಊದು ಬತ್ತಿ ಹೊಸೆಯುವವರು ಬೀಡಿಕಟ್ಟವವರು ಮತ್ತು ಮನೆ ಕೆಲಸ ಮಾಡುವವರು ನಿರಂತರವಾಗಿ ಕೆಲಸ ವಿಲ್ಲದೆ ಸಮಸ್ಯೆ ಎದುರಿಸುತ್ತಿದ್ದಾರೆ. ಬೀಡಿಕಟ್ಟುವವರಿಗೆ ದಿನಕ್ಕೆ ಇಷ್ಟು ಕಟ್ಟು ಬೀಡಿ ಕಟ್ಟಿದರೆ ಇಷ್ಟು ಅಂರಹ ದಿನಗೂಲಿ ನೀಡುತ್ತಾರೆ. ಊದುಬತ್ತಿ ಹೊಸೆಯುವವರಿಗೆ ಅಷ್ಟೆ ಕಟ್ಟಿಗೆ ಇಷ್ಟು ಕೂಲಿ ಎಂದು ನೀಡುತ್ತಿದ್ದಾರೆ.ಅಮ್ಮಮ್ಮ ಅಂದರೆ ತಿಗಳಿಗೆ ೧೪೦೦ ರಿಂದ ೧೬೦೦ ಕಡಿಮೆ ಎಂದರೆ ೮೦೦ ರಿಂದ ೧೩೦೦ ರೂಪಾಯಿಗಳಾಗಿರುತ್ತದೆ. ಮನೆ ಕೆಲಸ ಮಾಡುವವರಿಗೆ **೨೫೦** ರಿಂದ **೫೦೦** ರೂವರೆಗೆ ಸಂಬಳ ನೀಡುತ್ತಾರೆ.

ಅಸಂಘಟಿತ ವಲಯಗಳಲ್ಲಿ ದುಡಿಯುವ ಮಹಿಳೆಯರು ಹೆಚ್ಚಿನ ಆದಾಯಕ್ಕಾಗಿ ಹೆಚ್ಚು ಕಾಲ ದುಡಿಯಬೇಕಾಗುತ್ತದೆ. ಹೀಗೆ ಹೆಚ್ಚು ಕಾಲ ದುಡಿಯುವುದರಿಂದ ಪೌಷ್ಠಿಕ ಆಹಾರ ಬೇಕಾಗುತ್ತೆದೆ. ಪೌಷ್ಠಿಕ ಆಹಾರಣ ಬೆಲೆ ಹೆಚ್ಚಾಗಿರುವುದರಿಂದ ಅವುಗಳನ್ನು ಕೊಂಡು ತಿನ್ನಲು ಹೆಚ್ಚು ಹಣ ಬೇಕಾಗುತ್ತದೆ . ಅವರು ದುಡಿಯುವ ಆದಾಯದಲ್ಲಿ ಅಷ್ಟನ್ನು ಕೊಟ್ಟು ತಿನ್ನಲು ಆಗದೇ ಇರುವುದರಿಂದ ಅನಾರೋಗ್ಯದಿಂದ ಹಾಗೂ ದೈಹಿಕ ನೋವಿನಿಂದ ಬಳಲುತ್ತಿದ್ದಾರೆ.

ಮಹಿಳೆಯರು ಕಷ್ಟಪಟ್ಟು ದುಡಿಯುವ ಕೆಲಸಗಳಿಗೆ ಅಂದರೆ ಅವಳ ಶ್ರಮಕ್ಕೆ ಸರಿಯಾದ ಫಲ ಸಿಗುವುದಿಲ್ಲ. ಮಹಿಳೆಯರ ಕೆಲಸಗಳಿಗೆ ಹೆಚ್ಚು ಪ್ರಾಧ್ಯಾನತೆ ಇರುವುದಿಲ್ಲ . ಅದೇ ಪುರುಷ ಮಾಡುವ ಕೆಲಸಗಳಿಗೆ ಹೆಚ್ಚಿನ ಪ್ರತಿಫಲ ಹಾಗೂ ವಿಶಿಷ್ಠ ಪ್ರಾಧ್ಯಾನತೆಯನ್ನು ನಮ್ಮ ಸಮಾಜ ಅವರಿಗೆ ನೀಡಿದೆ. ಕಡಿಮೆ ಖರ್ಚಿನಲ್ಲಿ ಹೆಚ್ಚಿನ ಲಾಭಗಳಿಸಬೇಕೆಂದಿರುವ ಖಾಸಗೀ ವಲಯವು ಅಗ್ಗದ ಶ್ರಮವನ್ನಾಧರಿಸಿದೆ. ಈ ಅಗ್ಗದ ಶ್ರಮವೆಂದರೆ ಅನಕ್ಷರಸ್ಥ ಮಹಿಳೆಯರು ಅತೀ ಕಡಿಮೆ ಸಂಬಳಕ್ಕೆ ೧೦ ಗಂಟೆಗಿಂತಲೂ ಹೆಚ್ಚು ದುಡಿಯುತ್ತಿದ್ದಾರೆ. ಆದರೂ ಅವರ ಶ್ರಮಕ್ಕೆ ಸರಿಯಾದ ಪ್ರತಿಫಲ ಸಿಗುತ್ತಿಲ್ಲ.

ಅಧ್ಯಾಯ - ೬

# ದುಡಿಯುವ ಮಹಿಳೆಯ ನೆಲೆ ಮತ್ತು ಅವಳ ಹಕ್ಕುಗಳು

ಮಾನವ ಸಮಾಜ ಹುಟ್ಟಿದಾಗಿನಿಂದ ಸ್ತ್ರೀ - ಪುರುಷರು ಕೆಲಸ ಮಾಡುತ್ತಾ ಬಂದಿದ್ದಾರೆ. ಪ್ರಾರಂಭದ ಬೇಟೆಗಾರ ಸಮಾಜದಲ್ಲಿ ದುಡಿಮೆಯ ಪರಿಕಲ್ಪನೆಯಿರಲಿಲ್ಲ. ಹೊಟ್ಟೆಯನ್ನು ತುಂಬಿಸಿಕೊಳ್ಳುವುದಕ್ಕಾಗಿ ಮತ್ತು ಬದುಕುವುದಕ್ಕಾಗಿ ಬೇಟೆಯನ್ನಾಡುತ್ತಿದ್ದರು. ಆರಂಭದಲ್ಲಿ ಆದಿಮಾನವರಿಗೆ ಬೆಂಕಿಯ ಅರಿವು ಗೊತ್ತಿಲ್ಲದಿದ್ದರಿಂದ ಬೇಟೆಯಾಡಿದ ಪ್ರಾಣಿಪಕ್ಷಿಗಳನ್ನು ಹಸಿಯಾಗಿ ತಿನ್ನುತ್ತಿದ್ದರು. ಬೆಂಕಿಯನ್ನು ಕಂಡುಹಿಡಿದ ನಂತರ ಬೇಯಿಸಿ ತಿನ್ನಲು ಪ್ರಾರಂಭಿಸಿದರು. ಪುರುಷರು ಬೇಟೆಯಾಡಲು ಹೊರಗೆ ಹೋದರೆ ಸ್ತ್ರೀಯರು ಒಂದು ಕಡೇ ನೆಲೆಸಿ ಆಹಾರ ಬೇಯಿಸಿ ಹಂಚುವ ಕೆಲಸವಹಿಸಿಕೊಂಡರು. ಮಕ್ಕಳನ್ನು ಹೆರುವ, ನೋಡಿಕೊಳ್ಳುವ ಕೆಲಸವು ಅವರನ್ನು ಒಂದು ನಿರ್ದಿಷ್ಠ ಸ್ಥಳದಲ್ಲಿ ನೆಲಸುವಂತೆ ಮಾಡಿತು. ಪುರುಷರು ಕೆಲಸ ದುಡಿಮೆ ಎನಿಸಿಕೊಳ್ಳಲಾರಂಭಿಸಿದರೆ, ಸ್ತ್ರೀಯರ ಕೆಲಸ ಕರ್ತವ್ಯವಾಗಿ ಪ್ರಕೃತಿ ಜನ್ಯವಾಗಿ ಮುಂದುವರೆಯಿತು. ದುಡಿಯದೇ ಇರುವ ಮಹಿಳೆ ಪ್ರಾಯಶ್ಯ ಇರಲಾರಳು. ಮಹಿಳೆ ಮತ್ತು ದುಡಿಮೆ ಪರ್ಯಾಯ ಪದಗಳೇನೋ ಅನ್ನುವಷ್ಟು ಮಟ್ಟಿಗೆ ಹೆಣ್ಣಿನ ಜೀವನದಲ್ಲಿ ಕೆಲಸ ಬೆಸೆದುಕೊಂಡಿದೆ ಆದರೆ ಮಹಿಳೆಯರ ಕೆಲಸವನ್ನು ದುಡಿಮೆಯ ಪರಿಕಲ್ಪನೆಯಿಂದ ಹೊರಗಿಟ್ಟು ಅದನ್ನು ಅಗೋಚರಗೊಳಿಸಿದೆ ಹಾಗೂ ಮಹಿಳೆಯಾಗಿ ಹುಟ್ಟಿದ ಕಾರಣಕ್ಕೆ ಅವಳು ಲಿಂಗ ನಿರ್ದಿಷ್ಟ ಕಾರ್ಯಗಳನ್ನು ಮಾಡಬೇಕಾಗಿದೆ. ಆದ್ದರಿಂದ ಅವಳು ದುಡಿಮೆಯು ಜ್ಞಾನ-ವಿಜ್ಞಾನ ಗಳಲ್ಲಿ ದುಡಿಮೆಯೆಂದು ಪರಿಗಣಿತವಾಗಿಲ್ಲ.

ಮಹಿಳೆ ಮಳೆ ಬಿಸಿಲು ಚಳಿಯಿಂದ ರಕ್ಷಣೆ ಪಡೆಯಲು ಗುಡಿಸಲು ಕಟ್ಟಿಕೊಂಡು ತನ್ನ ಸುತ್ತ ಮುತ್ತಲಿನ ಪ್ರದೇಶಗಳಲ್ಲಿ ಗೆಡ್ಡೆಗೆಣಸುಗಳನ್ನು ಬೆಳೆಯಲಾರಂಭಿಸಿದಳು ಬೇಟೆಯಾಡುವುದೂ ಕಡಿಮೆಯಾಗಿ ಜನಸಂಖ್ಯೆ ಹೆಚ್ಚಾದಂತೆ ಇನ್ನಿತರ ಆಹಾರ ಬೆಳೆಗಳನ್ನು ಬೆಳೆಯಲಾರಂಭಿಸಿ ಕೃಷಿ ಪದ್ಧತಿಯು ಜಾರಿಗೆ ಬಂದಿತು. ಕೃಷಿ ಪ್ರಾರಂಭವಾದುದೇ ಮಹಿಳೆಯಿಂದ ಎನ್ನಬಹುದು.

.ಕೃಷಿಯನ್ನು ಜೀವನದ ಉಳಿವಿಗಾಗಿ ಹಾಗೂ ಕುಟುಂಬದ ನಿರ್ವಹಣೆಗಾಗಿ ಕೈಗೊಳ್ಳುವವರೆಗೆ ಅದು ಸ್ತ್ರೀ ಪ್ರಧಾನವಾಗಿತ್ತು. ಪುರುಷರು ಕಾಡನ್ನು ಕಡಿದು ಭೂಮಿಯನ್ನು ಉತ್ತು ಹದಗೊಳಿಸುವುದನ್ನು ಬಿಟ್ಟರೆ ಉಳಿದೆಲ್ಲಾ ಕೆಲಸಗಳನ್ನು ಬೀಜ ಬಿತ್ತುವುದು, ಕಳೆಕೀಳುವುದು, ನೀರುಹಾಕುವುದು, ಕೊಯ್ಲು, ಪಶು ಸಂಗೋಪನೆ, ಕೋಳಿ ಸಾಕಾಣಿಕೆಯಲ್ಲಿ ತನ್ನ ಮನೆಯ ಪುರುಷರೊಂದಿಗೆ ದುಡಿಯಲಾರಂಭಿಸಿದಳು. ಬೆಳೆದ ಬೆಳೆ ಕುಟುಂಬದ ಮಿತಿಯನ್ನು ಮೀರಿ ಮಾರುಕಟ್ಟೆಗೆ ವಿಸ್ತೃತಗೊಂಡ ಹಾಗೇ ಪುರುಷ ಪ್ರಧಾನವಾಗಿ ಪರಿವರ್ತನೆಗೊಂಡು ಯಾವಾಗ ಕೃಷಿ ಲಾಭ ಮಾರುಕಟ್ಟೆ & ವಾಣಿಜ್ಯ ಉದ್ದೇಶವನ್ನು ಹೊಂದಿತ್ತೋ ಆವಾಗಿನಿಂದ ಸ್ತ್ರೀ ಪುರುಷರ ಕೃಷಿ ಕೆಲಸದ ನಡುವೆ ತಾರತಮ್ಯ

ಉಂಟಾಯಿತು. ಉಳುಮೆ ಮಾಡಿ ಕೃಷಿ ಉತ್ಪನ್ನವನ್ನು ಲಾಭಕ್ಕಾಗಿ ಅಥವಾ ಇತರ ವಸ್ತುಗಳನ್ನು ಕೊಳ್ಳಲು ಮಾರುಕಟ್ಟೆಗೆ ಮಾರಾಟ ಮಾಡಿ ಆದಾಯ ತರುವ ಕೆಲಸವನ್ನು ದುಡಿಮೆ ಅನಿಸಿಕೊಂಡರೆ ಸ್ತ್ರೀಯರು ಮಾಡುವ ಉಳಿದೆಲ್ಲ ಕ್ರಿಯೆಗಳು ಕರ್ತವ್ಯವೆಂದು ಪರಿಗಣಿಸಲ್ಪಟ್ಟವು. ಪುರುಷರು ಕೆಲಸಕ್ಕೆ ಹೆಚ್ಚು ಶಕ್ತಿ ಬೇಕು ಎಂಬ ನಿಲುವು ಹಾಗೂ ಕೃಷಿ ಉತ್ಪನ್ನಗಳ ಮಾರಾಟ ಹಣದ ವ್ಯವಹಾರದಿಂದ ಅವರ ದುಡಿಮೆ ಆದ್ಯತೆ , ಮನ್ನಣೆ ಪಡೆಯಿತು ಸ್ತ್ರೀಯರು ಎಷ್ಟೇ ಶ್ರಮದಾಯಕವಾದ ಮತ್ತು ಅವಶ್ಯಕವಾದ ಕೆಲಸವನ್ನು ಮಾಡಿದರು ಸಹ ಅವರ ದುಡಿಮೆಗೆ ಬೆಲೆಸಿಗಲಿಲ್ಲ.

ಮಹಿಳೆಯರು ನಂತರ ಕೃಷಿಯೇತರ ಕೆಲಸಗಳಲ್ಲಿ ತೊಡಗಿದರು. ಬೀಡಿ ಕಟ್ಟುವುದು. ಹಗ್ಗ ಹೊಸೆಯುವುದು ಮಡಿಕೆ ಮಾಡುವುದು ಮುಂತಾದವುಗಳಿಗೆ ಕೈ ಹಚ್ಚಿದಳು. ಒಂದೆರಡು ಕೆಲಸಗಳನ್ನು ಪುರುಷರು ಮಾಡಿದರೆ ಹೆಚ್ಚಿನ ಕೆಲಸಗಳನ್ನು ಸ್ತ್ರೀಯರೆ ಮಾಡಿದರೂ ಉತ್ಪನ್ನದ ಸಾಗಣೆ, ಮಾರಾಟ ಹಾಗೂ ಹಣದ ವ್ಯವಹಾರದ ಸಲುವಾಗಿ ಅವರು ಪ್ರಮುಖ ದುಡಿಮೆಗಾರರಾದರೆ ಸ್ತ್ರೀಯರು ಪೂರಕ ದುಡಿಮೆಗಾರರಾಗಿ ಪರಿಗಣಿಸಲ್ಪಟ್ಟರು.ತಮ್ಮ ಅವಿರತ ದುಡಿಮೆ ಮತ್ತು ಕೊಡುಗೆಯಿಂದ ಕುಟುಂಬದಲ್ಲಿ ಉತ್ಪನ್ನವಾದ ಸ್ಥಾನವನ್ನೇ ಹೊಂದಿದ್ದರು. ಇದನ್ನು ೧೮ನೇ ಶತಮಾನದ ಕೈಗಾರಿಕ ಕ್ರಾಂತಿ ಕಿತ್ತುಕೊಂಡಿತು. ಸ್ತ್ರೀಯರು ಮನೆಯೊಳಗೆ ಸ್ವತಃ ತಾವೇ ತಯಾರಿಸುತ್ತಿದ್ದ ವಸ್ತುಗಳನ್ನು ಕಾರ್ಖಾನೆಗಳೇ ಉತ್ಪಾದಿಸಲು ಆರಂಭಿಸಿದವು. ಉದಾಹರಣೆಗೆ ಸ್ತ್ರೀಯರು ಬಟ್ಟೆ ನೇಯ್ಯುವುದು, ನೂಲು ತೆಗೆಯುವುದು, ಆಹಾರ ಸಂಸ್ಕರಣೆ, ಬೀಜ, ಗೊಬ್ಬರ ಸಂಸ್ಕರಣೆ ಇತ್ಯಾದಿ ವಸ್ತುಗಳ ತಯಾರಿಕೆಯಲ್ಲಿ ನಿಪುಣತೆ ಹೊಂದಿದ್ದರು. ಕಾರ್ಖಾನೆಗಳಲ್ಲಿ ಉದ್ಯೋಗ ಪಡೆಯಲಾಗಲಿಲ್ಲ. ಮನೆಯ ಕೆಲಸಕ್ಕೆ ಮಾತ್ರ ಅವರನ್ನು ಸೀಮಿತಗೊಳಿಸಲಾಯಿತು.ಪುರುಷರು ಕಾರ್ಖಾನೆಗಳಲ್ಲಿ ಕೆಲಸ ಪಡೆದು ಆದಾಯ ತರುತ್ತಿದ್ದರಿಂದ ಕುಟುಂಬ ಯಜಮಾನಿಕೆಯನ್ನು ಪಡೆದರು. ಇದರಿಂದಾಗಿ ಸ್ತ್ರೀಯರು ಪುರುಷರನ್ನು ಆರ್ಥಿಕವಾಗಿ ಅವಲಂಬಿಸಬೇಕಾಯಿತು.ಯೂರೋಪಿನ ಕೈಗಾರಿಕಾ ಕ್ರಾಂತಿಯನ್ನು ಪರಿಣಾಮವನ್ನು ಸ್ತ್ರೀ ವಾದಿ ದೃಷ್ಟಿಕೋನದಿಂದ ವಿಶ್ಲೇಷಿಸಿದಾಗ ಸಂಪೂರ್ಣವಾಗಿ ಭಿನ್ನ ಚಿತ್ರಣ ಕಂಡು ಬಂದಿತು. ಸಾಮಾಜಿಕ ಉತ್ಪನ್ನದಿಂದ ಮಹಿಳೆಯರು ದೂರವಾದರು. ಅದೇ ಅವರ ಶೋಷಣೆಗೆ ತುಳಿತಕ್ಕೆ ಹಾಗೂ ಜಂಡರ್ ತಾರತಮ್ಯಕ್ಕೆ ಕಾರಣವಾಯಿತು ಎಂದು ಮಾರ್ಕ್ಸ್‌ವಾದಿ ಸ್ತ್ರೀವಾದಿಗಳು ಹೇಳುತ್ತಾರೆ. ನಮ್ಮ ಸಮಾಜದಲ್ಲಿ ಆಚರಣೆಯಲ್ಲಿರುವ ಮೌಲ್ಯಗಳು ಸ್ತ್ರೀಪುರುಷರ ದುಡಿಮೆಯ ನಡುವೆ ಭೇದ ತಾರತಮ್ಯ ಹಾಗೂ ನಿರ್ಬಂಧಗಳನ್ನು ಹೇರುತ್ತವೆ.

'ಉದ್ಯೋಗಂ ಪುರುಷ ಲಕ್ಷಣಂ' ಎಂದು ಹೇಳಿ ಪುರುಷರು ಹೊರ ಹೋಗಿ ದುಡಿದು ಆಧಾಯಗಳಿಸಿ ಕುಟುಂಬವನ್ನು ನಿರ್ವಹಿಸಬೇಕು ಎಂದು ಹೇಳುತ್ತವೆ. ಸ್ತ್ರೀಯರ ಮನೆಯೊಳಗೆ ಇದ್ದು ಮನೆಗೆಲಸಗಳನ್ನು ಮಾಡಬೇಕೆಂದು ಹೇಳುತ್ತಾವೆ. ಕುಟುಂಬದಲ್ಲಿ ಪುರುಷನಿಲ್ಲದಿದ್ದರೆ, ಇದ್ದರೂ

ಮನೆಯ ನಿರ್ವಹಣೆ ಮಾಡದಿದ್ದರೆ. ಸ್ತ್ರೀಯರು ಮನೆಯ ಒಳಗೆ ಮತ್ತು ಹೊರಗು ದುಡಿದು ಕುಟುಂಬ ನಿರ್ವಹಣೆ ಮಾಡುತ್ತಿದ್ದರು ಅವರನ್ನು ಕುಟುಂಬದ ಯಜಮಾನಿ ಎಂದು ಸಮಾಜ ಗುರುತಿಸುವುದಿಲ್ಲ. ದುಡಿಮೆಗಾರಳನ್ನಾಗಿ ಪರಿಗಣಿಸುವುದಿಲ್ಲ.

೧೯ನೇಶತಮಾನದ ಮದ್ಯಭಾಗದಿಂದ ಇಪ್ಪತ್ತನೇಯ ಶತಮಾನದ ಪ್ರಾರಂಭದ ಸಮಯದಲ್ಲಿ ಕೈಗಾರೀಕರಣ ಮತ್ತು ನಗರೀಕರಣದಿಂದ ಗ್ರಾಮಗಳಿಂದ ಕುಟುಂಬ ಸಮೇತ ವಲಸಿಬಂದ ಮಹಿಳೆಯರು ಗಣಿ, ಹತ್ತಿ, ಗಿರಣಿ ಮತ್ತು ಇತರ ಕಾರ್ಖಾನೆಗಳಲ್ಲಿ ದುಡಿಯಲು ಪ್ರಾರಂಬಿಸಿದರು. ಮದ್ಯಮ ವರ್ಗದ ಮಹಿಳೆಯರಿಗಾದರೋ ಉದ್ಯೋಗ ಐಚ್ಛಿಕವಾಗಿರಬಹುದು. ಆದರೆ ಕೆಳವರ್ಗದ ಮಹಿಳೆಯರಿಗೆ ಉದ್ಯೋಗ ಅನಿವಾರ್ಯವಾಗಿಬಿಟ್ಟಿದೆ. ಹಳ್ಳಿಗಳಲ್ಲಿ ದುಡಿಮೆ ಮಾಡುವ ಕೃಷಿಕಾರ್ಮಿಕ ಮಹಿಳೆಯರಿಂದ ಹಿಡಿದು ಪಟ್ಟಣದಲ್ಲಿ ಮನೆಗೆಲಸ, ಚಿಕ್ಕ ಪುಟ್ಟ ಕಾರ್ಖಾನೆಗಳಲ್ಲಿ ದುಡಿಯುವುದು ಕಟ್ಟಡ ನಿರ್ಮಾಣದ ಕೆಲಸ, ಬೀಡಿ ಕಟ್ಟುವುದು ಇತ್ಯಾದಿ ಕಡಿಮೆ ವರದಾನ ಬರುವ ಕೆಲಸಗಳಲ್ಲಿ ತೊಡಗಿರುವ ಮಹಿಳೆಯರಿಗೆ ಉದ್ಯೋಗ ಅನಿವಾರ್ಯ. ಆದರೆ ಅವರಿಗೆ ಕೆಲಸದ ರಕ್ಷಣೆ ಸೇರುವುದಿಲ್ಲ.

ಮಧ್ಯಮ ವರ್ಗದ ದುಡಿಯುವ ಮಹಿಳೆಯರಿಗಿರುವಂತ ಸೌಲಭ್ಯಗಳೂ ಇರುವುದಿಲ್ಲ. ಇಂತಹ ಹೆಂಗಸರೂ ಮನೆಯ ಹೊರಗು ಮತ್ತು ಒಳಗು ದುಡಿಯಲೇ ಬೇಕಾಗಿರುವುದರಿಂದ ಒಂದು ರೀತಿಯ ಚಲನಶೀಲತೆಯನ್ನು ಹೊಂದಿರುತ್ತಾರೆ. ಅಷ್ಟೇ ಅಲ್ಲ ಮಧ್ಯಮ ವರ್ಗದ ಮಹಿಳೆಯರಿಗಿಂತ ಹೆಚ್ಚಿನ ಸ್ವಾತಂತ್ರ್ಯ ವಹಿಸುತ್ತಾರೆ ಮತ್ತು ತಮ್ಮ ಕುಟುಂಬದಲ್ಲಿ ಹೆಚ್ಚಿನ ಅಧಿಕಾರ ಚಲಾಯಿಸುತ್ತಾರೆ. ಬಹಳಷ್ಟು ಬಡ ಕುಟುಂಬದಲ್ಲಿ ಇಡೀ ಮನೆಯ ಜವಬ್ದಾರಿಯು ದುಡಿಯುವ ಮಹಿಳೆಯ ಹೆಗಲ ಮೇಲೆ ಬಿದ್ದಿರುತ್ತದೆ. ಕೆಲಸಕ್ಕೆ ಬಾರದ, ಇಲ್ಲವೇ ಕುಡುಕ ಗಂಡನ, ಹೊಡೆತ ತಿನ್ನುತ್ತಿದ್ದರೂ ಈ ಹೆಣ್ಣುಗಳು ತಮ್ಮ ಮನೆಯ ಆಗುಹೋಗುಗಳನ್ನು ತಾವೇ ನಿರ್ವಹಿಸಬಲ್ಲ ಭೀತಿ ಹೊಂದಿರುತ್ತಾರೆ. ಇವರಿಗೆ ವಿವಾಹ ವಿಚ್ಛೇದನವನ್ನು ಕೋರ್ಟನಲ್ಲಿ ತೆಗೆದುಕೊಳ್ಳಬೇಕೆಂಬ ಅರಿವು ಸಹ ಅವರಿಗೆ ಇರುವುದಿಲ್ಲ. ಇದ್ದರೂ ಅದರ ಅಗತ್ಯವೂ ಇಲ್ಲ, ಸೋಡ ಚೀಟಿಕೊಡುವುದಷ್ಟೇ ಗೊತ್ತು. ನಿರ್ವಹಣಾ ಭತ್ಯೆಯನ್ನು ಪಡೆಯಬಹುದೆಂದಾಗಲೀ, ಪಡೆಯುವುದಕ್ಕಾಗಲಿ ಪ್ರಯತ್ನವನ್ನು ಮಾಡಬಹುದೆಂದಾಗಲೀ ಅವರಿಗೆ ತಿಳಿಯದು. ಮುಖ್ಯವಾಗಿ ಹೇಳಬೇಕಾದು ಈ ಕೆಳವರ್ಗದ ಮಹಿಳೆಯರು ದುಡಿಯುವ ಕ್ಷೇತ್ರವಲ್ಲಿನ ಅನ್ಯಾಯವನ್ನು ಮತ್ತು ಮನೆಯಲ್ಲಿ ಗಂಡನಿಂದ ಪಡೆಯುವ ಅನ್ಯಾಯವನ್ನು ಅನುಭವಿಸುತ್ತಿದ್ದರೂ ತಮ್ಮ ಸಂಸಾರದ ಆಗುಹೋಗುಗಳನ್ನು ತಾವೇ ಸ್ವತಂತ್ರವಾಗಿ ನಿಭಾಯಿಸುತಿದ್ದಾರೆ.

ಮಹಿಳೆಯರು ಎರಡು ರೀತಿಯ ಉತ್ಪಾದಕರಾಗಿರುತ್ತಾರೆ. ಒಂದು ತಾವು ಬಳಸುವ ಆರ್ಥಿಕ ವಸ್ತುಗಳ ಬಳಕೆದಾರರಾಗಿರುವುದಷ್ಟೇ ಅಲ್ಲದೆ ಭವಿಷ್ಯದ ಶ್ರಮಶಕ್ತಿಯ ಉತ್ಪಾದಕರೂ ಆಗಿರುತ್ತಾರೆ. 'ಮಾತೃತ್ವವು' ಪವಿತ್ರವಾದದ್ದು ಮತ್ತು ಸ್ತ್ರೀಯ ಸಾರ್ಥಕತೆಯಿರುವುದು ಮಾತೃತ್ವವಲ್ಲೇ ಎನ್ನುವುದು ನಮ್ಮ

ಸಂಸ್ಕೃತಿಯ ಪರಮ ಮೌಲ್ಯವಾದರೂ ವಾಸ್ತವದಲ್ಲಿ ದುಡಿಯುವ ಮಾತೆಯರ ಬಗ್ಗೆ ಮತ್ತು ಅವರ ಅಗತ್ಯಗಳ ಬಗ್ಗೆ ಅಂತಹ ಗೌರವವಿಲ್ಲ. ಸರಿಯಾದ ಕ್ರಿಷ್ ವ್ಯವಸ್ಥೆ ಇಲ್ಲದಿದ್ದರೆ ದುಡಿಯುವ ಮಹಿಳೆಯರು ನೆಮ್ಮದಿಯಿಂದ ಕೆಲಸ ಮಾಡುವುದು ಕಷ್ಟವಾಗುತ್ತದೆ. ಹೆರಿಗೆ ರಜೆ, ಹೆರಿಗೆ ಭತ್ಯೆಯನ್ನು ಸಂಘಟಿತ ಮಹಿಳೆಯರು ಪಡೆಯುತ್ತಾರೆ. ಅಸಂಘಟಿತ ಕ್ಷೇತ್ರಗಳಲ್ಲಿ ಈ ಸೌಲಭ್ಯಗಳನ್ನು ದುಡಿಯುವ ಹೆಂಗಸರು ಪಡೆಯುವುದೇ ಇಲ್ಲ. ಔಷಧಿ ತಯಾರಿಕೆಯ ಕಂಪನಿಗಳಲ್ಲಿ ದುಡಿಯುವ ಮಹಿಳೆಯರು ತಮ್ಮ ವಿವಾಹದ ಆಹ್ವಾನ ಪತ್ರದೊಂದಿಗೆ ರಾಜೀನಾಮೆ ಪತ್ರವನ್ನು ಕೊಡಬೇಕಾಗುತ್ತದೆ. ಗಗನ ಸಖಿಯರು ಹಾಗೂ ಸಿವಿಲ್ ಸರ್ವೀಸ್ ಹುದ್ದೆಯಲ್ಲಿರುವವರಿಗೆ ಮದುವೆ ತಾಯ್ತನಗಳು ದುಬಾರಿ ಅಥವಾ ಕೆಲವೊಮ್ಮೆ ಆತಂಕಕಾರಿ ಸಂಗತಿಗಳಾಗುತ್ತವೆ. ಕೆಲವು ಖಾಸಗಿ ಕಂಪೆನಿಗಳಲ್ಲಂತೂ ಹೆರಿಗೆ ಸೌಕರ್ಯಗಳನ್ನು ನೀಡಬೇಕೆಂ ಕಾರಣಕ್ಕಾಗಿಯೇ ಮಹಿಳೆಯರನ್ನು ಕೆಲಸದಿಂದ ತೆಗೆದುಹಾಕುವ ಪದ್ಧತಿ ಇದೆ. ೧೯೬೭ರಲ್ಲಿ ಕಲ್ಲಿದ್ದಲು ಮತ್ತು ಗಣಿಗಳಲ್ಲಿ ದುಡಿಯುವ ಮಹಿಳೆಯರ ಸ್ಥಿತಿಗತಿಗಳ ಬಗೆಗೆ ನಡೆಸಿದ ಸಮೀಕ್ಷೆಯ ವರದಿಯು 'ದುಡಿಯುವ ಮಹಿಳೆಯರ ಸಂಖ್ಯೆಯನ್ನು ಕಡಿಮೆ ಮಾಡುವ ಮಾಲೀಕರ ಧೋರಣೆಗೆ ಮುಖ್ಯ ಕಾರಣ ಮಹಿಳೆ. ಮಹಿಳೆಯರಿಗೆ ಹೆರಿಗೆ ಸೌಕರ್ಯಗಳನ್ನು ಮತ್ತು ಕ್ರಿಷ್ ವ್ಯವಸ್ಥೆಯನ್ನು ನೀಡಬೇಕೆಂಬುದೇ ಆಗಿದೆ" ಎಂದಿದೆ.

ಸಂಘಟಿತ ಕಾರ್ಯಕ್ಷೇತ್ರದಲ್ಲೂ ಮಾತೃತ್ವಕ್ಕೆ ಸಂಬಂಧಪಟ್ಟಂತೆ ಹೆಣ್ಣನ್ನು ಅಪಮಾನಗೊಳಿಸುವ ನಿದರ್ಶನಗಳು ನಮಗೆ ಸಿಕ್ಕುತ್ತವೆ. ವಿಜಯವಾಡದ ಬಳಿಯಿರುವ ವಿಜಯಮಿಲ್ ಲಿಮಿಟೆಡ್ – ಹತ್ತಿ ಗಿರಣಿ ಕಾರ್ಖಾನೆಯಲ್ಲಿ ದುಡಿಯುವ ಹೆಂಗೆಳೆಯರು ಮದುವೆಯಾದಲ್ಲಿ, ಕೆಲಸ ಕಳೆದುಕೊಳ್ಳಬೇಕೆಂಬ ಭೀತಿಯಿಂದ ತತ್ತರಿಸುತ್ತಿದ್ದಾರೆ. ಮದುವೆಯಾಗಿದ್ದ ಪಕ್ಷದಲ್ಲಿ ಸಂತಾನ ನಿಯಂತ್ರಣ ಅಥವಾ ವಿವಾಹ ವಿಚ್ಛೇದನದ ಪ್ರಮಾಣ ಪತ್ರಗಳನ್ನು ಕೆಲಸಕ್ಕೆ ಸೇರುವ ವೇಳೆಯಲ್ಲಿ ಮಾಲೀಕರಿಗೆ ತೋರಿಸಬೇಕು. ೮೦೦ ಮಂದಿ ಕೆಲಸ ಮಾಡುವ ಈ ಕಾರ್ಖಾನೆಯಲ್ಲಿ ೩೦೦ ಮಂದಿ ಮಹಿಳಾ ಕಾರ್ಮಿಕರ ಹೆರಿಗೆ ರಜೆ ಮತ್ತು ಹೆರಿಗೆ ಭತ್ಯೆಯನ್ನು ಖೋತಾ ಮಾಡಬೇಕೆಂಬುದೇ ಇಲ್ಲಿಯ ಮುಖ್ಯ ಉದ್ದೇಶ. ಸಂಸ್ಥೆಯು ವರ್ಷಕ್ಕೆ ಸುಮಾರು ೫ ರಿಂದ ೬ ಲಕ್ಷಗಳಷ್ಟು ಹಣವನ್ನು ಈ ಬಾಬತ್ತಿನಲ್ಲಿ ಉಳಿಸುತ್ತಿದೆ. ಈ ಕುಟಿಲ ನೀತಿಯನ್ನು ದೇಶದ ಹಲವಾರು ಚಿಕ್ಕಪುಟ್ಟ ಘಟಕಗಳಲ್ಲಿ ಯಶಸ್ವಿಯಾಗಿ ಬಳಕೆಗೆ ತರಲಾಗಿದೆ. ಆದರೆ ಸಂಘಟಿತ ಕಾರ್ಮಿಕ ಮಹಿಳೆಯರನ್ನೂ ಇಲ್ಲಿ ಈ ರೀತಿ ನಡೆಸಿಕೊಳ್ಳುತ್ತಿರುವುದು ಆಶ್ಚರ್ಯದ ವಿಷಯ. ವಿಜಯ ಹತ್ತಿ ಗಿರಣಿ ನೌಕರರ ಸಂಘದ ನೇತೃತ್ವದಲ್ಲಿ ಮಹಿಳೆಯರಿಗಾದ ಈ ಅನ್ಯಾಯದ ವಿರುದ್ಧ ಹೋರಾಟ ನಡೆದಿದೆ.

ಕೊಯಮತ್ತೂರಿನ ಅವಿನಾಶಿಲಿಂಗಂ ಹೋಂ ಸೈನ್ಸ್ ಕಾಲೇಜಿನಲ್ಲಿ ಅಲ್ಲಿನ ಮಹಿಳಾ ಕಾಲೇಜಿನ ಪ್ರಾಂಶುಪಾಲರು ೧೯೮೬ರಲ್ಲಿ ಹೊರಡಿಸಿದ್ದ ಒಂದು ಸುತ್ತೋಲೆ ವಿಚಿತ್ರವಾಗಿದೆ. ಅವರ ಕಾಲೇಜಿನ

ಅಧ್ಯಾಪಕಿಯರು ಬೇಸಿಗೆ ರಜೆಯ ಅವಧಿಯಲ್ಲಿ ಹೆರಿಗೆಯಾಗುವಂತೆ ಗರ್ಭ ಧರಿಸುವ ಯೋಜನೆ ಹಾಕಿಕೊಳ್ಳಬೇಕೆಂದು ಆಜ್ಞೆ ಹೊಡರಿಸಿದ್ದರು. ಯಾರೂ ಕಂಡಿರಲಾರದ ಸಂತಾನ ನಿಯಂತ್ರಣ ಇದು ಇದಕ್ಕೆ ಸಮ್ಮತಿಸದ ಕೆಲವು ಮಹಿಳಾ ಅಧ್ಯಾಪಕಿಯರನ್ನು ಬಲತ್ಕಾರವಾಗಿ ಗರ್ಭಪಾತಕ್ಕೆ ಒಳಗಾಗಿಸಿರುವುದುಂಟು.

ಸಂಘಟಿತ ಕಾರ್ಮಿಕ ಕ್ಷೇತ್ರದಲ್ಲಿರುವ ಮಹಿಳೆಯರ ಸ್ಥಿತಿಗತಿಯೇ ಹೀಗಿರಬೇಕಾದರೆ ಅಸಂಘಟಿತ ಕ್ಷೇತ್ರದ ಮಹಿಳೆಯರ ಪಾಡನ್ನು ಕೇಳುವವರು ಯಾರು ಎಂಬ ಪ್ರಶ್ನೆ ಉದ್ಭವಿಸುತ್ತದೆ. ಸರ್ಕಾರ ದುಡಿಯುವ ಮಹಿಳೆಯರಿಗೆಂದೇ ಕಾನೂನು ಕೂಡ ತಾಂತ್ರಿಕ ತೊಂದರೆಗಳಿಂದಾಗಿ ಅವರಿಗೆ ಪ್ರಯೋಜನವಾಗುತ್ತಿಲ್ಲ. ಅವುಗಳಲ್ಲಿ ಮೂರನ್ನು ಇಲ್ಲಿ ಪ್ರಮುಖವಾಗಿ ಹೆಸರಿಸಬಹುದು.

**೧) ೧೯೬೧ರ ಹೆರಿಗೆ ಸೌಕರ್ಯ ಕಾಯಿದೆ.**
**೨) ೧೯೫೧ರ ಪ್ಲಾಂಟೇಷನ್ ಕಾರ್ಮಿಕ ಹೆರಿಗೆ ಸೌಕರ್ಯ ಕಾಯಿದೆ**
**೩) ೧೯೪೧ರ ಕಲ್ಲಿದ್ದಲು ಗಣಿ ಕಾರ್ಮಿಕ ಹೆರಿಗೆ ಸೌಕರ್ಯ ಕಾಯಿದೆ.**

ಭಾರತದಲ್ಲಿ ಮೊತ್ತಮೊದಲನೆಯ ಹೆರಿಗೆ ಸೌಕರ್ಯಕ್ಕೆ ಸಂಬಂಧಪಟ್ಟ ಕಾಯಿದೆಯು ೧೯೨೯ರಲ್ಲಿ ಮುಂಬಯಿ ಸರ್ಕಾರದಿಂದ ಜಾರಿಯಾಯಿತು. ಇದಾದ ನಂತರ ರಾಯಲ್ ಕಮಿಷನ್‌ನ ಸೂಚನೆಯ ಮೇರೆಗೆ ೧೯೩೧ರಲ್ಲಿ ಉಳಿದ ರಾಜ್ಯಗಳಲ್ಲೂ ಇದನ್ನು ಜಾರಿಗೊಳಿಸುವ ನಿರ್ಧಾರ ತೆಗೆದುಕೊಳ್ಳಲಾಯಿತು. ಹೀಗಾಗಿ ಮದ್ರಾಸ್ (೧೯೩೯), ಪಂಜಾಬ್ (೧೯೪೩) ಮತ್ತು ಅಸ್ಸಾಂ (೧೯೪೪) ಗಳಲ್ಲಿ ಹೆರಿಗೆ ಸೌಕರ್ಯಕ್ಕೆ ಸಂಬಂಧಪಟ್ಟಂತೆ ಕಾಯಿದೆಗಳು ಜಾರಿಗೊಳ್ಳಲು ಮತ್ತು ನಂತರ ಅವುಗಳಲ್ಲಿ ತಿದ್ದುಪಡಿಗಳಾಗಲು ಒಂದು ಧೀರ್ಘ ಹೋರಾಟವೇ ನಡೆದಿದೆ. ಕಾರ್ಮಿಕ ಸಂಘಟನೆಗಳು ನಡೆಸಿದ ಅವಿರತವಾದ ಹೋರಾಟದಿಂದ ಮಹಿಳೆಯರಿಗೆ ಅನುಕೂಲವಾಗುವಂತಹ ವಿವಿಧ ಕಾನೂನುಗಳು ವಿವಿಧ ರಾಜ್ಯಗಳಲ್ಲಿ ಜಾರಿಗೆ ಬಂದವು. ೧೯೬೧ರಲ್ಲಿ ಹೆರಿಗೆ ಸೌಕರ್ಯದ ಕಾಯಿದೆಯು ಕೇಂದ್ರ ಸರ್ಕಾರದಿಂದ ಜಾರಿಗೊಂಡ ಕಾಯಿದೆಯಾಗಿದ್ದು ಅದು ಎಲ್ಲಾ ರಾಜ್ಯಗಳಿಗೂ ಸಮಾನವಾಗಿ ಅನ್ವಯಿಸುತ್ತದೆ. ಈ ೧೯೬೧ರ ಕಾಯಿದೆಯಲ್ಲಿರುವ ಲೋಪದೋಷಗಳನ್ನು ತೆಗೆದು ೧೯೭೩ರಲ್ಲಿ ಇದಕ್ಕೆ ಮತ್ತೊಂದು ತಿದ್ದುಪಡಿಯನ್ನು ಸೇರಿಸಲಾಯಿತು.

ಸರ್ಕಾರಿ ಉದ್ಯಮಗಳಲ್ಲಿ ಹೆಣ್ಣು ಗಂಡಿನ ನಡುವೆ ಸಮಾನ ವಿದ್ಯಾರ್ಹತೆಗಳಿರುವುದರಿಂದ ಮತ್ತು ಕಾರ್ಮಿಕ ಕಾಯಿದೆಯನ್ನು ಬಿಗಿಯಾಗಿ ಪಾಲಿಸಬೇಕಾಗಿರುವುದರಿಂದ ಸಮಾನ ದುಡಿಮೆಗೆ ಸಮಾನ ವೇತನ ದೊರೆಯುತ್ತದೆ. ಆದರೆ ಇಂತಹ ದುಡಿಮೆಯಲ್ಲಿ ತೊಡಗಿರುವವರ ಸಂಖ್ಯೆ ಹೆಚ್ಚಿಲ್ಲ. ಸಮಾಜದಲ್ಲಿ ಎರಡನೇಯ ಪ್ರಜೆ ಎನಿಸಿಕೊಂಡ ಹೆಣ್ಣಿನ ಶ್ರಮ ಅತ್ಯಂತ ಅಗ್ಗವಾದ್ದರಿಂದ ಮಾಲೀಕರಿಗೆ ಇದರ ಮೇಲೆ ಕಣ್ಣು. ಲೈಂಗಿಕ ಅಸಮಾನತೆಯನ್ನು ವೇತನ ತಾರತಮ್ಯದಲ್ಲಿ ಅನುಭವಿಸುವ ದುಡಿಯುವ ಮಹಿಳೆಯರೇ ಹೆಚ್ಚು ಬೀಡಿ, ಹೊಗೆಸೊಪ್ಪು, ಅಗರಬತ್ತಿ, ಅಕ್ಕಿಯ ಗಿರಣಿ, ಗೋಡಂಬಿ, ಸೆಣಬಿನ

ನಾರು,... ಮುಂತಾದ ಕಾರ್ಖಾನೆಗಳ ಕೈಗಾರಿಕೆಗಳಲ್ಲಿ ದುಡಿಯುವ ಸ್ತ್ರೀಯರಿಗೆ ಮತ್ತು ಕೃಷಿ ಕಾರ್ಮಿಕ ಮಹಿಳೆಯರಿಗೆ ಹಾಗೂ ಮನೆ ಕಟ್ಟುವ ಕೆಲಸದಲ್ಲಿರುವ ಹೆಂಗಸರಿಗೆ ಸಮಾನ ದುಡಿಮೆಗೆ ಸಮಾನ ವೇತನ ಸಿಗುವುದಿಲ್ಲ. ಅಂತರಾಷ್ಟ್ರೀಯ ಮಹಿಳಾ ವರ್ಷದಲ್ಲಿ ಐ.ಎಲ್.ಓ ಮಧ್ಯಪ್ರವೇಶದಿಂದ ಭಾರತ ಸರ್ಕಾರವು ೧೯೭೫ರ ಸೆಪ್ಟಂಬರ್ ೨೬ರಂದು 'ಸಮಾನ ದುಡಿಮೆಗೆ ಸಮಾನ ವೇತನ' ವೆಂಬ ಆರ್ಡಿನೆನ್ಸನ್ನು ತಂದಿತು. ಅದರ ಪ್ರಕಾರ ಸಮಾನ ಕೆಲಸ ಮತ್ತು ಸಮಾನ ಸ್ವರೂಪದ ಕೆಲಸ ಮಾಡುವ ಹೆಣ್ಣು ಗಂಡುಗಳಿಬ್ಬರಿಗೂ ಸಮಾನವೇತನವೆಂಬ ಆರ್ಡಿನೆನ್ಸ್‌ನಿಂದ ಪ್ರಯೋಜವಾಗಬೇಕಿದ್ದರೆ ಅದನ್ನು ಸೂಕ್ತ ರೀತಿಯಲ್ಲಿ ಜಾರಿಗೊಳಿಸಬೇಕು. ಚಾಣಾಕ್ಷ ಮಾಲೀಕರು ಇದು ಜಾರಿಯಾಗದಂತೆ ನೋಡಿಕೊಳ್ಳುಲು ಈ ಆರ್ಡಿನೆನ್ಸ್‌ನಲ್ಲಿರುವ ಕುಂದುಕೊರತೆಗಳನ್ನೆಲ್ಲಾ ಜಾಣ್ಮೆಯಿಂದ ಬಳಸಿಕೊಳ್ಳುತ್ತಾರೆ. ಪರಿಣಾಮವಾಗಿ ಮಹಿಳೆಯರು ಕೆಲಸ ಕಳೆದುಕೊಳ್ಳಬೇಕಾಗುತ್ತದೆ. ಮಹಿಳೆಯರನ್ನು ಕೆಲಸದಿಂದ ತೆಗೆದು ಹಾಕುವುದನ್ನು ಈ ಕಾಯಿದೆ ನಿಷೇಧಿಸುವುದಿಲ್ಲವಾದ್ದರಿಂದ ಮಹಿಳೆಯರ ಉದ್ಯೋಗದ ಭದ್ರತೆಯನ್ನು ಕಾಪಾಡಲು ಅಸಮರ್ಪಕವಾಗಿದೆ. ಉದ್ಯೋಗ ಕಳೆದುಕೊಳ್ಳಬಹುದೆಂಬ ಭಯದಿಂದ ಮಹಿಳೆಯರೂ ಕೂಡ ಈ ಬೇಡಿಕೆಗಳನ್ನು ಒತ್ತಾಯಿಸುವುದಕ್ಕೆ ಮುಂದೆ ಬರುವುದಿಲ್ಲ. ಸಮಾನ ದುಡಿಮೆಗೆ ಸಮಾನವೇತನ ಕೊಡಬೇಕೆಂದು ಒತ್ತಾಯಿಸಿದುದ್ದರಿಂದಲೇ ಕಲ್ಲಿದ್ದಲು ಗಣಿಗಳಲ್ಲಿ ಮಹಿಳೆಯರನ್ನು ಕೆಲಸದಿಂದ ತೆಗೆಯಲಾಯಿತು ಎಂದು ***"ಕಲ್ಲಿದ್ದಲು ಗಣಿ ಕಾರ್ಖಾನೆಯ ದುಡಿಯುವ ಸ್ಥಿತಿಗತಿಗಳ ಬಗ್ಗೆ ಬಂದ 1976ರ ವರದಿ ಅಭಿಪ್ರಾಯಪಟ್ಟಿದೆ".***

**ಮಹಿಳೆಯರು ಮಾಡುವ ಕೆಲಸಗಳನ್ನು ನಾಲ್ಕು ಪ್ರಕಾರಗಳಾಗಿ ವಿಂಗಡಿಸಬಹುದು.**

1) ವೇತನ ದುಡಿಮೆ ಮತ್ತು ವೇತನ ರಹಿತ ದುಡಿಮೆ (Paid work and Non-Paid Work)
2) ಸ್ವ-ಉದ್ಯೋಗ ಮತ್ತು ಕೂಲಿ ಉದ್ಯೋಗ (Self Employment and Wage Employed)
3) ಗೃಹಕೆಲಸ ಮತ್ತು ಗೃಹಕೆಲಸಕ್ಕೆ ಸಂಬಂಧಿಸಿಲ್ಲದ ದುಡಿಮೆ (Household and Non-Household work)
4) ಉತ್ಪಾದಕ ದುಡಿಮೆ ಮತ್ತು ಅನುತ್ಪಾದಕ ದುಡಿಮೆ (Productive work and Non-Productive work)

**ಇದರ ಲಕ್ಷಣಗಳು ಹೀಗಿವೆ** :-

1) ಸ್ತ್ರೀ ದುಡಿಮೆ ಅಗೋಚರವಾಗಿರುತ್ತದೆ. ಸಂಭಾವನೆಯಿಲ್ಲದ ವೇತನರಹಿತ ದುಡಿಮೆಯಾಗಿರುವುದರಿಂದ ಅಗೋಚರವಾಗಿದೆ.

2) ಸ್ತ್ರೀಯರ ದುಡಿಮೆಯು ಜೀವನದ ಉಳಿವಿಗಾಗಿ, ಕುಟುಂಬದ ಉಳಿವಿಗಾಗಿ ಮಾಡುವ ಕೆಲಸವಾಗಿರುತ್ತದೆ. ಇಲ್ಲಿ ಉತ್ಪಾದನೆಯನ್ನು ಹೆಚ್ಚಿಸುವ ಮತ್ತು ಲಾಭ ಗಳಿಸುವ ಉದ್ದೇಶವಿರುವುದಿಲ್ಲ.

3) ಗೃಹ ಕೃತ್ಯಗಳಿಗೆ ಸಂಬಂಧಿಸಿರುತ್ತದೆ. ಮನೆ ಒಳಗಿನ ಕೆಲಸಗಳು ಮೌಲ್ಯಮಾಪನಕ್ಕೆ ಒಳಪಡುವುದಿಲ್ಲ. ಅವು ಕರ್ತವ್ಯಗಳೆಂದು ಸೇವೆಗಳೆಂದು ಪರಿಗಣಿಸಲ್ಪಡುತ್ತದೆ.

4) ಮಹಿಳೆಯರು ಧೀರ್ಘವಾದ, ಕೊನೆಯಿಲ್ಲದ ದೈಹಿಕ ಶ್ರಮದ ಕೆಲಸಗಳನ್ನು ಮಾಡುತ್ತಾರೆ. ಕೌಶಲ್ಯಭರಿತ ಕೆಲಸಗಳನ್ನು ಮಾಡುತ್ತಿದ್ದರು. ಅವರ ಕೆಲಸಗಳನ್ನು ಕೌಶಲ್ಯದಿಂದ ಕೂಡಿದ ಕೆಲಸಗಳೆಂದು ಹೇಳುವುದಿಲ್ಲ. ಉದಾಹರಣೆಗೆ ಸಸಿ ನೆಡುವುದು, ಬೀಜ ಮತ್ತು ಆಹಾರ ಸಂಸ್ಕರಿಸುವುದು, ಗೆಣಿಗೆ ಹಾಕುವುದು, ಮನೆ ಔಷಧಿ ತಯಾರಿಸುವುದು ಇತ್ಯಾದಿ.

5) ಮಹಿಳೆಯರು ಹೊರಗಡೆ ದುಡಿಯಬೇಕೋ, ಬೇಡವೋ ಎನ್ನುವುದು ಅವರ ಕುಟಂಬವು ಸಮಾಜದಲ್ಲಿ ಹೊಂದಿರುವ ಸಾಮಾಜಿಕ ಆರ್ಥಿಕ ಸ್ಥಾನವನ್ನು ಅವಲಂಬಿಸಿರುತ್ತದೆ. ಸಾಮಾಜಿಕವಾಗಿ, ಆರ್ಥಿಕವಾಗಿ ಉತ್ತಮ ಸ್ಥಾನದಲ್ಲಿರುವ ಮೇಲುವರ್ಗದ ಕುಟುಂಬಗಳಲ್ಲಿ ಮಹಿಳೆಯರು ಹೊರಗೆ ದುಡಿಯುವುದು ಪ್ರತಿಷ್ಠೆಯ ವಿಷಯವಾಗಿರುತ್ತದೆ. ಕೆಲವು ಕುಟುಂಬಗಳಲ್ಲಿ ಶಿಕ್ಷಣ ಪ್ರತಿಭೆ ಹಾಗೂ ಸಾಮರ್ಥ್ಯ ಬಳಕೆಯಾಗಲು ಹಾಗೂ ಅಥವಾ ಸಮಯ ಕಳೆಯುವ ಸಲುವಾಗಿ ಮಹಿಳೆಯರು ಹೊರಗೆ ದುಡಿಯುವುದು ಕಂಡುಬರುತ್ತದೆ. ಮಧ್ಯಮ ವರ್ಗದ ಕುಟುಂಬಗಳಲ್ಲಿ ಕುಟುಂಬದ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವ ಸಲುವಾಗಿ, ಜೀವನ ಮಟ್ಟವನ್ನು ಉತ್ತಮಗೊಳಿಸಿಕೊಳ್ಳಲು, ಕೆಲವೊಮ್ಮೆ ಸಂಕಷ್ಟದ ಪರಿಸ್ಥಿತಿ ಬಂದಾಗ ಮಹಿಳೆಯರು ಕೆಲಸ ಮಾಡುತ್ತಾರೆ. ಕೆಳವರ್ಗದ ಬಡಕುಟುಂಬದ ಉಳಿವಿಗಾಗಿ ದುಡಿಮೆ ಅವರಿಗೆ ಅನಿವಾರ್ಯ. ಭಾರತದಲ್ಲಿ ಶೇಕಡಾ ೩೦-೩೫%ರಷ್ಟು ಬಡ ಕುಟುಂಬಗಳನ್ನು ಸಲಹುತ್ತಿರುವುವವರು ಮಹಿಳೆಯರು ಎಂದು ಅಂಕಿ ಅಂಶಗಳಿಂದ ತಿಳಿದು ಬಂದಿದೆ.

6) ಈ ಬಡ ಮಹಿಳೆಯರು ಹೆಚ್ಚಾಗಿ ಅಸಂಘಟಿತ ಕ್ಷೇತ್ರದಲ್ಲಿ ದುಡಿಯುತ್ತಾರೆ. ಶೇ ೯೦% ರಷ್ಟು ಮಹಿಳೆಯರು ಇಲ್ಲಿ ಕೇಂದ್ರೀಕೃತಗೊಂಡಿದ್ದಾರೆ. ಮನೆಗೆಲಸ, ರಸ್ತೆ ಕಟ್ಟಡ ನಿರ್ಮಾಣ. ಸೇಲ್ಸ್‌ಗರ್ಲ್ಸ್, ಗೃಹಕೈಗಾರಿಕೆ, ಸರ್ಕಾರದ ನಿಯಂತ್ರಣಕ್ಕೆ ಒಳಪಡದ ಸಣ್ಣ ಕೈಗಾರಿಕೆಗಳಲ್ಲಿ ದುಡಿಯುವುದು, ಗುತ್ತಗೆದಾರರ ಕೆಳಗೆ ಮೀನುಗಾರಕೆ ಮುಂತಾದವುಗಳು ಅಸಂಘಟಿತ ಕ್ಷೇತ್ರದಲ್ಲಿ ಬರುತ್ತವೆ. ಇಲ್ಲಿ ಮಹಿಳೆಯರು ಅಧಿಕ ಸಂಖ್ಯೆಯಲ್ಲಿ ಕಂಡು ಬರುತ್ತಾರೆ.

7) ಕೈಗಾರಿಕೀರಣದ ನಂತರ ಸ್ತ್ರೀಯರನ್ನು ಹೊರಗೆ ದುಡಿಯುವುದು ಪ್ರಾರಂಭವಾದರೂ, ತಂತ್ರಜ್ಞಾನ ಮುಂದುವರೆದಂತೆ, ಶಿಕ್ಷಣ ತರಬೇತಿ ಹಾಗೂ ಕೌಶಲ್ಯ ಅಭಿವೃದ್ಧಿಯ ಕೊರತೆಗಳಿಂದ ಉದ್ಯೋಗಾವಕಾಶಗಳನ್ನು ಕಳೆದುಕೊಂಡರು. ಇತ್ತೀಚೆಗೆ ಆಧುನಿಕತೆ, ಶಿಕ್ಷಣ ಮಟ್ಟದ ಸುಧಾರಣೆ, ಸಾಮಾಜಿಕ ಬದಲಾವಣೆ ಹಾಗೂ ಅಭಿವೃದ್ಧಿಯ ಕಾರಣಗಳಿಂದ ಮಹಿಳೆಯರು ವಿವಿಧ ಉದ್ಯೋಗಗಳನ್ನು ಪ್ರವೇಶಿಸಿದ್ದಾರೆ. ಆದರೂ ಅವರ ದುಡಿಮೆ ಸಹಭಾಗಿತ್ವ ದರ ಪುರುಷರಿಗೆ ಹೋಲಿಸಿದರೆ ತುಂಬಾ ಕಡಿಮೆಯಿದೆ. ಭಾರತದಲ್ಲಿ ೧೯೯೧ರ ಜನಗಣತಿಯ ಪ್ರಕಾರ ಪುರುಷರ ದುಡಿಮೆಯ ಪ್ರಮಾಣ ಶೇ.೫೧.೬೧% ಇದ್ದರೆ ಮಹಿಳೆಯರದು ಶೇ.೨೯.೭೬%ರಷ್ಟಿತ್ತು. ಸಾರ್ವಜನಿಕ ವಲಯದಲ್ಲಿ ಮಹಿಳೆಯರ ಪ್ರಮಾಣ ೧೨.೩% ಇದ್ದರೆ ಪುರುಷರದು ಶೇ.೮೭.೭%, ಖಾಸಗಿ ವಲಯದಲ್ಲಿ ಶೇ.೧೮.೭% ಹಾಗೂ ೮೧.೩% ಕ್ರಮವಾಗಿ ಸ್ತ್ರೀಯರ ಮತ್ತು ಪುರುಷರ ದುಡಿಮೆ ಪ್ರಮಾಣ ೧೯೯೧ರಲ್ಲಿ ಇತ್ತು.

8) ಉನ್ನತ ವೃತ್ತಿಪರ ಕೆಲಸಗಳಲ್ಲೂ ಮಹಿಳೆಯರ ಸಂಖ್ಯೆ ಕಡಿಮೆಯಿದೆ. ಮ್ಯಾನೇಜರಿಯಲ್ ಹುದ್ದೆಗಳಲ್ಲಿ ಮಹಿಳೆಯರ ಸಂಖ್ಯೆ ಶೇ. ಮೂರಕ್ಕಿಂತ ಕಡಿಮೆಯಿದೆ.

9) ಸಂಘಟಿತ ವಲಯದಲ್ಲಾಗಲೀ ಅಥವಾ ಅಸಂಘಟಿತ ವಲಯದಲ್ಲಾಗಲಿ ಮಹಿಳೆಯರು ಕಾರ್ಮಿಕರಾಗಿ ಸಂಘಟಿತರಾಗಿಲ್ಲದಿರುವುದು ಸ್ತ್ರೀ ಸ್ವಾಮಿತ್ವ **'ಕಾರ್ಮಿಕರ ಸಂಘ ಮತ್ತು ಮಹಿಳೆ'** ಶೀರ್ಷಿಕೆಯಡಿ ವಿವರವಾಗಿ ತಿಳಿಯಲಾಗುವುದು.

10) ಸ್ತ್ರೀಯರು ಕಡಿಮೆ ಕೌಶಲ್ಯರಹಿತ ಹಾಗೂ ಬಡ್ತಿ ಪಡೆಯಲು ಅವಕಾಶವಿಲ್ಲದಂತಹ ಕೆಲಸಗಳಲ್ಲಿ ಹೆಚ್ಚಾಗಿ ತೊಡಗಿರುತ್ತಾರೆ.

**ಇಂದು ಮಹಿಳಾ ಉದ್ಯೋಗಿಗಳ ಸಂಖ್ಯೆ ಹಲವಾರು ಕಾರಣಗಳಿಂದಾಗಿ ಏರುತ್ತಿದೆ.**

ಅ) ಮಧ್ಯಮ ವರ್ಗದ ಕುಟುಂಬದ ಆರ್ಥಿಕ ಅಗತ್ಯಗಳಿಗಾಗಿ

ಆ) ತನ್ನ ವರಮಾನದಿಂದ ಕುಟುಂಬದಲ್ಲಿ ಒಂದು ಸ್ಥಾನ ಪಡಯಬಹುದೆಂಬ ಅಭಿಲಾಷೆಯಿಂದ

ಇ) ಮದುವೆ ಮಾರುಕಟ್ಟೆಯಲ್ಲಿ ಹೆಚ್ಚಿನ ಮೌಲ್ಯಗಳಿಸಿಕೊಳ್ಳುವುದಕ್ಕಾಗಿ

ಈ) ತಮ್ಮದೇ ಅಭಿಲಾಷೆಗಳಿಗಾಗಿ ಹಾಗೂ ವ್ಯಕ್ತಿತ್ವದ ವಿಸ್ತರಣೆಗಾಗಿ ಈ ಎಲ್ಲಾ ಕಾರಣಗಳಿಗಾಗಿ ಭಾರತೀಯ ಮಹಿಳೆ ಉದ್ಯೋಗಸ್ಥಳಾದರೂ ಅವಳು ಕೆಲವೊಂದು ಅಡ್ಡಿ ಆತಂಕಗಳನ್ನು ಎದುರಿಸಲೇಬೇಕಾಗಿದೆ. ಸಾಂಪ್ರದಾಯಕವಾದ ಮಗಳು, ಪತ್ನಿ, ತಾಯಿ ಪಾತ್ರಕ್ಕೆ ನಿಷ್ಠೆ ತೋರಿ, ಆರ್ಥಿಕ ಸ್ವಾತಂತ್ರ್ಯವನ್ನು ಉಳಿಸಿಕೊಂಡು ತನ್ನ ವ್ಯಕ್ತಿತ್ವ ರೂಪಿಸಿಕೊಳ್ಳಲು ಹೆಣಗಬೇಕಾಗಿದೆ.

ಮಹಿಳಾ ಉದ್ಯೋಗಿಗಳ ಅಂಕಿ ಅಂಶಗಳನ್ನು ಗಮನಿಸಿದಾಗ ಉದ್ಯೋಗಸ್ಥ ಮಹಿಳೆಯರ ಪ್ರಮಾಣ ಇಳಿಮುಖವಾಗುತ್ತಿರುವ ಅಂಶ ಸ್ಪಷ್ಟವಾಗುತ್ತದೆ. ೧೯೬೧-೧೯೮೧ರ ಅವಧಿಯಲ್ಲಿ ಮಹಿಳಾ ಉದ್ಯೋಗಿಗಳ ಸಂಖ್ಯೆಯಲ್ಲಿ ಶೇ ೭ರಷ್ಟು ಇಳಿಮುಖ ಕಂಡುಬಂದಿದೆ. ೧೯೬೧ರಲ್ಲಿ ಒಟ್ಟು ದುಡಿಮೆಯಲ್ಲಿ ಮಹಿಳೆಯರ ಕೊಡುಗೆ ಶೇ ೨೮% ಇತ್ತು. ೧೯೭೧ರಲ್ಲಿ ಅದು ಶೇಕಡಾ ೧೪.೨ಕ್ಕೆ ಇಳಿಯಿತು. ೧೯೮೧ರಲ್ಲಿ ಅದು ಶೇಕಡಾ ೨೦.೮೫ ಇದ್ದಿತು. ೨೦ ವರ್ಷಗಳ ಯೋಜನಾ ಅವಧಿಯಲ್ಲಿ ಮಹಿಳಾ ಜನಸಂಖ್ಯೆ ಶೇಕಡಾ ೫೫ರಷ್ಟು ಮಾತ್ರ ಏರಿದೆ. ಆದರೆ ದುಡಿಮೆ ಕ್ಷೇತ್ರದಲ್ಲಿ ಮಹಿಳೆಯರ ಸಂಖ್ಯೆ ಇಳಿಮುಖಕ್ಕೆ ಕೆಲವು ಕಾರಣಗಳನ್ನು ಗುರುತಿಸಬಹುದು.

ಅ) ಜನಸಂಖ್ಯೆ ಏರಿಕೆ ಪ್ರಮಾಣ ಸಮಾನವಾಗಿಲ್ಲ. ಅಂದರೆ ಪುರುಷರ ಸಂಖ್ಯೆಯ ಏರಿಕೆಯ ಪ್ರಮಾಣದಲ್ಲಿ ಸ್ತ್ರೀಯರ ಸಂಖ್ಯೆ ಏರುತ್ತಿಲ್ಲ.

ಆ) ಸ್ತ್ರೀ ಪುರುಷರಲ್ಲಿ ಅಕ್ಷರಸ್ಥರ ಪ್ರಮಾಣದ ಅಂತರ ಹೆಚ್ಚುತ್ತಲೇ ಇದೆ.

ಇಂಥ ನಿರಾಶದಾಯಕ ಅಂಕಿ ಅಂಶಗಳ ಮಧ್ಯೆಯೂ ಒಂದು ಗಮನಾರ್ಹ ಅಂಶವೆಂದರೆ ಪ್ರಮಾಣದ ದೃಷ್ಟಿಯಿಂದ ಮಹಿಳಾ ಉದ್ಯೋಗಿಗಳ ಸಂಖ್ಯೆದ ಇಳಿಮುಖವಾಗುತ್ತಿದ್ದರೂ ಅವರ ಗುಣಮಟ್ಟ ಗಮನಿಸಿದಾಗ ಮಹಿಳೆಯರ ದುಡಿಮೆಯ ಕ್ಷೇತ್ರ ವಿಸ್ತಾರಗೊಂಡಿದೆ. ಮಹಿಳೆ ಇಂದು ಎಲ್ಲಾ ರಂಗಗಳಲ್ಲಿಯೂ ದುಡಿಯುತ್ತಿದ್ದಾಳೆ. ಸಾಮಾನ್ಯವಾದ ವೈದ್ಯಕೀಯ, ನರ್ಸಿಂಗ್, ಶಿಕ್ಷಣ ಆಡಳಿತದಂಥ ಕ್ಷೇತ್ರಗಳ ಜೊತೆಗೆ ಸಾಂಪ್ರದಾಯಕವಲ್ಲದ ಜಾಹಿರಾತು, ಸಾರ್ವಜನಿಕ ಸಂಪರ್ಕ, ಪತ್ರಿಕೋದ್ಯಮ, ನಾಗರೀಕ ವಿಮಾನಯಾನ, ಇಂಜಿನಿಯರಿಂಗ್, ವಿಜ್ಞಾನ ಮುಂತಾದ ಕ್ಷೇತ್ರಗಳಲ್ಲಿ ಮಹಿಳೆಯರ ಸಂಖ್ಯೆ ಗಮನಾರ್ಹವಾಗಿ ಏರಿದೆ. ಆದರೆ ಸಾಂಪ್ರದಾಯಕವಲ್ಲದ ಕ್ಷೇತ್ರವನ್ನು ಪ್ರವೇಶಿಸುವ ಮಹಿಳೆ ಅನೇಕ ಬಾರಿ ಸಂಘರ್ಷ ತಾಳಲಾರದೇ ಮಹಿಳೆ ಯಾವುದೋ ಒಂದು ಉದ್ಯೋಗ ಹಿಡಿದು, ಸಮರ್ಥ ಇಂಜೀನಿಯರ್ ಆಗುವ ಬದಲು ಅಸಮರ್ಥ ಶಿಕ್ಷಕಿಯಾಗಿಬಿಡುತ್ತಾಳೆ. ಇನ್ನೂ ಕೆಲವರು ಹತಾಶರಾಗಿ ವೈವಾಹಿಕ ಜೀವನಕ್ಕಷ್ಟೇ ಮೊರೆಹೋಗುತ್ತಾರೆ.

ಭಾರತೀಯ ಮಹಿಳೆಯ ಬದುಕಿನಲ್ಲಿ ಉದ್ಯೋಗ ಎರಡನೇ ಸ್ಥಾನವನ್ನು ಪಡೆದುಕೊಳ್ಳಬೇಕಾಗಿದೆ. ವಿವಾಹಿತಳ ಸ್ಥಾನಮಾನದಲ್ಲಿ ಉದ್ಯೋಗದಿಂದಾಗಿ ಸ್ವಲ್ಪ ಬದಲಾವಣೆ ಕಾಣಬಹುದು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮಹಿಳೆಯರೂ ಪಾಲ್ಗೊಳ್ಳುವಂತೆ ಮಾಡಿದ್ದ ಮಹಾತ್ಮ ಗಾಂಧೀಜಿಯವರೂ ಕೂಡ ಮಹಿಳಾ ಉದ್ಯೋಗದ ಬಗೆಗೆ ಸಾಂಪ್ರದಾಯಿಕ ಅಭಿಪ್ರಾಯಗಳನ್ನೇ ಇರಿಸಿಕೊಂಡಿದ್ದರೂ, ಮಹಿಳೆಯು ತನ್ನ ಶಿಕ್ಷಕಿ ಹುದ್ದೆ ಕೂಡ ಮಹಿಳೆಯ ಪತ್ನಿ ಮತ್ತು ತಾಯಿ ಪಾತ್ರಕ್ಕೆ ಅಡ್ಡಿ ಉಂಟು ಮಾಡಬಹುದು. ಆಗಿರುವಾಗ ರಾತ್ರಿಪಾಳಿ ಮಾಡುವ ಟೆಲಿಫೋನ್ ಆಪರೇಟರ್. ಪತ್ರಕರ್ತೆ, ಮಹಿಳಾ ಪೊಲೀಸ್‌ರಂತಹ ಪಾತ್ರಗಳು ಕುಟುಂಬಗಳಿಂದ ಬಹಳಷ್ಟು ಹೊಂದಾಣಿಕೆಯನ್ನು

ಅಪೇಕ್ಷಿಸುತ್ತವೆ. ಒಬ್ಬ ಪುರುಷ ಆರಿಸಿಕೊಳ್ಳುವ ಉದ್ಯೋಗದ ಬಗ್ಗೆ ಕುಟುಂಬ ಚಕಾರ ಎತ್ತುವುದಿಲ್ಲ. ಅದೇ ಮಹಿಳೆಯ ಸಂದರ್ಭದಲ್ಲಿ ಎಂತಹ ಕೆಲಸಕ್ಕೆ ತರಬೇತಿ ಪಡೆಯಬೇಕು, ಎಷ್ಟು ಕೆಲಸಕ್ಕೆ ಯಾವ ಸಂಸ್ಥೆ ಸೇರಬೇಕು, ಉದ್ಯೋಗ ಬದಲಾವಣೆ ಯಾವಾಗ ಮತ್ತು ಹೇಗೆ ಮಾಡಬೇಕು, ಇತ್ಯಾದಿಗಳೆಲ್ಲವನ್ನೂ ಬಹಳಷ್ಟು ಬಾರಿ ಕುಟುಂಬವೇ ನಿರ್ಧರಿಸುತ್ತದೆ. ಸ್ತ್ರೀಯರ ವೈಯಕ್ತಿಕ ಆಯ್ಕೆಗೆ ಸ್ವಾತಂತ್ರ್ಯ ಕಡಿಮೆ.

ದುಡಿಯುವ ಮಹಿಳೆಗೆ ಅನೇಕ ಮಾನಸಿಕ ಒತ್ತಡಗಳನ್ನು ಹೇರಲಾಗುತ್ತದೆ. ಮಕ್ಕಳನ್ನು ಮನೆಯಲ್ಲಿ ಒಟ್ಟು ಕೆಲಸಕ್ಕೆ ಹೋಗುವ ಮಹಿಳೆಯರ ಮನಸ್ಸಿನಲ್ಲಿ ಅಪರಾಧ ಭಾವನೆ ಬಿತ್ತುವುದು ಅದರಲ್ಲಿ ಒಂದು ಮಗುವಿನ ಮಾನಸಿಕ ಬೆಳವಣಿಗೆಗೆ ತಾಯಿಯ ಪ್ರೀತಿ ಹಾಗೂ ಸತತ ಆರೈಕೆ ಅತ್ಯಗತ್ಯ ಎಂದು ವಿಶ್ವ ಆರೋಗ್ಯ ಸಂಸ್ಥೆ ಅರವತ್ತರ ದಶಕದಲ್ಲಿ ನೀಡಿದ ತನ್ನ ವರದಿಯೊಂದರಲ್ಲಿ ತಿಳಿಸಿತ್ತು. ಆದರೆ ಇಂದಿನ ವರದಿಗಳು ಅದಕ್ಕೆ ವಿರುದ್ಧವಾಗಿವೆ. ಉದ್ಯೋಗಸ್ಥ ಮಹಿಳೆಯರ ಮಕ್ಕಳು ಹೆಚ್ಚು ಸ್ವತಂತ್ರರಾಗಿ ಹಾಗೂ ಚುರುಕಾಗಿ ಬೆಳೆಯುತ್ತಾರೆ ಎಂಬುದು ಇಂದಿನ ವಾದವಾಗಿದೆ. ತಾಯಿ ಇಲ್ಲದಿದ್ದರೆ ಮಗು ದೈಹಿಕ ಹಾಗೂ ಮಾನಸಿಕವಾಗಿ ಬಳಲುತ್ತದೆ ಎಂಬ ಅಂಶವನ್ನು ಭಾರತೀಯ ತಾಯಿಯರ ಬಿತ್ತಿಬಿಡಲಾಗುತ್ತದೆ. ಇದರಿಂದಾಗಿ ಎಷ್ಟೋ ದುಡಿಯುವ ತಾಯಂದಿರು ತಮ್ಮ ಆಸಕ್ತಿದಾಯಕ ಹುದ್ದೆ ತೊರೆದು ಮನೆ ಬಳಿಯ ಕಡಿಮೆ ವೇತನದ ಕೆಲಸವನ್ನು ಹಿಡಿಯುತ್ತಾರೆ.

೧೯೦೧ರ ಜನಗಣತಿ ಪ್ರಕಾರ, ರಾಷ್ಟ್ರದ ದುಡಿಮೆ ಶಕ್ತಿಯಲ್ಲಿ ಪ್ರತಿ ೧೦೦೦ ಪುರುಷರಿಗೆ ೫೨೫ ಮಹಿಳೆಯರಿದ್ದರು. ೧೯೭೧ರ ವೇಳೆಗೆ ಪ್ರತಿ ಸಾವಿರ ಪುರುಷರಿಗೆ ಕೇವಲ ೨೧೦ ಸ್ತ್ರೀಯರು ದುಡಿಮೆ ಕ್ಷೇತ್ರದಲ್ಲಿದ್ದರು. ವರಮಾನದ ದೃಷ್ಟಿಯಿಂದ ನೋಡಿದರೆ, ಕೃಷಿ ಕ್ಷೇತ್ರದಲ್ಲಿ ಮಹಿಳೆಯರಿಗೆ ಪುರುಷರ ವೇತನದಲ್ಲಿ ಶೇಕಡಾ ೪೦ ರಿಂದ ೬೦ರಷ್ಟು ಮಾತ್ರ ಕುಲಿ ದೊರೆಯುತ್ತಿದೆ ಎಂದು ಸರ್ಕಾರವೇ ಹೇಳಿದೆ. ಕಾಲ ಉರುಳಿದಂತೆ ಮಹಿಳೆಯರ ಕೂಲಿ ಹೆಚ್ಚುವ ಬದಲು ಕಡಿಮೆಯಾಗುತ್ತದೆ. ೧೯೬೪-೧೯೬೫ ಮತ್ತು ೧೯೭೪-೧೯೭೫ರ ಅವಧಿಯಲ್ಲಿ ಕೃಷಿ ಕ್ಷೇತ್ರದಲ್ಲಿ ಸ್ತ್ರೀ ಪುರುಷರ ವೇತನ ತಾರತಮ್ಯ ಶೇ ೫೦%ರಷ್ಟು ಹೆಚ್ಚಿತು. ಲಿಂಗದ ಆಧಾರದ ಮೇಲೆ ಕೆಲಸಗಳ ಪ್ರತ್ಯೇಕಿಕರಣ ಹಾಗೂ ಕೂಲಿ ತಾರತಮ್ಯಗಳು ಕಂಡುಬರುತ್ತಿವೆ. ಸಮಾನ ಕೆಲಸಕ್ಕೆ ಸಮಾನ ವೇತನ ಕನಿಷ್ಟ ವೇತನ ಕಾಯಿದೆಗಳಿದ್ದರೂ ಈ ತಾರತಮ್ಯ ಕಂಡುಬರುತ್ತದೆ. ಒಂದೇ ರೀತಿಯ ಕೆಲಸಕ್ಕೆ ಇಬ್ಬರು ವ್ಯಕ್ತಿಗಳಿಗೆ ಬೇರೆ-ಬೇರೆ ಕೂಲಿಯನ್ನು ನೀಡುವುದಕ್ಕೆ ವೇತನ ತಾರತಮ್ಯ ಎನ್ನುತ್ತಾರೆ. ಒಂದೇ ರೀತಿಯ ಕೆಲಸಕ್ಕೆ ಇಬ್ಬರು ವ್ಯಕ್ತಿಗಳಿಗೆ ಬೇರೆ-ಬೇರೆ ಕೂಲಿಯನ್ನು ನೀಡುವುದಕ್ಕೆ ವೇತನ ತಾರತಮ್ಯ ಎನ್ನುತ್ತಾರೆ. ಲಿಂಗದ ಆಧಾರದ ಮೇಲೆ ಸ್ತ್ರೀ ಪುರುಷರು ಮಾಡುವ ಒಂದೇ ರೀತಿಯ ಅಥವಾ ಬೇರೆ-ಬೇರೆ ಕೆಲಸಗಳಿಗೆ ಪುರುಷರಿಗೆ ಹೆಚ್ಚು ಹಾಗೂ ಸ್ತ್ರೀಯರಿಗೆ ಕಡಿಮೆ ಕೂಲಿ ನೀಡುವುದು ವೇತನ ತಾರತಮ್ಯ. ೧೯೮೧ರ ಜನಗಣತಿ

ಪ್ರಕಾರ ದುಡಿಯುವ ಮಹಿಳೆಯರ ಒಟ್ಟು ಸಂಖ್ಯೆಯಲ್ಲಿ ಶೇಕಡಾ ೬% ರಷ್ಟು ಮಂದಿ ಅಸಂಘಟಿತ ಕ್ಷೇತ್ರದಲ್ಲಿ ದುಡಿಯುತ್ತಿದ್ದರು. ೧೯೭೬ರಲ್ಲಿ ಸಮಾನ ವೇತನ ಕಾನೂನು ಜಾರಿಗೆ ಬಂದರೂ ಇಬ್ಬರ ವೇತನದಲ್ಲಿ ಇಂದಿಗೂ ಸಮಾನತೆ ಇಲ್ಲ. ಮಹಿಳೆ ದುಡಿಮೆ ಕ್ಷೇತ್ರ ಪ್ರವೇಶಿಸಲು ಹೆಚ್ಚು ಕಮ್ಮಿ ಆರ್ಥಿಕ ಪರಿಸ್ಥಿತಿಯೇ ಕಾರಣ. ಕುಟುಂಬದ ಇಡೀ ವೆಚ್ಚದ ನಿರ್ವಹಣೆ ಗಂಡಸಿನದೇ ಆಗಿತ್ತು. ಆದರೆ ಕುಟುಂಬ ಪೋಷಣೆಯ ಹೊಣೆ ಇಂದು ಒಬ್ಬನಿಂದ ಕಷ್ಟ ಸಾಧ್ಯವಾಗಿದೆ. ಆರ್ಥಿಕ ಸ್ಥಿತಿಯೇ ಅದಕ್ಕೆ ಕಾರಣ. ಈ ಹಿನ್ನೆಲೆಯಲ್ಲಿ ತಮ್ಮ ಹೆಂಡತಿ ಉದ್ಯೋಗ ಸ್ಥಳಾಗುವುದು ಅವರಿಗೆ ಬೇಕಾಗಿದೆ. ಆದರೂ ಉದ್ಯೋಗಸ್ಥ ಮಡದಿಯರ ಗಂಡಂದಿರು ಸಾಕಷ್ಟು ಮಾನಸಿಕ ಒತ್ತಡಗಳಿಗೆ ಗುರಿಯಾಗಿತ್ತಾರೆ. ಮನಶಾಸ್ತ್ರಜ್ಞ ಡಾ॥ಜೋಷಿ ವತ್ಸ ಅವರ ಸಮೀಕ್ಷೆಯ ಪ್ರಕಾರ ದುಡಿಯುವ ಮಹಿಳೆಯರ ಗಂಡಂದಿರ ಮಾನಸಿಕ ಒತ್ತಡಕ್ಕೆ ಕಾರಣಗಳು, ದುಡಿಯುವ ಕ್ಷೇತ್ರದಲ್ಲಿ ತಮ್ಮ ಪತ್ನಿ ಪುರಷ ಸಹೋದ್ಯೋಗಿಗಳ ಜೊತೆ ವ್ಯವಹರಿಸಬೇಕಾಗುವುದು ಹೆಂಡತಿ ತಮಗಿಂತ ಉತ್ತಮಸ್ಥಾನ ಹೊಂದಿರುವುದು ಹಾಗೂ ಪತ್ನಿ ಹೆಚ್ಚು ಸಂಪಾದಿಸುವುದು ಇವೇ ಆಗಿವೆ.

ಸುಶಿಕ್ಷಿತ ಮಧ್ಯಮ ವರ್ಗದ ದುಡಿಯುವ ಮಹಿಳೆಯರು ತಮ್ಮ ಜವಬ್ದಾರಿಗಳಿಂದ ದೂರವಿದ್ದಾರೆ. ಹಿಂದಿನವರ ಹೋರಾಟದ ಫಲವನ್ನು ಅನುಭವಿಸುತ್ತಿರುವ ಮಹಿಳೆಯರು ತಮ್ಮ ಹೋರಾಟದಿಂದ ದೊರಕಿಸಿಕೊಂಡ ಫಲಗಳನ್ನು ಉಳಿದ ಮಹಿಳೆಯರಿಗೂ ದೊರಕುವಂತೆ ಮಾಡಬೇಕಾದದ್ದು ಬಹಳ ಮುಖ್ಯ. ದುಡಿಮೆಯು ಹೆಣ್ಣಿನ ಮೂಲಭೂತ ಹಕ್ಕು ಎಂಬುದನ್ನು ಒಪ್ಪಿಕೊಂಡ ಮಹಿಳೆಯರು ಈ ಮೂಲಭೂತ ಹಕ್ಕಿನ ಬಗ್ಗೆ ಉಳಿದ ಮಹಿಳೆಯರೂ ಪ್ರಜ್ಞಾವಂತರಾಗಿ ಎಚ್ಚರಗೊಳ್ಳುವಂತೆ ಮಾಡಬೇಕಾದ ಕೆಲಸವನ್ನು ಕೈಗೆತ್ತಿಕೊಳ್ಳಬೇಕಾಗಿದೆ.

ಗ್ರಾಮೀಣ ಸಂಸ್ಕೃತಿಯ ಸಂದರ್ಭದಲ್ಲಿ ಹಿಂದೆ ಮನೆಯ ಕೆಲಸದೊಂದಿಗೆ ತಮ್ಮದೇ ಹೊಲಗಳಲ್ಲಿ ದುಡಿಯುತ್ತಿದ್ದ ಹೆಣ್ಣುಗಳನ್ನು ಕಾಣಬಹುದು. ಈಗಲೂ ಅಂತಹವರ ಸಂಖ್ಯೆ ವಿಪುಲವಾಗಿದೆ. ಅವರ ದುಡಿಮೆಗೆ ನಿರ್ದಿಷ್ಟ ಬೆಲೆಯಿದೆಯೆಂದು ಹೇಳಲಾಗದಿದ್ದರೂ, ಅಂತಹ ದುಡಿಮೆಗೆ ನಿರ್ದಿಷ್ಟ ಬೆಲೆಯಿದೆಯೆಂದು ಹೇಳಲಾಗದಿದ್ದರೂ, ಅಂತಹ ದುಡಿಮೆಯಿಂದ ಹೆಣ್ಣಿನ ಸ್ಥಾನಮಾನ ಉತ್ತಮವಾಗಿತ್ತು ಎಂದು ಊಹಿಸಬಹುದು.

ದುಡಿಮೆಯ ಅವಕಾಶ ದೊರೆತು ಅಡಿಗೆ ಮನೆಯಿಂದ ಹೊರಗೆ ಸ್ವಲ್ಪ ಕಾಲವಾದರೂ ಹೊರಬಂದ ಮಹಿಳೆ ತನ್ನ ಸಾಮರ್ಥ್ಯವನ್ನು ಸ್ಥಿರಪಡಿಸಬೇಕಾದ ಅಗತ್ಯ ಕಂಡು ಕೊಂಡಳು. **'ತೊಟ್ಟಿಲು ತೂಗುವ ಕೈ'** ಲೋಕದ ಸೂತ್ರವನ್ನು ಹಿಡಿಯಬಲ್ಲದು ಎನ್ನುವುದನ್ನು ಸ್ಥಿರಪಡಿಸುವ ಸಂಭ್ರಮದಲ್ಲಿ ಹೊರಗೆ ದುಡಿಯುತ್ತಲೇ ತೊಟ್ಟಿಲು ಸೌಟುಗಳಿಗೆ ಸರಿಯಾದ ನ್ಯಾಯ ದೊರಕಿಸಿಕೊಡಬೇಕೆಂಬ ಹಠ ಮತ್ತು ಹುಚ್ಚು ಹಂಬಲ ಹೆಣ್ಣಿನ ಹೊರೆಯನ್ನು ದ್ವಿಗುಣಗೊಳಿಸಿದೆ. ಆದರೆ ಇಂದು ದುಡಿಯುವ

ಮಹಿಳೆ ಈ ಎಲ್ಲ ಸ್ಥಿತ್ಯಂತರಗಳನ್ನು ದಾಟಿ ಶ್ರಮಶಕ್ತಿಯನ್ನು ಅವಳು ಯಾವ ರೀತಿ ವ್ಯಾಖ್ಯಾನಿಸಿಕೊಳ್ಳುತ್ತಾಳೆ ಮತ್ತು ತನ್ನನ್ನು ಯಾವ ರೀತಿ ಸಮರ್ಥಿಸಿಕೊಳ್ಳುತ್ತಾಳೆ ಹಾಗು ತನ್ನ ಸುತ್ತ ಹಬ್ಬಿರುವ ಪುರಾಣಗಳನ್ನು ಹೇಗೆ ಬಿಚ್ಚುತ್ತಾಳೆ, ಎಂಬುದೆ ಹೆಚ್ಚು ಸಕಾಲಿಕವೂ, ಮೌಲಿಕವೂ ಆದ ಪ್ರಶ್ನೆಯಾಗಿದೆ. ***"ಮಹಿಳೆಯರು ಸಾಮಾಜಿಕವಾಗಿ ಉತ್ಪನ್ನಕಾರಕ ದುಡಿಮೆಯಲ್ಲಿ ಪಾಲ್ಗೊಂಡು ಗೃಹಕೃತ್ಯದ ದಾಸ್ಯತನದಿಂದ ವಿಮೋಚನೆ ಹೊಂದುವಂತಾಗಬೇಕು ಮತ್ತು ಈ ಮಹಿಳೆಯರು ಅಡಿಗೆಯ, ತಾಯ್ತನದ ಮತ್ತು ದಾದಿಯ ಕೆಲಸದಲ್ಲಿ ಮರುಳಾಗಿ, ಅಪಮಾನಕ್ಕೆ ಗುರಿಯಾಗುವಂತಿದ್ದು, ನಿರಂತರ ದಾಸ್ಯಕ್ಕೆ ಒಳಪಟ್ಟು ಶಾಶ್ವತ ಗುಲಾಮ ಚಾಕರಿಯಿಂದ ಮುಕ್ತರಾಗಬೇಕಾದದ್ದು ಅತ್ಯವಶ್ಯಕ"*** ಎಂದ ಲೆನಿನ್‌ನ ಮಾತುಗಳು ಇಂದು ನಮಗೆ ಹೆಚ್ಚು-ಹೆಚ್ಚು ಕಾರ್ಯರೂಪಕ್ಕೆ ಅಗತ್ಯವಾದ ಸೂತ್ರವಾಗಿದೆ. ಖ್ಯಾತ ಸ್ತ್ರೀವಾದಿ ಗ್ಲೋರಿಯಾ ಸ್ಟಿಮ್‌ಳ ಮಾತುಗಳು ಈ ಕೆಳಗಿನ ಸಾಲುಗಳು ಮತ್ತೇ ಮತ್ತೇ ಮನಸ್ಸಿನಲ್ಲಿ ಅನುಕರಣನಗೊಳ್ಳಬೇಕಾದ್ದು ಇಂದಿನ ಸಕಾಲಿಕವಾಗಿದೆ: "ನಮ್ಮನ್ನು ಪೂರ್ಣಗೊಳಿಸಿಕೊಳ್ಳುವುದೇ ಈಗಿನ ಗುರಿ ಹೆಚ್ಚು ಪ್ರತಿಪಾದಿಸಿಕೊಳ್ಳುವುದರಲ್ಲಿ ಹೆಚ್ಚು ಮಹತ್ವಾಕಾಂಕ್ಷಿಯಾಗುವುದರಲ್ಲಿ ಸಂಘರ್ಷದ ಜೊತೆಗೆ ಶಿಕ್ಷಣ ಮತ್ತು ಉದ್ಯೋಗವಕಾಶಗಳು ಹೆಚ್ಚಾದವು. ಮಹಿಳೆಯರನ್ನು ಶಿಕ್ಷಣ ಮತ್ತು ತರಬೇತಿಗಳ ಮೂಲಕ ಅರ್ಹಗೊಳಿಸಲಾಗುತ್ತಿದೆ.

1. ಅಸಮಾನವೇತನ ನೀಡುವುದು ಇಂದು ಕಡಿಮೆಯಾಗಿದೆ.
2. ಪುರುಷರಿಗೆ ಸರಿಸಮಾನವಾದ ತರಬೇತಿ,ವೇತನ ಇಂದು ಬಾಹ್ಯಕಾಶಕ್ಕೂ ಸಹ ಪೈಪೋಟಿಯಿದೆ.
3. ಮಾರುಕಟ್ಟೆಯಲ್ಲಿ ಸ್ಪರ್ಧಿಸುವ ಅವಕಾಶ.
4. ಲಿಂಗವ್ಯವಸ್ಥೆಯ ತಾರತಮ್ಯ ನಿವಾರಣೆ.
5. ಇಂದು ಮಹಿಳೆ ಎಲ್ಲಾ ಕ್ಷೇತ್ರಗಳಲ್ಲಿಯೂ ಇದ್ದಾಳೆ. ಅಂದರೆ ಮಹಿಳೆ ಪ್ರವೇಶಿಸದ ಕ್ಷೇತ್ರವೇ ಇಲ್ಲ.

**ಹಕ್ಕುಗಳು**

ಭಾರತೀಯ ಸ್ತ್ರೀಯರ ಶೋಷಣೆ ತಪ್ಪಿಸಿ ಅವರಿಗೂ ಸಮಾನತೆ, ಸಾಮಾಜಿಕ ನ್ಯಾಯವನ್ನು ಒದಗಿಸಲು ಸ್ತ್ರೀಯರಿಗು ಹಕ್ಕುಗಳನ್ನು ನೀಡಲಾಗಿದೆ. ಪ್ರಪಂಚದ ಎಲ್ಲಾ ದೇಶಗಳಲ್ಲೂ ಮಾನವ ಸಮಾಜದ ಕಟ್ಟುಪಾಡು ನ್ಯಾಯ-ಶಾಸನ ಹಾಗೂ ಆಚಾರ-ವಿಚಾರಗಳು ಪುರುಷ ಪ್ರಧಾನವೆ ಆಗಿದೆ. ಮಾನವ ಇತಿಹಾಸದ ಮೂಲ ಕೇಂದ್ರವಾದ ಸ್ತ್ರೀ ಮಾತ್ರ ಇನ್ನು ತನ್ನ ಪರಿಧಿಯಿಂದ ಹೊರ ಬರಲು ಸಾಧ್ಯವಾಗಿಲ್ಲ, ಮಾನವ ಸಮಾಜದ ಅರ್ಧ ಭಾಗದಷ್ಟ ಸಂಖ್ಯೆಯಲ್ಲಿರುವ ಮಹಿಳೆಯರು ಇಂದು ಅಸಮಾನತೆ, ಅಜ್ಞಾನ, ಅವಿದ್ಯೆಯಿಂದಾಗಿ ಪುರುಷರ ಶೋಷಣೆ ಹಾಗೂ ಹಿಂಸಾಚಾರದ ಬಲಿಪಶುಗಳಾಗಿದ್ದಾರೆ. ಯಾವ ಸಮಾಜದಲ್ಲಿ ಮಹಿಳೆಯರಿಗೆ ಆರ್ಥಿಕ, ಸಾಮಾಜಿಕ ಹಾಗೂ ರಾಜಕೀಯ ಹಕ್ಕುಗಳಲ್ಲಿ ಪುರುಷರೊಂದಿಗೆ ಸಮಾನತೆ ಇರುವುದಿಲ್ಲವೋ ಅಂತಹ ಸಮಾಜ ರೋಗಗ್ರಸ್ಥವಾಗಿರುತ್ತದೆ. ಕಾನೂನು ಸಾಮಾಜಿಕ ಹಿಡುಗಗಳನ್ನು

ಬದಲಾವಣೆಗಳನ್ನು ತರಲು ಅವು ಖಂಡಿತ ನೆರವಾಗುತ್ತವೆ. ನಮ್ಮ ದೇಶದಲ್ಲಿ ಸ್ವಾತಂತ್ರೋತ್ತರ ಅವಧಿಯಲ್ಲಿ ಮಹಿಳೆಯರ ಅಭಿವೃದ್ಧಿ ಹಾಗು ಹಕ್ಕುಗಳನ್ನು ನೀಡುವಂತ ಕಾನೂನಗಳನ್ನು ರಚಿಸಲಾಗಿದೆ.

ವಿಶ್ವಸಂಸ್ಥೆಯ 'ವಿಶ್ವ ಮಾನವ' ಹಕ್ಕುಗಳ ಪ್ರಕಟಣೆಯ ಪ್ರಸ್ತಾಪನೆಯಲ್ಲಿ ಮಾನವನ ಹಕ್ಕುಗಳು ವ್ಯಕ್ತಿಯ ಘನತೆ ಮತ್ತು ಮೌಲ್ಯ ಹಾಗೂ ಸ್ತ್ರೀ ಪುರುಷರ ನಡುವೆ ಸಮಾನ ಹಕ್ಕುಗಳ ಬಗ್ಗೆ ಅಚಲ ನಂಬಿಕೆಯನ್ನು ವ್ಯಕ್ತಪಡಿಸಿದೆ. ಇದಕ್ಕಾಗಿ ಹನ್ನೊಂದು ಅನುಚ್ಛೇದಗಳನ್ನು ಉಪಬಂಧ ಮಹಿಳೆಯರ ವಿರುದ್ದ ಭೇದಭಾವ. ಪುರುಷರೊಂದಿಗೆ ಸಮಾನವಾಗಿ ಪರಿಗಣಿಸದಿರುವುದು ಅಥವಾ ಸೀಮಿತಗೊಳಿಸುವುದು ಮೂಲಭೂತ ಅನ್ಯಾಯವಾಗಿದ್ದು ವ್ಯಕ್ತಿಯ ಘನತೆಗೆ ಮಾಡಲಾದ ಅಪರಾಧವೆನ್ನಲಾಗಿದೆ. ಮಹಿಳಾ ತಾರತಮ್ಯದ ಎಲ್ಲಾ ಕಾನೂನು ರೂಢಿ-ನಿಯಮ ಪದ್ದತಿಗಳನ್ನು ಕೊನೆಗಾಣಿಸಿ ಸಮಾನ ಹಕ್ಕುಗಳಿಗಾಗಿ ರಕ್ಷಣೆ ಒದಗಿಸುವುದು ಅವುಗಳನ್ನು ಸಂವಿಧಾನ ಹಾಗೂ ಕಾನೂನು ಮೂಲಕ ಖಚಿತಪಡಿಸುವುದು.

೧) ಸಂವಿಧಾನದ ೧೪ನೇ ವಿಧಿಯ ಪ್ರಕಾರದಂತೆ ಸ್ತ್ರೀಯರನ್ನು ಒಳಗೊಂಡಂತೆ ಎಲ್ಲಾ ಭಾರತೀಯರಿಗೂ ಸಮಾನತೆ ಕೊಡುವುದು.

೨) ೧೫/೧೮ ವಿಧಿಯ ಪ್ರಕಾರ ಜಾತಿ, ಮತ ಪಂಥ, ಲಿಂಗ, ಜನ್ಮಸ್ಥಳ, ಇಂತಹ ಯಾವುದೇ ಪಕ್ಷಪಾತ ಮಾಡುವುದಿಲ್ಲ ಎಂಬ ಭರವಸೆ.

೩) ೧೫/೨ನೇ ವಿಧಿಯ ಪ್ರಕಾರ ಮಹಿಳೆ ಮತ್ತು ಮಕ್ಕಳ ಕಲ್ಯಾಣಾಭಿವೃದ್ಧಿ ದೃಷ್ಟಿಯಿಂದ ರಾಜ್ಯವು ವಿಶೇಷ ಏರ್ಪಾಡು ಮಾಡುವುದು.

೪) ೧೬ನೇ ವಿಧಿಯ ಪ್ರಕಾರ ಎಲ್ಲಾ ಸರ್ಕಾರಿ ಖಾಸಗಿ ಉದ್ಯೋಗಗಳಲ್ಲಿ ಸಮಾನ ಅವಕಾಶ ನೀಡುವುದು.

೫) ೩೯ನೇ ವಿಧಿಯ ಪ್ರಕಾರ ಎಲ್ಲಾ ಸ್ತ್ರೀ-ಪುರುಷರ ಬೇಧವಿಲ್ಲದೇ ಎಲ್ಲರ ಜೀವನಕ್ಕೆ ಅವಶ್ಯಕವಾದ ಸಾಧನಗಳನ್ನು ಒದಗಿಸುವುದು.

ಚುನಾವಣೆಗಳಲ್ಲಿ ಮತ ನೀಡುವುದು, ಚುನಾಯಿತರಾಗಲು ಅರ್ಹತೆ ನೀಡುವುದು ಪುರುಷನಂತೆ ರಾಷ್ಟ್ರೀಯತೆಯನ್ನು ಬದಲಿಸಿಕೊಳ್ಳುವುದು, ಆಸ್ತಿ ಹಕ್ಕು, ಸಮಾನ ವೇತನ, ರಜಾ ಹಕ್ಕು ಇವುಗಳನ್ನು ಹಾಗೂ ಇನ್ನೂ ಹಕ್ಕುಗಳನ್ನು ವಿವರಿಸಲಾಗಿದೆ.

ಇವೆಲ್ಲವುಗಳ ಬಗ್ಗೆ ಧೀರ್ಘ ಚರ್ಚೆ ಹಾಗೂ ಅವುಗಳ ಮೇಲೆ ಹಕ್ಕುಗಳನ್ನು ಚಲಾಯಿಸುವುದರಲ್ಲಿನ ತೊಡಕುಗಳು ಹಾಗೂ ಕಾನೂನುಗಳ ಅನುಪಾಲನೆಯ ಬಗ್ಗೆ ಅಧ್ಯಯನ ಅಗತ್ಯವಾಗಿದೆ.

ಜಗತ್ತಿನಾದ್ಯಂತ ೧೯೭೫ನೇ ವರ್ಷವನ್ನು ಅಂತರರಾಷ್ಟ್ರೀಯ ಮಹಿಳಾ ವರ್ಷವೆಂದು ಆಚರಿಸಲಾಯಿತಲ್ಲದೆ ವಿಶ್ವಸಂಸ್ಥೆಯ ೧೯೭೬ನೇ ವರ್ಷದಿಂದ ೧೯೮೫ರವರೆಗಿನ ಅವಧಿಯನ್ನು ಮಹಿಳಾ ದಶಕವೆಂದು ಸಾರಿತ್ತು.

೧೯೯೫ರ ಸೆಪ್ಟಂಬರ್ ೪ರಿಂದ ೧೫ರವರೆಗೆ ಬೀಜಿಂಗ್‌ನಲ್ಲಿ ನಡೆಸಲಾದ ನಾಲ್ಕನೇ ಅಂತರಾಷ್ಟ್ರೀಯ ಮಹಿಳಾ ಸಮಾವೇಶವನ್ನು ಮಹತ್ವಪೂರ್ಣ ಮೈಲಿಗಲ್ಲು ಎಂದು ಬಣ್ಣಿಸಲಾಯಿತು. ವಿಶ್ವವನ್ನು ಮಹಿಳಾ ದೃಷ್ಟಿಕೋನದಿಂದ ಅರ್ಥೈಸುವಂತಹ ಘೋಷಣೆ ಕೇಳಿ ಬಂದಿತು.

## ಭಾರತ ಸಂವಿಧಾನ ಮತ್ತು ಮಹಿಳೆ

**ಭಾರತದ ಸಂವಿಧಾನದ ಉದ್ದೇಶ ಹೀಗಿದೆ :-**

ನಮ್ಮ ದೇಶವನ್ನು ಸಾರ್ವಭೌಮ, ಸಮತಾವಾದ, ಜಾತ್ಯಾತೀತ, ಪ್ರಜಾಪ್ರಭುತ್ವ ಮತ್ತು ಗಣತಂತ್ರಿಯ ರಾಷ್ಟ್ರವನ್ನಾಗಿಸುವುದಲ್ಲದೆ ಅದರ ಸರ್ವ ಪ್ರಜೆಗಳಿಗೂ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯ, ವೈಚಾರಿಕ, ವಾಕ್, ನಂಬಿಕೆ, ಧರ್ಮಶ್ರದ್ಧೆ, ಮತ್ತು ಪೂಜಾ ಸ್ವಾತಂತ್ರ್ಯ ಸಮಾನ ಅವಕಾಶ ಮತ್ತು ಸ್ಥಾನಮಾನ ಹಾಗೂ ವ್ಯಕ್ತಿಯ ಘನತೆ ಮತ್ತು ರಾಷ್ಟ್ರದ ಐಕ್ಯತೆ ಮತ್ತು ಅಭ್ಯುಧೆಯತೆಯ ಭರವಸೆಯೊಂದಿಗೆ ಸಹಬಾತ್ರೃತ್ವವನ್ನು ದೊರಕಿಸಿಕೊಡುವುದು.

ಸಂವಿಧಾನದ ಈ ಉದ್ದೇಶಗಳನ್ನು ಕಾರ್ಯರೂಪಕ್ಕೆ ತರಲು ಅದರ ಮೂರನೇಯ ಭಾಗದಲ್ಲಿ ಮೂಲಭೂತ ಹಕ್ಕುಗಳನ್ನು ನಾಲ್ಕನೆಯ ಭಾಗದಲ್ಲಿ ರಾಜ್ಯ ನಿರ್ದೇಶನ ತತ್ವಗಳನ್ನು ಕಲ್ಪಿಸಲಾಗಿದೆ. ಯಾವುದೇ ಸರ್ಕಾರ, ಶಾಸಕಾಂಗ, ಸ್ಥಳೀಯ ಸಂಸ್ಥೆ, ಹಾಗೂ ಇತರ ಪ್ರಾಧಿಕಾರಗಳು ಮೂಲಭೂತ ಹಕ್ಕುಗಳ ಪಾಲನೆಯನ್ನು ಆಕ್ರಮವಾಗಿ ಉಲ್ಲಂಘಿಸಿದರೆ ಅಂತಹ ವ್ಯಕ್ತಿ ಸರ್ಕಾರ ಮುಂತಾದವುಗಳ ವಿರುದ್ಧ ಸಂವಿಧಾನದ ೩೨ನೇ ಅಡಿಯಲ್ಲಿ ಸರ್ವೋಚ್ಚ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ಪರಿಹಾರವನ್ನು ಪಡೆಯಬಹುದು. ಸಂವಿಧಾನದ ೩ ಮತ್ತು ೪ಎ ಭಾಗಗಳನ್ನು ಅವಲೋಕಿಸಿದಾಗ ಮಹಿಳೆಯರಿಗೆ ಪ್ರತ್ಯೇಕ ಮೂಲಭೂತ ಹಕ್ಕುಗಳನ್ನಾಗಲಿ, ಇತರ ಹಕ್ಕುಗಳನ್ನಾಗಲೀ ನಮೂದಿಸಿಲ್ಲವೆಂಬುದು ತಿಳಿಯುತ್ತದೆ. ಕೇವಲ ೬ ಸಂದರ್ಭಗಳಲ್ಲಿ ಮಾತ್ರ ಸ್ತ್ರೀಯರ ಬಗ್ಗೆ ಪುರುಷರು ಮತ್ತು ಮಕ್ಕಳೊಡನೆ ಉಲ್ಲೇಖಿಸಲಾಗಿದ್ದು, ಒಂದೇ ಸಲ ಎಂದರೇ ೪೨ನೇ ಅನುಚ್ಛೇದದಲ್ಲಿ ಪ್ರಸೂತಿ ರಜೆಯ ಬಗ್ಗೆ ಮಾತ್ರ ಮಹಿಳೆಯರನ್ನಷ್ಟೇ ಉಲ್ಲೇಖಿಸಲಾಗಿದೆ. ಇತರ ಸಂದರ್ಭಗಳಲ್ಲಿ ವ್ಯಕ್ತಿ, ಪ್ರಜೆ ಎಂಬ ಪದಗಳನ್ನು ಉಲ್ಲೇಖಿಸಲಾಗಿದೆ. ಈ ಪದಗಳ ಅರ್ಥವ್ಯಾಪ್ತಿಯಲ್ಲಿ ಸ್ತ್ರೀಯರನ್ನು ಸೇರಿಸಲಾಗಿದೆ.

ಭಾರತ ಸಂವಿಧಾನದ ೧೪ ರಿಂದ ೧೮ರವರೆಗಿನ ಅನುಚ್ಛೇದಗಳಲ್ಲಿ ಕಾನೂನಿನ ದೃಷ್ಟಿಯಿಂದ ಯಾರೇ ವ್ಯಕ್ತಿಯು (ಸ್ತ್ರೀ–ಪುರುಷ ಭಾರತದ ಪ್ರಜೆ ಅಥವಾ ವಿದೇಶಿಯ) ಭಾರತದ ರಾಜ್ಯ ಕ್ಷೇತ್ರದಲ್ಲಿ

ಸಮಾನವಾಗಿದ್ದು, ಕಾನೂನಿನ ಮೂಲಕ ಸಮಾನ ರಕ್ಷಣೆಯನ್ನು ಪಡೆಯುವ ಬಗ್ಗೆ ರಾಜ್ಯವು ಯಾರೇ ಒಬ್ಬ ನಾಗರೀಕನ ಅಥವಾ ನಾಗರೀಕಳ ವಿರುದ್ದ ಮತ ಜನಾಂಗ, ಜಾತಿ. ಲಿಂಗ ಜನ್ಮಸ್ಥಳಗಳಲ್ಲಿ ಅಥವಾ ಅವುಗಳ ಪೈಕಿ ಯಾವುದಾದರೊಂದು ಆಧಾರದ ಮೇಲೆ ತಾರತಮ್ಯ ಮಾಡಕೂಡದೆಂದು ತಿಳಿಸಲಾಗಿದೆ. ಅನುಚ್ಛೇದದಲ್ಲಿ ಮಹಿಳೆಯರು ಮತ್ತು ಮಕ್ಕಳಿಗಾಗಿ ವಿಶೇಷ ಉಪಬಂಧ ಕಲ್ಪಿಸಿಕೊಡುವುದಕ್ಕೆ ಸಮ್ಮತಿ ನೀಡಲಾಗಿದೆ.

ಏರ್ ಇಂಡಿಯಾ ವಿರುದ್ದ ನರ್ಗೇಶ್ ಮಿರ್ಜಾ ಮತ್ತು ವರ್ಷ ಮೀರಿದ ಮಹಿಳೆಯರನ್ನು ಕಡ್ಡಾಯವಾಗಿ ಸೇವೆಯಿಂದ ವಜಾ ಮಾಡುವುದಕ್ಕೆ ಸಂಬಂಧಪಟ್ಟ ವಿಷಯ ಚರ್ಚಿಸಲಾಗಿದೆ. ಈ ಸೇವೆಯಿಂದ, ಸೇವಾ ನಿಯಮಾವಳಿಯಲ್ಲಿ ಮಹಿಳೆಯರ ವಿವಾಹ ಗರ್ಭಧಾರಣೆ ಶಕ್ತಿ, ಸಾಮರ್ಥ್ಯದ ಬಗ್ಗೆ ಹಲವಾರು ಪ್ರಶ್ನೆಗಳನ್ನು ಎತ್ತಿದ್ದರಿಂದ ಸರ್ವೋಚ್ಚ ನ್ಯಾಯಾಲಯವು ಈ ವಾದಗಳನ್ನು ಕಾಲ್ಪನಿಕ ಮತ್ತು ಊಹಾಪೋಹದವಾದವೆಂದು ತೀರ್ಮಾನಿಸಿ ೧೯೧೬ರ ಪ್ರಸೂತಿ ಸೌಲಭ್ಯ ಮತ್ತು ಅಧಿನಿಯಮದ ಅನುಸಾರ ಉದ್ಯೋಗಸ್ಥ ಮಹಿಳೆ ಸೇವೆಯಲ್ಲಿ ಮುಂದುವರೆಯಲು ತಾಯ್ತನದ ಸೌಲಭ್ಯಗಳನ್ನು ರಜೆಯನ್ನು ಹಾಗೂ ಅಧಿನಿಯಮದಡಿ ಇನ್ನಿತರ ಸೌಲಭ್ಯಗಳನ್ನು ಪಡೆಯಲು ಹಕ್ಕುಳ್ಳವಳಾಗಿರುತ್ತಾಳೆಂದು ತೀರ್ಪು ನೀಡಿತು.

**ಮಹಿಳೆ ಮತ್ತು ಕಾರ್ಮಿಕರ ಕಾನೂನುಗಳು**

ಅಸಂಖ್ಯಾತ ಮಹಿಳೆಯರು ಸೆಣಬು, ಜವಳಿ, ಗಣಿ, ಪ್ಲಾಂಟೇಷನ್‌ಗಳಲ್ಲಿ ಪುರುಷರಿಗೆ ಸಮಾನವಾಗಿ ಅಥವಾ ಇನ್ನು ಹೆಚ್ಚು ಕಷ್ಟಕರ ಪರಿಸ್ಥಿತಿಯಲ್ಲಿ ಕೆಲಸ ಮಾಡುತ್ತಿದ್ದಾರೆ. ಅಲ್ಲದೆ ವಿವಿಧ ಅಸಂಘಟಿತ ವಲಯದ ಕಾರ್ಖಾನೆಗಳಲ್ಲಿ ಬೀಡಿ, ಊದುಬತ್ತಿ, ರಾಸಾಯನಿಕ ವಸ್ತುಗಳು, ಪಟಾಕಿ, ಇತ್ಯಾದಿ, ದುಡಿಯುವ ಮಹಿಳೆಯರಿಗೆ ಹಲವು ಹನ್ನೊಂದು ಸಂಕಷ್ಟಗಳು ಎದುರಾಗುತ್ತಿವೆ. ಇವುಗಳ ಪರಿಹಾರಕ್ಕೆಂದು ಅನೇಕ ವಿಶೇಷ ಉಪಬಂಧಗಳನ್ನು ಕಲ್ಪಿಸಲಾಗಿದೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಸೂಚಿಸಲಾಗಿದೆ.

೧) ಕಾರ್ಖಾನೆಗಳ ಅಧಿನಿಯಮ, ೧೯೪೮

(ಅಪಾಯಕಾರಿ ಕಾರ್ಯಚರಣೆಗಳಲ್ಲಿ ಮಹಿಳೆಯರನ್ನು ತೊಡಗಿಸದಿರುವುದು)

೨) ಗಣಿಗಳ ಅಧಿನಿಯಮ ೧೯೫೨ ಮತ್ತು ಬೀಡಿ, ಸಿಗರೇಟ್ ಕಾರ್ಮಿಕರ (ನೌಕರಿ ಪರಿಸ್ಥಿತಿ) ಅಧಿನಿಯಮ, ೧೯೬೬ಗಳಲ್ಲಿ ಮಹಿಳಾ ಕಾರ್ಮಿಕರು ಸಂಜೆ ೭ ಗಂಟೆಯಿಂದ ಬೆಳಗ್ಗೆ ೬ ಗಂಟೆಯವರೆಗೆ ಹಾಗೂ ರಾತ್ರಿ ಹತ್ತರಿಂದ ಬೆಳಿಗ್ಗೆ ಐದು ಗಂಟೆಯ ಕೆಲಸ ಮಾಡದಿರುವಂತೆ ಉಪಬಂಧಿಸಲಾಗಿದೆ. ಹಾಗೂ ಶೌಚಾಲಯ, ಮಕ್ಕಳ ಪಾಲನಾ ಕೇಂದ್ರ, ಆರಾಮ ಕೊಠಡಿಗಳನ್ನು ಒದಗಿಸುವ ಬಗ್ಗೆ ಕೂಡ ಉಪಬಂಧ ಕಲ್ಪಿಸಲಾಗಿದೆ.

೩) ಪ್ರಸೂತಿ ಸೌಲಭ್ಯ ಅಧಿನಿಯಮ–೧೯೬೧

೪) ಸಮಾನ ವೇತನ ಅಧಿನಿಯಮ -೧೯೭೬.

೫) ನೌಕರರ ಕಷ್ಟ ಪರಿಹಾರ ಅಧಿನಿಯಮ -೧೯೨೩

೬) ಔದ್ಯಮಿಕ ವಿವಾದಗಳ ಅಧಿನಿಯಮ -೧೯೪೭

೭) ಕನಿಷ್ಠ ಮಂಜೂರಿ ಅಧಿನಿಯಮ-೧೯೪೮

೮) ನೌಕರರ ರಾಜ್ಯ ವಿಮಾ ಅಧಿನಿಯಮ-೧೯೪೮

೯) ನೌಕರರ ಭವಿಷ್ಯ ನಿಧಿ ಹಾಗೂ ಸಂಕೀರ್ಣ ಉಪಬಂಧಗಳ ಅಧಿನಿಯಮ. ೧೯೫೨ ಇತ್ಯಾದಿ.

**ಸಮಾಜ ಕಲ್ಯಾಣ ಶಾಸನಗಳು:-**

೧) ಶಿಶುವಿವಾಹ ಪ್ರತಿಬಂಧಕ ಅಧಿನಿಯಮ ೧೯೯೬ - (೧೯೭೮ರಲ್ಲಿ ತದ್ದುಪಡಿ)

೨) ಅನೈತಿಕ ವ್ಯವಹಾರ ನಿಷೇಧ ಅಧಿನಿಯಮ - ೧೯೫೬

೩) ವರದಕ್ಷಿಣೆ ನಿಷೇದ ಅಧಿನಿಯಮ - ೧೯೬೧

೪) ವೈದ್ಯಕೀಯ ಗರ್ಭಪಾತ ಅಧಿನಿಯಮ - ೧೯೭೨

೫) ಮಹಿಳೆಯರ ಅಸಭ್ಯ ಪ್ರದರ್ಶನ (ನಿಷೇಧ) ಅಧಿನಿಯಮ - ೧೯೮೬.

೬) ಸತಿ (ನಿಷೇಧ) ಅಧಿನಿಯಮ - ೧೯೮೭.

೭) ಲಿಂಗ ಪರೀಕ್ಷೆ ತಂತ್ರಗಳು (ನಿಯಂತ್ರಣ ಮತ್ತು ದುರುಪಯೋಗ ತಡೆಯುವುದು) ಅಧಿನಿಯಮ - ೧೯೯೪.

೮) ಗಣಿಗಳ ಅಧಿನಿಯಮ - ೧೯೬೨.

೯) ಮುಸ್ಲಿಂ ಮಹಿಳೆಯರ (ವಿವಾದ ವಿಚ್ಛೇದನ ಹಕ್ಕುಗಳ ರಕ್ಷಣೆ ) ಅಧಿನಿಯಮ -೧೯೮೬

೧೦) ಮಾನವ ಹಕ್ಕುಗಳ ಅಧಿನಿಯಮ -೧೯೯೩.

ಈ ಮೇಲ್ಕಂಡ ಎಲ್ಲಾ ಅಧಿನಿಯಮಗಳಲ್ಲಿ ಮಹಿಳೆಯರ ಸ್ಥಾನಮಾನ ಸ್ಥಿತಿಗತಿಗಳನ್ನು ಸುಧಾರಿಸುವ ಹಾಗೂ ಸಂವಿಧಾನವು ವೈಯಕ್ತಿಕ ಘನತೆಯನ್ನು ಸಮಾನ ಜೀವನವನ್ನು ಒದಗಿಸಲು ಉಪಬಂಧಗಳಿವೆ. ಎಲ್ಲಕಿಂತ ಮುಖ್ಯವಾಗಿ ಮಹಿಳೆಯರನ್ನು ವ್ಯಕ್ತಿತ್ವ ಹೀನರನ್ನಾಗಿನೋಡುವುದು, ದೃಷ್ಠಿಕೋನದ ಕಾಮಾಲೆ ರೋಗಕ್ಕೆ ಚಿಕಿತ್ಸೆಯಾದರೆ ಮಹಿಳೆಯ ಜೀವನ ತನ್ನಂತಾನೆ ಉತ್ತಮಗೊಂಡಿತು ಎಂದು ಹಲವು ಮಹಿಳೆಯರು ಉದ್ಗಾರ ತೆಗೆಯುತ್ತಾರೆ. ಅದು ಕಷ್ಟ ಸಾಧ್ಯವೆಂಬುದು ಅರಿವಿಗೆ ಬಂದಾಗ ಮಹಿಳೆ ತಾನೆ ಎಚ್ಚೆತ್ತುಕೊಂಡು ತನ್ನ ಅಸ್ಥಿತ್ವವನ್ನು ಸ್ವಯಂಪೂರ್ಣತೆಯನ್ನು ಸಾಧಿಸಲು ತಾನೇ ಸ್ವಾವಲಂಬಿಯಾಗಿರಬೇಕು ಎಂದರೆ ತನ್ನ ಸೌಲಭ್ಯಕ್ಕಾಗಿ ಇರುವುದನ್ನು ಅರಿತು ಹಕ್ಕುಸ್ಥಾಪನೆ ಮಾಡಬೇಕು, ಹೋರಾಡಬೇಕು ಎಂದಾದರೊಂದು ದಿನ ಜಯ ದೊರಕಿಸಿಜೊಳ್ಳುವ ಛಲ ಹೊಂದಿರಬೇಕು.

ಇದೇ ರೀತಿ ೧೦,೨೦,೨೧,೨೨,೨೩,೨೪,೨೫,೨೯.(೨)೩೮(೨)೨೯(ಎ)೪೨.೪೪.೪೫.೫೧.ಈ ಎಲ್ಲಾ ಅನುಚ್ಛೇದಗಳನ್ನು ವಿವರವಾಗಿ ವಿಶ್ಲೇಷಿಸಿದಾಗ ಸಂವಿಧಾನ ರಚನೆಯಲ್ಲಿ ಮೊದಲು ಮಹಿಳೆಯರಿಗೆ

ಲಭ್ಯವಿರದಿದ್ದ ಅನೇಕ ಹಕ್ಕುಗಳನ್ನು ಸಂವಿಧಾನವು ನಂತರದಲ್ಲಿ ಪ್ರಸ್ತುತ ಮಾಡಿರುವುದನ್ನು ಗಮನಿಸಬಹುದು.

**ವೈಯಕ್ತಿಕ ಕಾನೂನು ಹಾಗೂ ಮಹಿಳೆ**

ವ್ಯಕ್ತಿ ಜೀವನ ಕುಟುಂಬದೊಂದಿಗೆ ಆರಂಭವಾಗುತ್ತದೆ ಎಂದ ಮೇಲೆ ಕುಟುಂಬವೆಂದರೆ ರಕ್ತ ಸಂಬಂಧ ವಿವಾಹ, ದತ್ತತೆ ಮುಂತಾದವುಗಳ ಮೂಲಕ ಒಟ್ಟುಗೂಡಿದ ವ್ಯಕ್ತಿಗಳಿರುತ್ತಾರೆ.ಹೀಗಾಗಿ ವಿವಾಹ ಉತ್ತರಾಧಿಕಾರ, ಜೀವನಾಂಶ ಮಕ್ಕಳ ಪಾಲನೆ, ಅಪ್ರಾಪ್ತ ವಯಸ್ಕರು ಹಾಗೂ ಪಾಲಕರು ಮುಂತಾದ ವಿಷಯಗಳ ಬಗ್ಗೆ ಪ್ರತಿಯೊಂದು ಸಮಾಜ ಅಥವಾ ಸಮುದಾಯವು ಅದರದೇ ಆದ ಕಟ್ಟುಪಾಡು , ನಿಯಮಗಳನ್ನು ಹೊಂದಿರುತ್ತದೆ ಇದನ್ನೆ ವ್ಯಯಕ್ತಿಕ ಕಾನೂನು ಎಂದು ಕರೆಯಬಹುದು. ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಅವರು ಭಾರತದಲ್ಲಿ ರೂಢಿಯಲ್ಲಿದ್ದ ವ್ಯಯಕ್ತಿಕ ಕಾನೂನುಗಳನ್ನು ಬದಲಿಸುವ ಪ್ರಯತ್ನ ಮಾಡಲಿಲ್ಲ. ಆದರೆ ಭಾರತ ಸಂವಿಧಾನವು 44ನೇ ಅನುಚ್ಛೇದನದಲ್ಲಿ ಕೇಂದ್ರ ಸರ್ಕಾರದ ಅದರ ಸಮಸ್ತ ಪ್ರಜೆಗಳಿಗೂ ಏಕರೂಪ ನಾಗರೀಕ ಸಂಹಿತೆಯನ್ನು ಅನ್ವಯಿಸಬೇಕೆಂಬುದಾಗಿ ವಿಧಿಸಲಾಗಿದೆ. ಹಲವಾರು ಮೊಕದ್ದೊಮ್ಮೆಗಳ ಬಗ್ಗೆ ತೀರ್ಪು ನೀಡುವಾಗ ಸರ್ವೋಚ್ಚ ನ್ಯಾಯಾಲಯವು ಕೂಡ ಏಕರೂಪ ನಾಗರೀಕ ಸಂಹಿತೆಗಾಗಿ ಒತ್ತು ನೀಡದೆಯಾದರು ಈ ವರೆಗೆ ಅದನ್ನು ನಿರ್ದಿಷ್ಟವಾಗಿ ಜಾರಿಗೊಳಿಸಲು ಸಾದ್ಯವಿಲ್ಲ.

**ಸ್ವಾತಂತ್ರ್ಯೋತ್ತರ ಭಾರತದಲ್ಲಿ ಸುಮಾರು 1955 ರಲ್ಲಿ ಹಾಗೂ56ರಲ್ಲಿ ಹಿಂದೂಗಳಿಗೆ ಸಂಬಂಧಿಸಿದ ಅನೇಕ ಶಾಸನಗಳು ರಚನೆ ಯಾಗಿವೆ.**

| | | |
|---|---|---|
| ವಿಶೇಷ ವಿವಾಹ ಅಧಿನಿಯಮ | – | ೧೯೫೪ |
| ಹಿಂದೂ ವಿವಾಹ ಅಧಿನಿಯಮ | – | ೧೯೫೫ |
| ಹಿಂದೂ ಉತ್ತರಾಧಿಕಾರ ಅಧಿನಿಯಮ | – | ೧೯೫೬ |
| ಕುಟುಂಬ ನ್ಯಾಯಾಲಯಗಳ ಅಧಿನಿಯಮ | – | ೧೯೮೪ |

ಇಷ್ಟೆ ಅಲ್ಲದೆ ಮಹಿಳೆಯರ ವಿಕಾಸಕ್ಕೆಂದೆ ಭಾರತ ಸರ್ಕಾರವು ಅನೇಕ ಕ್ರಮಗಳನ್ನು ಕೈಗೊಂಡಿದೆ. ಅವು ಹೀಗಿವೆ. ತೊಂದರೆಗೀಡಾದ ಮಹಿಳೆಯರಿಗೆ ರಕ್ಷಣೆ ನೀಡಲೆಂದೇ ೧೯೬೯ರಲ್ಲಿ ಅಲ್ಪಾವಧಿ ಆಶ್ರಯ ಸೌಕರ್ಯವನ್ನು ಕಲ್ಪಿಸಿದೆ. ೧೯೮೭ರಲ್ಲಿ ತರಬೇತಿ ಹಾಗೂ ಉದ್ಯೋಗದ ಯೋಜನೆ ಜಾರಿಗೊಳಿಸಿದೆ. ಈ ಯೋಜನೆಗಳಲ್ಲದೆ ಇಂದಿರಾ ಮಹಿಳಾ ಯೋಜನೆಯಲ್ಲಿ ಅಲ್ಪಸ್ವಲ್ಪ ಬದಲಾವಣೆಗಳೊಂದಿಗೆ 'ಸ್ವಯಂಸಿದ್ದ' ಎಂಬ ಕಾರ್ಯಕ್ರಮವನ್ನು ಹಮ್ಮಿಕೊಂಡಿತು. ೧೯೯೮ ರಲ್ಲಿ ಸ್ತ್ರೀಶಕ್ತಿ ಎಂಬ ಕಾರ್ಯಕ್ರಮವನ್ನು ರಚಿಸಿ ಗ್ರಾಮಾಂತರ ಮಹಿಳೆಯರ ವಿಕಾಸಕ್ಕೆ ಅನುವು ಮಾಡಿಕೊಟ್ಟಿದೆ. ಅಲ್ಲದೆ ಬಾಲಿಕಾ ಸಮೃದ್ದಿ ಯೋಜನೆ ಲೈಂಗಿಕ ಹಿಂಸಾಚಾರದಿಂದ ರಕ್ಷಣೆ ರಾಷ್ಟ್ರೀಯ ಮಹಿಳಾ ವಿಮೋಚನೆ ಮುಂತಾದ ಕ್ರಮಗಳನ್ನು ಕೈಗೊಂಡಿದೆ ೨೦೦೧ ನೆಯ ವರ್ಷವನ್ನು ಮಹಿಳಾ ಸಬಲೀಕರಣ

ವರ್ಷವೆಂದೇ ಸಾರಿದೆ. ಕರ್ನಾಟಕದಲ್ಲಿ ಸ್ಥಳೀಯ ಸದಸ್ಯರ ಸ್ಥಾನದಲ್ಲಿ ಶೇಕಡ ೩೩. ಮಹಿಳೆಯರಿಗೆ ಮೀಸಲಾತಿ ಒದಗಿಸಿದೆ.

ಸಂವಿಧಾನದಲ್ಲಿ ಮಹಿಳೆಯರು , ಪುರುಷರು ಇಬ್ಬರ ನಡುವೆ ಅಸಮಾನತೆಯನ್ನು ಹೋಗಲಾಡಿಸಿ ಮಹಿಳೆಯರಿಗೂ ಮೂಲಭೂತ ಹಕ್ಕುಗಳನ್ನು ನೀಡಲಾಗಿದೆ. ಪ್ರತಿಯೊಂದು ಕ್ಷೇತ್ರದಲ್ಲೂ ಮಹಿಳೆಯರು ದುಡಿಯಲು ಮುಂದಾಗುತ್ತಿರುವಾಗ ಅವರಿಗೆ ಅವರದೇ ಹಕ್ಕು ಬಾಧ್ಯತೆಗಳನ್ನು ಒದಗಿಸಿಕೊಡಬೇಕು ಏಕೆಂದರೆ ಮಹಿಳೆಯರು ಸ್ವತಂತ್ರವಾಗಿ ಜೀವನ ಮಾಡಲು ಹಾಗೂ ದುಡಿಯುವ ಮಹಿಳೆಯರಿಗೆ ಯಾವುದೇ ಭಯವಿಲ್ಲದೆ ಕೆಲಸ ಮಾಡಲು ಸಾಧ್ಯವಾಗುತ್ತದೆ.

# ಅಧ್ಯಾಯ - 10
## ಉಪಸಂಹಾರ

ಲಿಂಗಸಮಾನತೆಗಾಗಿ ಮಹಿಳೆ ಚರಿತ್ರೆಯ ಉದ್ದಕ್ಕೂ ವ್ಯವಸ್ಥೆಯ ವಿರುದ್ಧ ನಡೆಸಿದ ಹೋರಾಟದ ದಾಖಲೆಗಳನ್ನು ಮತ್ತು ವರ್ತಮಾನದಲ್ಲಿ ಅವಳು ನಿಂತಿರುವ ನೆಲೆಯನ್ನು ಈ ನಿಬಂಧದಲ್ಲಿ ಸ್ಥೂಲವಾಗಿ ವಿವೇಚಿಸಲಾಗಿದೆ. ಆಧುನಿಕ ಯುಗದಲ್ಲಿ ಯೂರೋಪ್ ಮತ್ತು ಭಾರತದಲ್ಲಿ ನಡೆದ ಮಹಿಳಾಪರ ಹೋರಾಟಗಳು ಸ್ತ್ರೀಸಮಾನತೆಯನ್ನು ಕೇಳಿವೆಯೇ ಹೊರತು ಅವು ಎಂದಿಗೂ ಪುರುಷನಿಗಿಂತ ಅಧಿಕ ಸ್ಥಾನಮಾನಗಳು ಬೇಕೆಂದು ಹೋರಾಟ ನಡೆಸಿಲ್ಲ. ಸ್ತ್ರೀಪರ ಚಿಂತನೆಯು ಸದಾ ಲಿಂಗ ಸಮಾನತೆಯನ್ನು ಪ್ರತಿಪಾದಿಸಿದೆಯೇ ಹೊರತು ಸ್ತ್ರೀ ಪಾರಮ್ಯವನ್ನು ಪ್ರತಿಪಾದಿಸಿಲ್ಲ. 'ಲಿಂಗದಲ್ಲಿ ಯಾವುದು ಹೆಚ್ಚಲ್ಲ', ಯಾವುದೂ ಕಡಿಮೆಯಲ್ಲ, ಅವು ಸಮಾಸ ನೆಲೆಯಲ್ಲಿ ಪರಸ್ಪರ ಆತ್ಮಗೌರವದಿಂದ, ಹೊಂದಾಣಿಕೆಯಿಂದ ನಡೆದುಕೊಂಡು ಹೋದಾಗ ಮಾತ್ರ ಕುಟುಂಬ ವ್ಯವಸ್ಥೆ ಬಾಳಿ ಬದುಕುತ್ತದೆ. ತನ್ಮೂಲಕ ಒಂದು ಸಮುದಾಯ, ಒಂದು ಸಮಾಜ, ಒಂದು ದೇಶದ ಆಂತರಿಕ ಶಕ್ತಿ ಸತ್ವಯುತವಾಗಿ ಮೂಡುತ್ತದೆ ಎಂಬ ಸೈದ್ಧಾಂತಿಕ ನೆಲೆಯಲ್ಲಿ ಸ್ತ್ರೀಪರ ಚಿಂತನೆ ಕೆಲಸ ಮಾಡಿರುವುದನ್ನು ಈ ಅಧ್ಯಯನಲ್ಲಿ ಸೂಕ್ಷ್ಮವಾಗಿ ಗುರ್ತಿಸಬಹುದು. ಸ್ತ್ರೀಪರ ಚಿಂತನೆಯು ತನ್ನ ಹೋರಾಟದ ಹಾದಿಯಲ್ಲಿ ಎಲ್ಲಾ ಪುರುಷನನ್ನು ಹೊರಗಿಟ್ಟಿಲ್ಲ. ಸಮಾನ ಚಿಂತನೆಯು ಎಲ್ಲಾ ಪುರುಷರನ್ನು ತನ್ನ ಹೋರಾಟದಲ್ಲಿ ಭಾಗಿಗಳನ್ನಾಗಿಸಿಕೊಳ್ಳಲು ಯತ್ನಿಸಿದೆ. ಆ ಯತ್ನದಲ್ಲಿ ಅದು ಸಫಲವೂ ಆಗಿದೆ.

ಮಹಿಳಾ ಪರ ಚಿಂತನೆಯು ನೈಸರ್ಗಿಕ ನಿಯಮಗಳನ್ನು, ಪ್ರಕೃತಿ ಧರ್ಮವನ್ನು ತನ್ನ ಸಿದ್ದಾಂತಕ್ಕೆ ಮೂಲ ನೆಲೆಯನ್ನಾಗಿ ಸ್ವೀಕರಿಸಿದೆ. ಈ ಕಾರಣಕ್ಕಾಗಿಯೇ ಅದು ಎಂದೂ ಪುರುಷ ವಿರೋಧಿಯಾಗಲು ಸಾಧ್ಯವಾಗಿಲ್ಲ. ಚರಿತ್ರೆಯಲ್ಲಿ ಪುರುಷ ಮಾಡಿದ ತಪ್ಪನ್ನು ತಾನು ಮಾಡಬಾರದೆಂದು ಎಚ್ಚರಿಕೆಯನ್ನು ಅದು ವಹಿಸಿದೆ. ಆದ್ದರಿಂದಲೇ ಮಹಿಳಾ ಪರ ಹೋರಾಟವು ಕೇವಲ ಮಹಿಳೆಯರ ಹಕ್ಕುಗಳಿಗಾಗಿ ನಡೆಸುವ ಹೋರಾಟ ಮಾತ್ರವಾಗಿರದೇ ಅದು ಮಾನವತೆಯ ಪರವಾಗಿ ಸದಾ ದುಡಿಯುವ ಚಿಂತನೆಯು ಹೊರಹೊಮ್ಮಿದೆ.

ಕಳೆದ ಒಂದು ಶತಮಾನದಿಂದಲೂ ಸ್ತ್ರೀಪರ ಆಲೋಚನೆಗಳು ಜಗತ್ತಿನಲ್ಲಿ ಜಾಗೃತಿಯನ್ನುಂಟು ಮಾಡಲು ಪ್ರಯತ್ನಿಸಿವೆ. ಸರ್ಕಾರಗಳು ಕೂಡಾ ಸ್ತ್ರೀಯರ ಮೂಲಭೂತ ಹಕ್ಕುಗಳನ್ನು ಕಾಪಾಡಲು ನಿಯಮಗಳನ್ನು ರೂಪಿಸಿವೆ – ಕಾನೂನುಗಳನ್ನು ತಂದಿವೆ.
ದುಡಿಮೆಯ ಕ್ಷೇತ್ರದಲ್ಲಿ ಪುರುಷ ಪ್ರಾಧ್ಯಾನ್ಯತೆಯನ್ನು ಮಿತಗೊಳಿಸಲು ಸ್ತ್ರೀಯರಿಗೆ ವಿಶೇಷ ಮೀಸಲಾತಿ ಸೌಕರ್ಯಗಳನ್ನು ರೂಪಿಸಿವೆ. ಇಷ್ಟಾದರೂ ಚರಿತ್ರೆಯ ಉದ್ದಕ್ಕೂ ಮತಧರ್ಮಗಳು,

ಸಂಪ್ರದಾಯ ಆಚರಣೆಗಳು ಸ್ತ್ರೀಯರ ಸ್ಥಾನಮಾನಗಳನ್ನು ನಿಯಂತ್ರಿಸಿಕೊಂಡು ಬಂದುದರ ಕಾರಣದಿಂದಾಗಿ ಪುರುಷ ರೂಪಿತ ಮೌಲ್ಯಗಳ ಹಿಡಿತದಿಂದ ಸ್ತ್ರೀ ಸಂಪೂರ್ಣವಾಗಿ ಬಿಡಿಸಿಕೊಳ್ಳಲು ಸಾಧ್ಯವಾಗಿಲ್ಲ. ಪುರುಷರೂಪಿತ ಆಲೋಚನೆಗಳು ಮತ್ತು ಧೋರಣೆಗಳು ಇಂದಿಗೂ ನಮ್ಮ ಸಮಾಜವನ್ನು ಆಳುತ್ತಿವೆ. ಮತಧರ್ಮಗಳ ಆಲೋಚನೆಗಳು ಇಂದಿಗೂ ಸ್ತ್ರೀಯರ ನಡೆಯನ್ನು ನಿಯಂತ್ರಿಸುವಷ್ಟು ಶಕ್ತಿಯನ್ನು ಪಡೆದಿವೆ. ಈ ಕಾರಣಗಳಿಂದ ಮಹಿಳೆಯೂ ಸಮಾನತೆಗಾಗಿ ನಡೆಸುತ್ತಿರುವ ಹೋರಾಟವು ಮುಂದುವರೆಯುವುದು ಅನಿವಾರ್ಯವಾಗಿದೆ. ಲಿಂಗ ಅಸಮಾನತೆ ಇಲ್ಲದ ಸಮಸಮಾಜದ ಕಟ್ಟುವಿಕೆಯ ಸ್ತ್ರೀಪರ ಚಿಂತನೆಯ ಆದರ್ಶವಾಗಿರುವುದರಿಂದ ಈ ಹೋರಾಟ ನಿರಂತರವಾಗಿ ಮುಂದುವರಿಯಲೇಬೇಕಾಗುತ್ತದೆ.

# ಗ್ರಂಥ ಋಣ

**೧. ಮಹಿಳಾ ಅಧ್ಯಯನಗಳು : ಆರ್ಥಿಕ ನೆಲೆಗಳು ಮತ್ತು ಆಯಾಮಗಳು** – ಒಡೆಯರ್.ಡಿ.ಹೆಗ್ಗಡೆ
– ಎನ್.ಓ. ಅನ್ನಪೂರ್ಣೇಶ್ವರಿ

**ಪ್ರಕಾಶಕರು :**
ಮಾನವಾಭಿವೃದ್ಧಿ ಅಧ್ಯಯನಗಳ ಕೇಂದ್ರ,
ಶ್ರೀ ಅನ್ನಪೂರ್ಣೇಶ್ವರಿ ನಿಲಯ
೫ನೇ ಮುಖ್ಯರಸ್ತೆ. E ಅಂಡ್ f ಬ್ಲಾಕ್
ರಾಮಕೃಷ್ಣನಗರ, ಮೈಸೂರು–೨೨.

**೨. ಮಾತೃಪ್ರಧಾನ ಪರಿಕಲ್ಪನೆ** – ಡಾ.ಶೈಲಜ ಹಿರೇಮಠ
'ಪ್ರಸಾರಾಂಗ'

**ಪ್ರಕಾಶನ :**
ಕನ್ನಡ ವಿಶ್ವವಿದ್ಯಾನಿಲಯ.ಹಂಪಿ.
ಡಾ॥ ಹಿ.ಚಿ. ಬೋರಲಿಂಗಯ್ಯ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾನಿಲಯ ಹಂಪಿ
ವಿದ್ಯಾರಣ್ಯ, ೫೮೩೨೭೬

**೩. ಮಹಿಳೆ ಆರ್ಥಿಕತೆ ಮತ್ತು ಅಭಿವೃದ್ಧಿ** – ಟಿ.ಆರ್.ಚಂದ್ರಶೇಖರ್

**ಪ್ರಸಾರಾಂಗ :**
ಪ್ರೊ.ಎ.ವಿ.ನಾವಡ
ನಿರ್ದೇಶಕರು, ಪ್ರಾಸಾರಾಂಗ
ಕನ್ನಡ ವಿಶ್ವವಿದ್ಯಾಲಯ ಹಂಪಿ
ವಿದ್ಯಾರಣ್ಯ.

೪. ಸ್ತ್ರೀವಾದ ದಿಕ್ಸೂಚಿ – ಆರ್.ಇಂದಿರಾ
ಸಮತಾ ಅಧ್ಯಯನ ಕೇಂದ್ರ, ಮೈಸೂರು.
ಮುದ್ರಣ :
ರೆಡಿ ಪ್ರಿಂಟ್ಸ್
೨೯೦೭, ೩ನೇ ಮುಖ್ಯ ರಸ್ತೆ, ವಿ.ವಿ.ಮೊಹಲ್ಲಾ,
ಮೈಸೂರು– ೫೭೦೦೧.

೫. ಮಹಿಳೆಯರ ಸ್ಥಾನಮಾನ ಮತ್ತು ಸಂಘಟನೆ – ಬಾ.ಹ.ರಮಾಕುಮಾರಿ
ಪ್ರಥಮ ಮುದ್ರಣ:೨೦೦೬
ಕನ್ನಡ ಸಾಹಿತ್ಯ ಪರಿಷತ್ತು
ಪಂಪಮಹಾಕವಿ ರಸ್ತೆ, ಚಾಮರಾಜಪೇಟೆ,
ಬೆಂಗಳೂರು–೫೬೦೦೧೮.

೬. ಭಾರತೀಯ ನಾರಿ ಮತ್ತು ಸಮಾನತೆ – ಡಾ॥ಎಸ್.ಕೃಷ್ಣಮೂರ್ತಿ.ಐ.ಪಿ.ಎಸ್.
ಕುಲಸಚಿವ, ಬೆಂಗಳೂರು, ವಿಶ್ವವಿದ್ಯಾನಿಲಯ
ಐ.ಬಿ.ಎಚ್.ಪ್ರಕಾಶನ
ಗಾಂಧಿನಗರ ಬೆಂಗಳೂರು–೫೬೦೦೦೯
ಮೊದಲ ಮುದ್ರಣ–೧೯೮೪

೭. ಸಂಪುಟ ೧ ಸಂಚಿಕೆ ೨ ಜುಲೈ ೯೯
ಮಹಿಳಾ ಅಧ್ಯಯನ - ಹೆಚ್.ಎಸ್.ಶ್ರೀಮತಿ
ದಕ್ಷಿಣಾಯನ ಸಂಚಿಕೆ
ಪ್ರಸಾರಾಂಗ :
ಕನ್ನಡ ವಿಶ್ವವದ್ಯಾಲಯ ಹಂಪಿ
ವಿದ್ಯಾರಣ್ಯ
ಪ್ರಕಾಶಕರು:
ಪ್ರೊ॥ ಎ.ವಿ.ನಾವಡ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿದ್ಯಾರಣ್ಯ– ೫೮೩೨೭೬

ಪ್ರಧಾನ ಸಂಪಾದಕರು : ಡಾ||ಎಂ.ಎಂ.ಕಲ್ಬುರ್ಗಿ

ಸಲಹಾ ಸಮಿತಿ: ವಿಜಯಾ

ಡಾ.ಮಲ್ಲಿಕಾ ಘಂಟಿ.

ಸಹಾಯಕ ಸಂಪಾದಕರು : ಡಾ||ಎಂ.ಉಷಾ

ಡಾ||ಶೈಲಜಾ

೮. ಸಂಪುಟ ೨ ಸಂಚಿಕೆ ೧ ಜನವರಿನ ೩೦೦೦ ಮಹಿಳಾ ಅಧ್ಯಯನ, – ಡಾ.ಎಚ್. ಎಸ್.ಶ್ರೀಮತಿ

ಉತ್ತರಾಯಣ ಸಂಚಿಕೆ

**ಪ್ರಸಾರಾಂಗ :**

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ

೯. ಮಹಿಳಾ ಅಧ್ಯಯನ : ೨೦೦೧ – ಎಚ್. ಎಸ್.ಶ್ರೀಮತಿ

**ಪ್ರಸಾರಾಂಗ :**

ಕನ್ನಡ ವಿಶ್ವವಿದ್ಯಾಲಯ ಹಂಪಿ

**ಪ್ರಕಾಶಕರು :**

ಪ್ರಕಟಣಾ ವಿಭಾಗ, ಪ್ರಸಾರಾಂಗ

ಕನ್ನಡ ವಿಶ್ವವಿದ್ಯಾಲಯ ಹಂಪಿ

ವಿದ್ಯಾರಣ್ಯಾ: ೫೮೩೨೭೬

೧೦.ಮಹಿಳೆ ಸಮಾಜ ಮತ್ತು ಸಂಸ್ಕೃತಿ – ಡಾ.ಆರ್.ಇಂದಿರಾ – ೨೦೦೨

**ಪ್ರಸಾರಾಂಗ :**

ಕನ್ನಡ ವಿಶ್ವವಿದ್ಯಾಲಯ ಹಂಪಿ

ಕನ್ನಡ ಲೇಖಕಿಯರ ಸಂಘ

ಡಾ||ಟಿ.ಎನ್. ಸುಮಿತ್ರಬಾಯಿ

ಎಸ್.ಗಾಯಿತ್ರಿ

೧೧. ಸ್ತ್ರೀವಾದಿ ಪ್ರವೇಶಿಕೆ–ಮೇ ೧೯೯೫ – ಡಾ॥ಬಿ.ಎನ್.ಸುಮಿತ್ರಾಬಾಯಿ

ಎಸ್ ಗಾಯತ್ರಿ.

೧೨. ಮಹಿಳಾ ಚಳುವಳಿ

ಸಾಮಾಜಿಕ ಮತ್ತು ಸಾಂಸ್ಕೃತಿಕ ಹಿನ್ನಲೆ – ಡಾ॥ಹಾಲತಿ ಸೋಮಶೇಖರ್

ಮೌನ ಎಲ್ ೭೧ನೇಯ ತಿರುವು

೧ನೇಹಂತ, ಕುವೆಂಪುನಗರ,

ಮೈಸೂರು– ೫೭೦೦೨೩

ಮೊದಲ ಮುದ್ರಣ–೨೦೦೭.

೧೩.ಆಧುನಿಕ ಭಾರತದಲ್ಲಿ ಮಹಿಳೆ – ಡಾ.ಎಚ್.ಎಸ್.ಶ್ರೀಮತಿ

ಪ್ರಕಾಶಕರು :
ಪ್ರಕಟಣಾ ವಿಭಾಗ, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ–583276

೧೪.ಮಹಿಳೆ ಮತ್ತು ಸಮಾಜ – ಡಾ.ವಿಜಯಕುಮಾರಿ ಎಸ್.ಕರಿಕಲ್

ಪ್ರಕಾಶನ :

ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್

ನಿರ್ದೇಶಕರು,ಪ್ರಸಾರಾಂಗ

ಕನ್ನಡ ವಿಶ್ವವಿದ್ಯಾಲಯ ಹಂಪಿ

ವಿಧ್ಯಾರಣ್ಯ–೫೮೩೨೭೬.

೧೫. ವಿವಾಹ ಮತ್ತು ಕುಟುಂಬ – ಡಾ॥ ಕವಿತಾ ರೈ

ಪ್ರಕಾಶನ :

ಪ್ರೊ, ಮಲ್ಲೇಪುರಂ.ಜಿ.ವೆಂಕಟೇಶ್

ನಿರ್ದೇಶಕರು, ಪ್ರಸಾರಾಂಗ

ಕನ್ನಡ ವಿಶ್ವಾವಿದ್ಯಾಲಯ, ಹಂಪಿ

ವಿಧ್ಯಾರಣ್ಯ ೫೮೩೨೭೬.

**೧೬.ಮಹಿಳೆ ಮತ್ತು ದುಡಿಮೆ ಮಹಿಳಾಭಿವೃದ್ಧಿ ಕಾರ್ಯನೀತಿ**

**ಹಾಗೂ ಯೋಜನೆಗಳು** – ಡಾ॥ಹೇಮಲತಾ ಎಚ್.ಎಂ.

ಡಿ.ವಿ.ಕೆ. ಮೂರ್ತಿ

**ಪ್ರಕಾಶಕರು :** ಮೈಸೂರು ೪

**೧೭.ಮಹಿಳೆ ಬಿಡುಗಡೆಯ ಹಾದಿಯಲ್ಲಿ** – ಎನ್.ಗಾಯತ್ರಿ

**ಪ್ರಕಾಶಕರು :**

ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್

ಲಿಮಿಟೆಡ್

ಎಂ.ಬಿ.ಸಿ ಸೆಂಟರ್, ಕ್ರಿಸೆಂಟ್ ರಸ್ತೆ,

ಬೆಂಗಳೂರು–೫೬೦೦೦೧.

**೧೮.ಕನ್ನಡ ಸಾಹಿತ್ಯ ಮತ್ತು ಮಹಿಳೆ** – ಡಾ॥ ಸಬಿಹಾ ಭೂಮಿಗೌಡ

ಡಾ॥ ಮಲ್ಲಿಕಾಘಂಟಿ

**ಪ್ರಕಾಶಕರು :**

ವಿ.ಎನ್.ಮಲ್ಲಿಕಾರ್ಜುನ ಸ್ವಾಮಿ

ರಿಜಿಸ್ಟ್ರಾರ್

ಕರ್ನಾಟಕ ಸಾಹಿತ್ಯ ಅಕಾಡಮಿ

ಕನ್ನಡ ಭವನ, ಜೆ.ಸಿ.ರಸ್ತೆ

ಬೆಂಗಳೂರು–೫೬೦೦೦೨.

೧೯.ಮಹಿಳೆ ಮತ್ತು ಹಕ್ಕುಗಳು - ಜ್ಯೋತಿ ಶಶಿಕುಮಾರ್

೨೦.ಯುವಚಿಂತನೆ – ಡಾ.ಚಂಪಾಕಮಾಲಿನಿ

**ಸಂಚಿಕೆ :** ೧೯೯೭–೧೯೯೮

೨೧.ಮಹಿಳಾ ಸಾಮಾಜಿಕ – ಡಾ.ಜ್ಯೋತಿ ಶಶಿಕುಮಾರ್

**ಪ್ರಕಾಶನ :**

ಡಾ.ಹೆಚ್.ಎಸ್ ಶ್ರೀಮತಿ

ನಿರ್ದೇಶಕರು, ಮಹಿಳಾ ಅಧ್ಯಯನ ಕೇಂದ್ರ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ– ೫೮೩೨೭೬.

